# ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ)



ಸಂಶೋಧಕರು

ವರಾಜ ಪೂಜಾರ್

ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್

ಸಹ ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ - ೫೮೩ ೨೭೬



೨೦೧೧

# ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ)

ಸಂಶೋಧಕರು

**ಬಸವರಾಜ ಪೂಜಾರ್**

ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ. ನಾಗೇಶ್**

ಸಹ ಪ್ರಾಧ್ಯಾಪಕರು




ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೧೧

420

# ಪ್ರಮಾಣ ಪತ್ರ

**'ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು'** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು **ಡಾ. ಹೆಬ್ಬಾಲೆ ಕೆ. ನಾಗೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ, ಇತರೆ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

**(ಬಸವರಾಜ ಪೂಜಾರ್)**
**ಸಂಶೋಧಕ**

ದಿನಾಂಕ : 8.8.2011

ಸ್ಥಳ : ವಿದ್ಯಾರಣ್ಯ

ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ. ಹಂಪಿ
ವಿದ್ಯಾರಣ್ಯ

## ಮಾರ್ಗದರ್ಶಕರ ಪ್ರಮಾಣ ಪತ್ರ

**ಶ್ರೀ ಬಸವರಾಜ ಪೂಜಾರವರು 'ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಇವರು ಒಪ್ಪಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ. ಹೆಬ್ಬಾಲೆ ಕೆ. ನಾಗೇಶ್)**
ಸಹ ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ. ಹಂಪಿ
ವಿದ್ಯಾರಣ್ಯ

ದಿನಾಂಕ : 8-8-2011
ಸ್ಥಳ : ವಿದ್ಯಾರಣ್ಯ

# ಪರಿವಿಡಿ

ಕೊಪ್ಪಳ ಜಿಲ್ಲೆಯ ನಕಾಶ



# ಅಧ್ಯಾಯ ೧

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವಿಧಾನ

# ಅಧ್ಯಾಯ–೧

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವಿಧಾನ

ಸಾವಿರಾರು ವರ್ಷಗಳ ಸುದೀರ್ಘ ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ನಮ್ಮ ನಾಡು ಶರಣರ, ದಾಸರ, ಸಂತರ ನೆಲೆಯಾಗಿದೆ. ಇಂತಹ ಪರಂಪರೆಯಲ್ಲಿ ಅನೇಕ ಘಟನೆಗಳು ತಿಳಿದೋ ತಿಳಿಯದೆಯೋ ಘಟಿಸಿರುವುದನ್ನು ನಮ್ಮ ಚರಿತ್ರೆಯಲ್ಲಿ ಕಾಣಬಹುದಾಗಿದೆ. ಅವುಗಳಲ್ಲಿ ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಅಂಶಗಳು ಪ್ರಮುಖವಾದವುಗಳು. ಪ್ರತಿಯೊಂದು ಕಾಲಘಟ್ಟಗಳನ್ನು ಅವಲೋಕಿಸಿದಾಗ ಈ ಮೇಲಿನ ಅಂಶಗಳಲ್ಲಿ ಕಂಡುಬಂದ ಆಗುಹೋಗುಗಳೇ ಚರಿತ್ರೆಗೆ ಆಧಾರ ಒದಗಿಸುತ್ತವೆ. ಅಂದಿನ ದಿನಗಳಲ್ಲಿ ಕಂಡುಬರುವ ಲೋಪ–ದೋಷಗಳು ಇಂದಿನ ದಿನಗಳಲ್ಲಿ ಎಲ್ಲೆಡೆಯೂ ಕಾಣುತ್ತಿವೆ.

ಈ ಲೋಪ–ದೋಷಗಳಿಗೆ ಕಾರಣಗಳೇನು? ಅವುಗಳಲ್ಲಿ ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ವೈಜ್ಞಾನಿಕಗಳಂತಹ ಅಂಶಗಳು ಎಂಬುದನ್ನು ಗಮನಿಸಿದಾಗ ಒಂದೊಮ್ಮೆ ಧಾರ್ಮಿಕ ಉಜ್ವಲ ಸಂಸ್ಕೃತಿಯನ್ನು ಹೊಂದಿದ ನಮ್ಮ ದೇಶ ಇಂದೇಕೆ ಈ ಧಾರ್ಮಿಕ ಕಾರಣಗಳನ್ನು ಒಡ್ಡಿ ಸಮಾಜದ ಸ್ವಾಸ್ಥ್ಯ ಕೆಡಿಸುತ್ತಿದೆ? ಯಾವ ಕಾರಣಗಳು, ಯಾವ ಮನಸ್ಸುಗಳು, ಈ ಧಾರ್ಮಿಕ ತೊಳಲಾಟವನ್ನು ಸಮಾಜದ ಮೇಲೇರಿ ಇದನ್ನು ದಿಕ್ಕು ತಪ್ಪಿಸುತ್ತಿರುವ ಸಮಾಜವನ್ನು ಸರಿ ದಾರಿಗೆ ತರಲಾಗಿದೆ? ಈ ಹಿನ್ನೆಲೆಯಲ್ಲಿಯೇ ಈ ಅಧ್ಯಯನವು ರೂಪಗೊಂಡಿದೆ. "ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು" ಎಂಬ ವಿಷಯವನ್ನಾರಿಸಿಕೊಂಡು ಅದರ ಮಹತ್ವವನ್ನು ಇಲ್ಲಿ ಹಿಡಿದಿಡುವ ಅವಶ್ಯಕತೆ ಈ ಅಧ್ಯಯದಲ್ಲಿದೆ. ಕೋಮು ಸೌಹಾರ್ದತೆಯನ್ನು ಉಳಿಸಿ ಬೆಳೆಸುವ ತಾಣಗಳ ಕುರಿತಾದ ಅಧ್ಯಯನ ಮಾಡುವುದರಿಂದ ಆಧುನಿಕ ಜಗತ್ತಿನಲ್ಲಿಯೂ ಜಾತಿಬೇಧಗಳಿಂದ ವರ್ತಿಸುತ್ತಿರುವವರಿಗೆ ಐಕ್ಯತೆಯಿಂದ ಬಾಳುವುದು ಹೇಗೆ? ಎಂಬುದನ್ನು ಸಾಬಿತಪಡಿಸಿದಂತಾಗುತ್ತದೆ. ಸ್ವಾಸ್ಥ್ಯ ಸಮಾಜಕ್ಕೆ ಕೋಮು ಸೌಹಾರ್ದತೆಯು ಹೇಗೆ ಸಹಾಯಕಾರಿಯೆಂಬುದನ್ನು ಈ ಅಧ್ಯಯನವು ಗುರುತಿಸುವ ಪ್ರಯತ್ನ ಮಾಡಿದೆ. ಇದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಚರಿತ್ರೆಯ ವಿಷಯಕ್ಕೆ ಬಂದರೆ ತಮ್ಮ ಹಕ್ಕುಗಳಿಗಾಗಿ ಹಲವರು ಒಂದು ನಿರ್ದಿಷ್ಟ ಭೌಗೋಳಿಕ ವಲಯದಲ್ಲಿ ಗುಂಪೊಂದನ್ನು ಕಟ್ಟಿಕೊಂಡು, ಕ್ರಮೇಣ ಅದಕ್ಕೊಂದು ಹೆಸರನ್ನಿಟ್ಟುಕೊಂಡು ರಾಜ್ಯ ಸ್ಥಾಪನೆ ಮಾಡಿಕೊಳ್ಳುತ್ತಿದ್ದರು ಎಂಬುದನ್ನು ಗಮನಿಸಿದ್ದೇವೆ. ಇದು ಅವರ ವೈಯಕ್ತಿಕ ಲಾಭ ಅಥವಾ ವೈಯಕ್ತಿಕ ಉದ್ದೇಶಕ್ಕಾಗಿ ಎನ್ನಬಹುದು. ಆದರೆ ಧಾರ್ಮಿಕ ವಿಷಯಕ್ಕೆ ಬಂದಲ್ಲಿ ಧಾರ್ಮಿಕವಾಗಿ ಗುರುತಿಸಿಕೊಳ್ಳುವ ಶರಣರು, ಸಂತರು, ಸೂಫಿಗಳೆಂದು ಗುಂಪು ಕಟ್ಟಿಕೊಂಡು ಆ ಗುಂಪಿನ ನಾಯಕತ್ವ ವಹಿಸಿಕೊಳ್ಳಲಿಲ್ಲ, ಬದಲಾಗಿ ಅನುಭಾವಿಗಳನ್ನು ಒಪ್ಪಿದ ಅನೇಕ ಜನರು ಅವರನ್ನು ನಂಬಿ

ಆರಾಧಿಸತೊಡಗಿದರು. ಇಲ್ಲಿ ನಾವು ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಅಂದಿನಿಂದ ಇಂದಿನವರೆಗೂ ಚರಿತ್ರೆಗೂ ಹಾಗೂ ಧರ್ಮಕ್ಕೂ ನಂಟಿದ್ದರೂ, ಚರಿತ್ರೆ ತನ್ನ ದಿಕ್ಕನ್ನು, ತನ್ನ ನಡೆಯನ್ನು ತಾನೇ ನಿರ್ಮಿಸಿಕೊಂಡಿರುವದನ್ನು ಕಾಣುತ್ತೇವೆ. ಇದನ್ನು ನಾವು ಕೇವಲ ವೈಯಕ್ತಿಕ ಹಿತಾಸಕ್ತಿ ಎನ್ನಬಹುದು. ಆದರೆ ಧರ್ಮ ಅದರಲ್ಲಿಯೂ ಶರಣ, ಸೂಫಿಧರ್ಮ ತನ್ನ ನಡೆಯನ್ನು, ತನ್ನ ದಿಕ್ಕನ್ನು ವೈಯಕ್ತಿಕವಾಗಿ ಗುರುತಿಸಿಕೊಳ್ಳಲಿಲ್ಲ. ವ್ಯಕ್ತಿಕೇಂದ್ರಿತ ಮನೋಭಾವಗಳಿಗೆ ಬೆಲೆಕೊಡದೇ, ಸಮುದಾಯ ಕೇಂದ್ರಿತ ಮಾನವೀಯ ಮೌಲ್ಯಗಳಿಗಾಗಿ ಅನುಭಾವಿಗಳು ತಮ್ಮನ್ನು ತಾವು ತೊಡಗಿಸಿಕೊಂಡರು. ಐತಿಹಾಸಿಕ ಘಟನೆಗಳಿಗೆ ಎದುರಾದ ಸಂದರ್ಭಗಳನ್ನು ಧರ್ಮ ಎದುರಿಸಿದ್ದನ್ನು ಕಾಣಬಹುದು.

**ಅಧ್ಯಯನದ ಉದ್ದೇಶ** :

ಕಾಲಾಂತರದಲ್ಲಿ ಈ ಮತ- ಧರ್ಮಗಳ ಹುಟ್ಟಿನ ಮೂಲಕ್ಕೆ ಬಂದರೆ ಜಗತ್ತಿನಾದ್ಯಂತ ಇರುವ ಮತ-ಧರ್ಮಗಳು ಹೇಗೆ ಹುಟ್ಟಿದವು? ಎಂಬ ಮೂಲಗಳು ನಮ್ಮ ಮುಂದೆ ಬರುತ್ತವೆ. ಇದರ ಜೊತೆಗೆ ದೇವರು ಎಂಬ ಕಲ್ಪನೆ ಯಾವಾಗ ಹುಟ್ಟಿತೋ ಆ ಘಳಿಗೆಯಲ್ಲಿಯೇ ಮನುಷ್ಯನೇ ಇಂತಹ ದೇವರು-ಧರ್ಮ ಎಂಬುದನ್ನು ಹುಟ್ಟು ಹಾಕಿದ. ಆದಿಮಾನವನು ತನಗರಿವಿಲ್ಲದೆ ಪ್ರಕೃತಿಯಲ್ಲಿನ ಆಗು ಹೋಗುಗಳಿಗೆ ಉತ್ತರ ಕಂಡುಕೊಳ್ಳಲು ವಿಫಲನಾಗಿ, ಮೂಕವಿಸ್ಮಿತನಾಗಿ, ಸೋಲೊಪ್ಪಿಕೊಂಡು ಪ್ರಕೃತಿಗೆ ಕೈ ಮುಗಿದನು. ಕೈಮುಗಿದ ತಕ್ಷಣದಿಂದಲೇ ಆತನಿಗೆ ಪರ್ವತಗಳು, ಸೂರ್ಯ, ಚಂದ್ರ, ನಕ್ಷತ್ರಗಳು, ಮರ-ಗಿಡಗಳು, ನದಿಗಳು, ಸಮುದ್ರಗಳು, ಭೂಕಂಪನ, ನೆರೆಪ್ರವಾಹ, ಗುಡುಗು-ಸಿಡಿಲುಗಳಂತಹ ಪ್ರಕೃತಿಯಲ್ಲಿನ ವೈಪರಿತ್ಯಗಳೇ ದೈವಗಳಾದವು. ಬೇರೆ ಬೇರೆ ಪರಿಸರದಲ್ಲಿ ಬೇರೆ, ಬೇರೆ ಸಂದರ್ಭದಲ್ಲಿ ಅಂದರೆ ಒಂದು ಕಡೆ ಅಧಿಕವಾಗಿ ಮಳೆಯಾದರೆ, ಅದನ್ನೆ ದೇವರೆಂದು ತಿಳಿದು ಪೂಜಿಸುವುದು. ಇನ್ನೊಂದೆಡೆ ಉರಿನಾಲಿಗೆಯಿಂದ ಹೊತ್ತಿ ಹುರಿದ ಬೆಂಕಿಯನ್ನೇ ದೇವರೆಂದು, ಹೀಗೆ ನಿಸರ್ಗದಲ್ಲಿನ ಘಟನೆಗಳಿಂದ ತಮಗೆ ಯಾವುದು ಅನುಕೂಲವಾಯಿತು. ಈ ಅನುಕೂಲ ಅನಾನುಕೂಲಗಳನ್ನೆಲ್ಲ ಪುರಾತನರು ದೇವರು-ದೈವಗಳೆಂದು ಕರೆದರು. ಅವುಗಳ ಆರಾಧನೆಯಲ್ಲಿ ತೊಡಗಿದರು. ಮುಂದುವರೆದಂತೆ ಮಳೆ, ಸೂರ್ಯ, ಗಾಳಿಯನ್ನು ಆರಾಧಿಸುತ್ತಾ ಮುಂದೆ ಪ್ರತ್ಯೇಕವಾದರು. ಈ ಪ್ರತ್ಯೇಕವಾದ ಆರಾಧನೆಗಳೇ ಮುಂದೆ ಮತ, ಧರ್ಮಗಳಾದವು. ಇವುಗಳ ಆಚರಣೆಗಳಿಂದಾಗಿ ಬೇರೆ ಬೇರೆ ಧರ್ಮಗಳುರೂಪ ಪಡೆದುಕೊಂಡವು. ಈ ಮತ ಧರ್ಮಗಳ ಹುಟ್ಟಿಗೆ ಅವರವರು ಕಂಡುಕೊಂಡ ಅವರವರ ಆರಾಧನಾಕ್ರಮ, ಜೀವನಶೈಲಿ, ಸಿದ್ಧಾಂತಗಳು ಪ್ರಮುಖ ಪಾತ್ರವಹಿಸಿದವು. ಇವುಗಳೇ ಮುಂದುವರೆದಂತೆ ಮತ, ಧರ್ಮಗಳಾಗಿ ತಮ್ಮತನವನ್ನು ಮೀರಿ ಅತಿಯಾಗಿ ಬೆಳೆಯುತ್ತಾ ಹೋದವು. ಇದರಿಂದಾಗಿ ಉಳಿದಂತಹ ಮತ, ಧರ್ಮಗಳು ತಮಗೆ ಎದುರಾಳಿಯೆಂಬ ಮೇಲು ಕೀಳೆಂಬ, ಪರ ಅಧೀನ ಎಂಬ ಪರಿಕಲ್ಪನೆಗಳಲ್ಲಿ ವರ್ತಿಸತೊಡಗಿದವು. ಸಮಾಜದಲ್ಲಿ ಈ ಬೆಳವಣಿಗೆ ರೋಗಗ್ರಸ್ಥವಾದ ವಾತಾವರಣವನ್ನು ಹುಟ್ಟುಹಾಕಿತು. ಹೀಗಾಗಿ ಧರ್ಮ-ಧರ್ಮಗಳ ನಡುವೆ, ಮನಸ್ಸು-ಮನಸ್ಸುಗಳ

ನಡುವೆ, ಶ್ರೇಷ್ಠ ಕನಿಷ್ಠ ಎಂಬ ಏರಿಳಿತಗಳಿಗೆ ಅನೇಕ ಘಟನಾವಳಿಗಳು ಕಾರಣವಾಗಿರುವುದನ್ನು ಚರಿತ್ರೆಯುದ್ದಕ್ಕೂ ಘಟಿಸುತ್ತಾ ಬಂದಿರುವುದನ್ನು ಕಂಡಿದ್ದೇವೆ. ಅಂತಹ ವೈಮನಸ್ಸುಗಳು ಸಮಾಜದಲ್ಲಿ ಇಂದಿಗೂ ಅಶಾಂತಿ ನೆಲೆಯೂರುವಂತೆ ಮಾಡಿವೆ.

ದ್ರಾವಿಡರನ್ನು ಭಾರತದ ಮೂಲ ನಿವಾಸಿಗಳು ಎಂದು ಕರೆದ ಇತಿಹಾಸಕಾರರ ವಿಚಾರಗಳನ್ನು ಅವಲೋಕಿಸಿದರೆ, ಅದಕ್ಕೆ ನಿಖರವಾದ ಉತ್ತರ ಸಿಗುವುದು ಕಷ್ಟವಾಗುತ್ತದೆ. ಏಕೆಂದರೆ ಮೂಲ ಜನಾಂಗವೆಂಬುದು ಎಲ್ಲಿಂದ? ಹೇಗೆ? ಯಾವಾಗ? ಬಂತು ಎಂಬುದರ ಬಗ್ಗೆ ಪೂರಕ ಮಾಹಿತಿ, ಇದುವರೆಗೂ ಸ್ಪಷ್ಟ ದಾಖಲೆಗಳು ಲಭ್ಯವಾಗಿಲ್ಲ. ಹೀಗಾಗಿ ಭಾರತದ ಮೂಲ ನಿವಾಸಿಗಳ ಬಗ್ಗೆ ಏನು ಹೇಳಬೇಕೆಂಬುದು ಗೋಚರಿಸುವುದಿಲ್ಲ. ಒಂದೊಮ್ಮೆ ನಿಗ್ರೋಗಳು, ದ್ರಾವಿಡರು, ಆರ್ಯರು, ಹಿಂದುಗಳು, ಮುಸ್ಲಿಂರೆಲ್ಲರನ್ನೂ ಗಮನಿಸಿದಾಗ್ಯೂ ನಿಖರವಾಗಿ ಯಾರು ಈ ದೇಶದ ಮೊದಲಿಗರು ಎಂಬ ಅಧ್ಯಯನ ನಡೆದಿದೆ. ಆದರೂ ಇತಿಹಾಸಕಾರರ ಹೇಳಿಕೆಗಳನ್ನು ಗಮನಿಸಿದಾಗ ಈ ದೇಶದ ಮೂಲ ನಿವಾಸಿ ದ್ರಾವಿಡರು ಎಂಬುದನ್ನು ಒಪ್ಪಿಕೊಳ್ಳಲೇಬೇಕು.

ಒಟ್ಟಾರೆಯಾಗಿ ಭಾರತದ ಮೂಲ ಜನಾಂಗದ ಪ್ರಶ್ನೆಯನ್ನು ಬದಿಗಿಟ್ಟು ನೋಡಿದಾಗ ಪ್ರಸ್ತುತವಾಗಿ ಇಲ್ಲಿ ವಾಸಿಸಿರುವ ಎಲ್ಲಾ ಜನಾಂಗಗಳು ಇಲ್ಲಿನ ಪ್ರಮುಖ ಜನಾಂಗಗಳೆಂದು ಗುರುತಿಸುವುದು ಸೂಕ್ತವೆನಿಸುತ್ತದೆ. ಆದ್ದರಿಂದ ಆರ್.ಸಿ. ಮುಜುಂದಾರರು "ಭಾರತದಲ್ಲಿ ಧರ್ಮ ತಾತ್ವಿಕ ಸಂಸ್ಕೃತಿಯ ವಿಕಾಸನ" ಎಂಬ ಲೇಖನದಲ್ಲಿ ಭಾರತದ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಒಂದು ಅನ್ಯ ದೇಶಿಯ ಮಿಥ್ಯಶ್ರದ್ಧೆ ಹಿಂದೂ ಧರ್ಮದ ಎದುರು ನಿಂತಿತ್ತು. ಇದು ವಿದೇಶಿಯಾಗಿತ್ತಷ್ಟಲ್ಲದೇ ಜಗಳಗಂಟಿ ಸ್ವಭಾವವನ್ನು ಹೊಂದಿತ್ತು" ಎಂಬುದನ್ನು ಗಮನಿಸಿದಾಗ ಮುಜುಂದಾರರು ಹಿಂದೂ ಧರ್ಮ ಮೂಲತಃ ಭಾರತದ್ದೇ ಎಂದು ಒಪ್ಪಿಕೊಂಡಂತಿದೆ. ಹಿಂದೂ ಧರ್ಮ ಭಾರತದ್ದೇ ಆದರೆ ಬೌದ್ಧ, ಜೈನ, ಸಿಖ್, ಪಾರಸಿ ಮುಂತಾದ ಧರ್ಮಗಳು ಹೊರಗಿನಿಂದ ಭಾರತಕ್ಕೆ ಬಂದಂತವುಗಳೆ? ಹಿಂದೂ ಧರ್ಮವೇ ಭಾರತದ ಮೂಲವಾದರೆ, ಅದು ಯಾವಾಗ, ಯಾರಿಂದ, ಎಲ್ಲಿ, ಹೇಗೆ? ಸ್ಥಾಪಿತಗೊಂಡಿತು ಎಂಬುದರ ಬಗ್ಗೆ ನಿಖರವಾಗಿ ಸಾಕ್ಷ ನೀಡಲು ಅವರಿಂದಲೂ ಸಾಧ್ಯವಾಗಿಲ್ಲ. ಅಂದರೆ ಇಲ್ಲಿ ಹೇಳಬೇಕೆಂದಿರುವದು ಯಾವುದೇ ಧರ್ಮವಿರಲಿ ಜಾತಿ ಇರಲಿ ಅವುಗಳನ್ನು ಗಣಿಸಬಾರದು. ಅದಕ್ಕಾಗಿಯೇ ರಾಷ್ಟ್ರಕವಿ ಕುವೆಂಪುರವರು ತಮ್ಮ ಒಂದು ಕವನದಲ್ಲಿ 'ನೂರು ದೇವರ ನೂಕಾಚೆ ಗುಡಿ, ಮಸೀದಿ, ಚರ್ಚ್, ಬಿಟ್ಟು ಹೊ ರಬನ್ನಿ' ಎಂದು ಹೇಳಿರುವುದು. ಇಂತಹ ವೈಚಾರಿಕ ನುಡಿಗಳು ಜನರ ಮಧ್ಯೆ ಭ್ರಾತೃತ್ವವನ್ನು ಬೆಸೆಯಲು ಸಹಾಯಕಾರಿಯಾಗಿವೆ. ಮುಸ್ಲಿಂ ಅರಸರು ಭಾರತಕ್ಕೆ ಬಂದ ಮೇಲೆ ಇನ್ನಿತರ ಧರ್ಮಗಳ ಜೊತೆ ಬೆರೆತು ತನ್ನ ಮೂಲ ಧರ್ಮದ ತತ್ವವನ್ನು ಬಿಟ್ಟು ಈ ನೆಲದ, ಈ ಮಣ್ಣಿನ ಋಣಕ್ಕೆ ಅನುಗುಣವಾಗಿ ಏಕತೆಯಿಂದ ಇರಲು ತೊಡಗಿದರು. ಇಲ್ಲಿನ ಸಂಸ್ಕೃತಿಗೆ ಅನುಗುಣವಾಗಿ ಇಲ್ಲಿಂದಲೇ ಬಂದಂತಹ

ಧರ್ಮಗಳೆಲ್ಲ ಒಂದರೊಳೊಗೊಂದು ಬೆರೆತು ವಿಶಿಷ್ಟ ಸಂಸ್ಕೃತಿಯೊಂದನ್ನು ಹುಟ್ಟುಹಾಕಿದವು. ಜಾತಿ, ಧರ್ಮ, ಮತಗಳು ಒಂದರೊಳಗೊಂದು ಬೆರೆತು ಸಂಕರ ಸಂಸ್ಕೃತಿ ಬೆಳೆಯಿತು. ಅದನ್ನೆ ನಾವು ಹಿಂದು–ಮುಸ್ಲಿಂ ಮಿಶ್ರ ಸಂಸ್ಕೃತಿ, 'ಸಮ್ಮಿಶ್ರ ಸಂಸ್ಕೃತಿ' ಎಂದು ಕರೆಯುತ್ತೇವೆ.

ಸಂಕರ ಸಂಸ್ಕೃತಿಯಲ್ಲಿ ಬಾಳಿದ ಜನಪದರ ಬದುಕು ಬಹುತ್ವವನ್ನೊಳಗೊಂಡು ರೂಪುಗೊಂಡಿರುತ್ತದೆ. ಮೂಲಭೂತವಾದಿಗಳ ಅವೈಜ್ಞಾನಿಕ ಜೀವನಕ್ರಮವನ್ನು ಸರಿಪಡಿಸಲು ಮತ್ತು ಸಾಮರಸ್ಯದಿಂದ ಸಮಾಜದಲ್ಲಿ ಬದುಕಲು ಸಂಕರ ಸಂಸ್ಕೃತಿಯ ಜೀವನಕ್ರಮ ಸಹಕಾರಿಯಾಗಿದೆ. ಇಂತಹ ಸಂಸ್ಕೃತಿಯ ಅಧ್ಯಯನದಿಂದ ಸ್ವಾಸ್ಥ್ಯ ಸಮಾಜದ ನಿರ್ಮಾಣ ಸಾಧ್ಯವೆಂಬುದನ್ನು ಈ ಅಧ್ಯಯನ ನಂಬಿದೆ. ಅದು ಈ ಅಧ್ಯಯನದ ಮುಖ್ಯ ಉದ್ದೇಶವೂ ಆಗಿದೆ. ಇಡಿಯಾಗಿ ಧರ್ಮವನ್ನು ಮುಂದಿಟ್ಟುಕೊಂಡು ನಾವು ನೋಡಿದಾಗ ಅದರಲ್ಲಿ ಹಿಂದೂ – ಮುಸ್ಲಿಂ ಧರ್ಮಗಳನ್ನು ಎಲ್ಲಾ ಪ್ರದೇಶಗಳಿಗೆ ಭಿನ್ನವಾದಂತಹ ನಿದರ್ಶನಗಳು ಹೈದರಾಬಾದ – ಕರ್ನಾಟಕ ಪ್ರದೇಶದಲ್ಲಿ ಕಾಣುತ್ತವೆ. ಅದರಲ್ಲೂ ಕೊಪ್ಪಳ ಜಿಲ್ಲೆಯಲ್ಲಿ ಮೇಲೆ ತಿಳಿಸಿದ ಭಿನ್ನತೆ ಕಂಡುಬರುತ್ತವೆ. ಮುಸ್ಲಿಂ ಕೋಮು ಗಲಭೆಗಳಿಗೆ ಒಳಗಾಗಿತ್ತು ಎಂಬ ಚರಿತ್ರೆಯ ದಾಖಲೆಗಳನ್ನು ಕೊಪ್ಪಳ ಜಿಲ್ಲೆಯು ಅಲ್ಲಗಳೆಯುತ್ತದೆ. ಇಲ್ಲಿನ ಕೋಮು – ಸೌಹಾರ್ದತೆ ಮುಸ್ಲಿಂ ಆಳರಸರ ಕಾಲದಲ್ಲಿಯೇ ಹೆಚ್ಚು ಗಟ್ಟಿಯಾಗಿತ್ತು ಎಂಬ ಮಾಹಿತಿಗಳು ನಮ್ಮ ಜನಪದರ ಅನೇಕ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಮುಸ್ಲಿಂ ಅರಸರ ಆಗಮನದಿಂದಲೇ ಹಿಂದೂ ಸಂಸ್ಕೃತಿ ಹಾಳಾಯಿತು ಎಂಬ ವಾದವನ್ನು ಒಪ್ಪಿಕೊಂಡಿರುವ ಅನೇಕ ಚರಿತ್ರೆಕಾರರಿಗೆ ಕೊಪ್ಪಳ ಜಿಲ್ಲೆಯ ಜನಪದರು ಮೌನದಿಂದಲೇ ಹೀಗೆ ಉತ್ತರಿಸುತ್ತಾರೆ.

ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ಕೊಪ್ಪಳದಲ್ಲಿ ಕ್ರಿ.ಶ.ಪೂ ೨೭೨ ರ ಕಾಲದ ಅಶೋಕನ ಎರಡು ಶಾಸನಗಳಿವೆ. ಗವಿಮಠದ ಅಡ್ಡಣಗಿ ಗುಂಡಿನಡಿನಲ್ಲಿ ಒಂದು, ಮತ್ತೊಂದು ಮಳೆಮಲ್ಲೇಶ್ವರ ಬೆಟ್ಟದ ಪಾಲ್ಕಿ ಗುಂಡಿನಡಿಯಲ್ಲಿದೆ. ಇದರ ಪಾದದಲ್ಲಿ ವರಾಂಗ ಚರಿತ್ರೆಯ ಕರ್ತೃ ಜಟಾಸಿಂಹ ನಂದಿಯ ಪಾದಗಳನ್ನು ಚಾವಯ್ಯನೆಂಬ ಶಿಷ್ಯ ಕೆತ್ತಿಸಿದ್ದಾನೆ. ಈ ಭಾಗದ ಬಹದ್ದೂರಬಂಡಿ, ಕೊಪ್ಪಳ, ಇರಕಲ್ಲಗಡಾದ ಕೋಟೆಗಳು ಈಗಲೂ ಗಟ್ಟಿಯಾಗಿದ್ದು ಚಾರಿತ್ರಿಕ ಶ್ರೀಮಂತಿಕೆಯ ಸೂಚಕಗಳಾಗಿ ಇಂದಿಗೂ ಚರಿತ್ರೆಕಾರರಿಗೆ, ಅಧ್ಯಯನಾಸಕ್ತರಿಗೆ ಆಕರ್ಷಣೆಯಾಗಿವೆ. ಮಳೆಮಲ್ಲೇಶ್ವರ ಬೆಟ್ಟದ ನೆತ್ತಿಯ ಮೇಲೆ ಆದಿಮಾನವರ ಕಲ್ಗೋರಿ(ಡಾಲ್ಮನ್ಸ್)ಗಳಿವೆ. ಇಲ್ಲಿ ಬಣ್ಣದ ಗವಿ ಚಿತ್ರಗಳಿವೆ. ಜೈನರ ಕಾಶಿಯೆಂದು ಕರೆಯಲ್ಪಟ್ಟ ಕೊಪ್ಪಳವು ಎಂಟನೆಯ ಶತಮಾನದಿಂದ ೧೬ ನೇಯ ಶತಮಾನದವರೆಗೆ ಜೈನರ ತೀರ್ಥ (ಪವಿತ್ರ) ಕ್ಷೇತ್ರವಾಗಿತ್ತು. ಇಲ್ಲಿ ಪಾರ್ಶ್ವನಾಥ ಬಸದಿ ಇದ್ದು, ಹುಲಿಕೆರೆ, ಚಾಂದ್‌ಬಾವಡಿ, ದೇವಾಂಗಮಠ, ಸಿರಸಪ್ಪಯ್ಯನವರ ಮಠ, ಸೈಲಾನ ಬಾದೇಶಾ ದರ್ಗಾ, ಹಿರೇಮಸೂದಿ, ರಾಜಾಬಕ್ಷಿ ದರ್ಗಾ ಹಾಗೂ ಮರ್ದಾನ್‌ಗೈಬ ಮುಂತಾದ ಸೌಹಾರ್ದತೆಯ ದರ್ಗಾಗಳಿವೆ. ಕೊಪ್ಪಳದ ಗವಿಮಠವು ಜೈನ, ಬೌದ್ಧ, ಶೈವ, ವೈಷ್ಣವ, ವೀರಶೈವ ಸಂಸ್ಕೃತಿಗಳ ಸಂಗಮ ತಾಣವಾಗಿದೆ. ಈ ಭಾಗದ ಆರಾಧ್ಯದೈವ ಶ್ರೀ

ಗವಿಸಿದ್ದೇಶ್ವರ ಜಾತ್ರಾ ಮಹೋತ್ಸವವು ವಿಜೃಂಭಣೆಯಿಂದ ಬನದ ಹುಣ್ಣಿಮೆಯ ಎರಡನೆಯ ದಿವಸದಂದು ನೆರವೇರುವುದು. ಅಂದು ಲಕ್ಷೋಪ ಲಕ್ಷ ಭಕ್ತರು ಸೇರಿ ಸೌಹಾರ್ದತೆಯನ್ನು ಮೆರೆಯುವುದನ್ನು ಕಾಣುತ್ತೇವೆ.

ಹಿಂದೂ ಮತ್ತು ಮುಸ್ಲಿಂ ಅರಸರ, ಸೂಫಿಗಳ ಸಂಬಂಧ ಎಷ್ಟು ಗಟ್ಟಿಯಾಗಿತ್ತು ಎಂಬುದಕ್ಕೆ ಇಲ್ಲಿ ಉಳಿದು ಬೆಳೆದುಕೊಂಡು ಬಂದ ಹಿಂದೂ – ಮುಸ್ಲಿಂ ಸಾಂಸ್ಕೃತಿಕ ಆಚರಣೆ, ಸಂಪ್ರದಾಯ, ರೀತಿ, ನೀತಿಗಳಿಂದ ಸ್ಪಷ್ಟವಾಗುತ್ತದೆ. ಹೀಗಿರುವಾಗ ಸತ್ತ ಸಾಕ್ಷಿಗಳನ್ನು ನಂಬಿ ಜೀವಂತ ಸಾಕ್ಷಿಗಳ ಧ್ವನಿ ಅಡಗಿಸುವದು ಸಮಂಜಸವೇ? ಎಂಬುದಕ್ಕೆ ಇತಿಹಾಸಕಾರರು, ಸಂಸ್ಕೃತಿ ಚಿಂತಕರು, ಬುದ್ಧಿ ಜೀವಿಗಳು ಇನ್ನೂ ಉತ್ತರಿಸಬೇಕಿದೆ.

ಈ ಕೋಮು – ಸೌಹಾರ್ದತೆಯನ್ನು ಕೊಪ್ಪಳ ಜಿಲ್ಲೆಯಲ್ಲಿ ಎಲ್ಲಾ ಮತ–ಧರ್ಮಗಳು ಪರಸ್ಪರ ಕೊಡುಕೊಳ್ಳುವಿಕೆಯನ್ನು ಮಾಡಿಕೊಂಡಿವೆ. ಈ ಕೊಡು–ಕೊಳ್ಳುವಿಕೆಯು ಶರಣರಿಂದ, ದಾಸರಿಂದ, ಜೈನ ತೀರ್ಥಂಕರರಿಂದ, ಬೌದ್ಧ ಭಿಕ್ಷುಗಳಿಂದ, ಸೂಫಿ – ಸಂತರಿಂದ ಅನುಭಾವಿಗಳ ಅನುಭವದಿಂದ ಧಾರೆಯಾಗಿ ಪಡೆದುಕೊಳ್ಳಲಾಗಿದೆ. ಇದು ಈ ಭಾಗದ ವಿಶಿಷ್ಟತೆ ಎನ್ನಬಹುದಾಗಿದೆ.

**ಅಧ್ಯಯನದ ವ್ಯಾಪ್ತಿ:**

ಪ್ರಸ್ತುತ ಅಧ್ಯಯನವು ಕೊಪ್ಪಳ ಜಿಲ್ಲೆಯ ಕೊಪ್ಪಳ, ಯಲಬುರ್ಗಾ, ಕುಷ್ಟಗಿ ಹಾಗೂ ಗಂಗಾವತಿ ತಾಲ್ಲೂಕುಗಳನ್ನು ಒಳಗೊಂಡು ಇಡಿ ಜಿಲ್ಲೆಯನ್ನು ವ್ಯಾಪ್ತಿಯನ್ನಾಗಿ ಮಾಡಿಕೊಳ್ಳಲಾಗಿದೆ. ಅಖಂಡ ರಾಯಚೂರು ಜಿಲ್ಲೆಯಿಂದ ಕೊಪ್ಪಳವು ೧೯೯೭ರಲ್ಲಿ ಸ್ವತಂತ್ರ ಜಿಲ್ಲೆಯಾಗಿ ಮಾರ್ಪಟ್ಟಿದೆ. ಕರ್ನಾಟಕದ ಏಕೀಕರಣಕ್ಕೂ ಮುಂಚೆ ಈ ಪ್ರದೇಶವು ನಿಜಾಂ ಅರಸರ ಆಳ್ವಿಕೆಯಲ್ಲಿತ್ತು. ಅದು ಹೈದ್ರಾಬಾದ್ ಕರ್ನಾಟಕದ ಪ್ರದೇಶವೆಂದು ಕರೆಸಿಕೊಳ್ಳುತ್ತಿತ್ತು. ಪ್ರಸ್ತುತ ಸಂಶೋಧನಾ ಪ್ರಬಂಧವು ಒಟ್ಟು ಏಳು ಅಧ್ಯಾಯನಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನವನ್ನು ಕುರಿತದ್ದಾಗಿದೆ. ಕೊಪ್ಪಳ ಜಿಲ್ಲೆಯಲ್ಲಿನ ಹಿಂದೂ – ಮುಸ್ಲಿಂ ಕೂಡು ಸಂಸ್ಕೃತಿಯ ಪ್ರಸ್ತುತತೆಯನ್ನು ನೋಡಲಾಗಿದೆ. ಇಡೀ ಅಧ್ಯಯನದ ಉದ್ದೇಶವನ್ನು ಹೇಳುತ್ತ ಅಧ್ಯಯನವನ್ನು ಇದೇ ದಿಕ್ಕಿನೆಡೆಗೆ ನಡೆಸಿಕೊಂಡು ಬರಲಾಗಿದೆ. ಇದರ ಜೊತೆಗೆ ಅಧ್ಯಯನದ ವ್ಯಾಪ್ತಿ ಹೇಳುತ್ತಾ ಕೊಪ್ಪಳ ಜಿಲ್ಲೆಯ ಎಲ್ಲಾ ತಾಲೂಕುಗಳನ್ನು ಅಧ್ಯಯನದ ವ್ಯಾಪ್ತಿಯಾಗಿ ನಿಗದಿಪಡಿಸಿಕೊಳ್ಳಲಾಗಿದೆ. ಈ ಜಿಲ್ಲೆಯಲ್ಲಿ ಬರುವ ಕೋಮು ಸೌಹಾರ್ದತೆಯ ಪ್ರಮುಖವಾದ ತಾಣಗಳು ಇಂತಿವೆ.

**ಕೊಪ್ಪಳ ತಾಲೂಕು :** ೧. ಸಿರಸಪ್ಪಯ್ಯನ ಮಠ (ಕೊಪ್ಪಳ ನಗರ)

೨. ಹಜರತ್ ಮರ್ದಾನ್ ಗೈಬ್ ದರ್ಗಾ (ಕೊಪ್ಪಳ ನಗರ )

೩. ರಾಜಭಕ್ತಿ / ಯಮನೂರಪ್ಪ (ಕೊಪ್ಪಳ ನಗರ)

೪. ಖಾದರಲಿಂಗ (ಕೊಪ್ಪಳ ನಗರ )

೫. ಜಡೇತಾತ / ಯಮನೂರಸಾಬ್ (ಹಾಲವರ್ತಿ)

೬. ಸೈಯದ್ ಷರಾಜ್ ಅಲಿ ಖಾದ್ರಿ (ಬಿಸರಳ್ಳಿ )

೭. ಯಮನೂರಸಾಬ್ (ಬಹದ್ದೂರ ಬಂಡಿ )

೮. ಹಜರತ್ ಮುಸ್ತಾಫ್ ಖಾದ್ರಿ (ಬೆಳಗಟ್ಟಿ )

೯. ಗ್ಯಾನಪ್ಪಜ್ಜ / ಗ್ಯಾನೇಶ್ವರ (ಗುನ್ನಳ್ಳಿ )

**ಯಲಬುರ್ಗಾ ತಾಲೂಕು** : ೧. ಹುಸೇನ್ ಷಾಹವಲಿ / ಫಕೀರಪ್ಪ (ತಳಕಲ್ಲ)

೨. ಮೃತ್ಯುಂಜಯ ಖಾದ್ರಿ (ಮಂಗಳೂರು)

೩. ಬಾಬ ಹಸರಫ್ ಅಲಿ (ಯಲಬುರ್ಗಾ)

೪. ಹಜರತ್ ಹುಸೇನಿ ಆಲಮ್ ದರ್ಗಾ (ಕುದರಿಮೋತಿ)

೫. ಯಮನೂರಸ್ವಾಮಿ (ಮುರಡಿ)

**ಗಂಗಾವತಿ ತಾಲೂಕು** : ೧. ಸೈಯದ್ ಮುಸ್ತಾಫ್ ಖಾದ್ರಿ (ಕಾರಟಗಿ)

೨. ವೈಬುಸುಬಾನಿ ದರ್ಗಾ (ಚಿಕ್ಕ ಜಂತಕಲ್)

**ಕುಷ್ಟಗಿ ತಾಲೂಕು** : ೧. ಸೈಯದ್ ಷಾಹ ಅಬ್ದುಲ್ ಹಸನ್ ಖಾದ್ರಿ (ಹನುಮಸಾಗರ)

೨. ಸೈಯದ್ ಷಾಹ ಹಮೀನುದ್ದೀನ್ ಖಾದ್ರಿ (ತಾವರಗೇರ)

**ಅಧ್ಯಯನದ ವಿಧಾನ:**

ಈ ಅಧ್ಯಯನವು ಪ್ರಸ್ತುತವಾಗಿ ಕ್ಷೇತ್ರಕಾರ್ಯದ ಅಧ್ಯಯನವಾಗಿದೆ. ಕೋಮು – ಸೌಹಾರ್ದತೆಯ ಕೇಂದ್ರಗಳಲ್ಲಿ ಭಾಗಿಯಾಗಿರುವ ಮಾಹಿತಿದಾರರಿಂದ ಮುಖ್ಯವಾದ ಮಾಹಿತಿಗಳನ್ನು ಪಡೆಯಲಾಗಿದೆ. ಮಾಹಿತಿ ಸಂಗ್ರಹಣೆಯಲ್ಲಿ ಮಾಹಿತಿದಾರರೊಂದಿಗೆ ಪ್ರಶ್ನೆಗಳನ್ನು ಕೇಳಿ, ಅವರೊಂದಿಗೆ ಚರ್ಚಿಸುವ ಮುಖಾಂತರ ವಿಷಯವನ್ನು ಕ್ರೋಢಿಕರಿಸಲಾಗಿದೆ. ಕೆಲವೊಂದು ಸಾಂಸ್ಕೃತಿಕ ದಿನಗಳ ಹಾಗೂ ಜಾತ್ರೆಯ ಆಚರಣೆಗಳಲ್ಲಿ ಭಾಗವಹಿಸುವದರೊಂದಿಗೆ ಮಾಹಿತಿ ಸಂಗ್ರಹಿಸಲಾಗಿದೆ. ವಿವಿಧ ಸಂದರ್ಭದ ಆಚರಣೆಗಳನ್ನು ಛಾಯಾಚಿತ್ರ ತೆಗೆಯುವ ಹಾಗೂ ಧ್ವನಿಮುದ್ರಿಕೆ ಮಾಡಿಕೊಳ್ಳುವದರೊಂದಿಗೆ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಒಟ್ಟಾರೆ ಕ್ಷೇತ್ರಕಾರ್ಯವು ಈ ಅಧ್ಯಯನಕ್ಕೆ ಪ್ರಧಾನವಾದ ಮಾಹಿತಿಗಳನ್ನು ಒದಗಿಸಿದೆ. ಹೀಗಾಗಿ ಇದೊಂದು ಕ್ಷೇತ್ರಕಾರ್ಯಾಧಾರಿತ ಅಧ್ಯಯನವಾಗಿದೆ. ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಈ ಕೆಳಗಿನ ಅಧ್ಯಯನ ವಿಧಾನ ಹಾಗೂ ಸಾಧನಗಳ ಸಹಾಯ ಪಡೆಯಲಾಗಿದೆ.

೧. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನ.

೨. ಅವಲೋಕನ ವಿಧಾನ.

೩. ಔಪಚಾರಿಕ ಸಂದರ್ಶನಗಳು.

೪. ಅನೌಪಚಾರಿಕ ಸಂದರ್ಶನಗಳು.

೫. ಧ್ವನಿಮುದ್ರಿಕೆ.

೬. ಛಾಯಾಚಿತ್ರ ಪಡೆಯುವುದು

ಈ ರೀತಿಯ ಮಾಹಿತಿಗಳನ್ನು ಸಂಗ್ರಹಿಸಲು ಈ ಕೆಳಕಂಡವರಿಂದ ಮಾಹಿತಿಯನ್ನು ಪಡೆಯಲಾಯಿತು.

೧. ಜನಪದ ಮಾಹಿತಿದಾರರು,

೨. ಕಲಾವಿದರು,

೩. ಸಾಹಿತಿಗಳು,

೪. ವಿದ್ವಾಂಸರು

೫. ಪೂಜಾರಿ,

೬. ಮುಜಾವರ್,

೭. ಮಠಾಧೀಶರು,

೮. ಸರಕಾರಿ – ಖಾಸಗಿ ಅಧಿಕಾರಿಗಳು,

೯. ಸ್ಥಳೀಯ ಹಿರಿಯರು – ಗಣ್ಯರು.

ಇಷ್ಟಲ್ಲದೆ ಅಧ್ಯಯನಕ್ಕೆ ಪೂರಕವಾದಂತಹ ಶಾಸನಗಳೂ, ಹಸ್ತಪ್ರತಿಗಳು, ವೀರಗಲ್ಲುಗಳು, ಮುಂತಾದವುಗಳಿಂದ ಮಾಹಿತಿಗಳನ್ನು ಸೂಕ್ತ ಕಡೆ ಬಳಸಿಕೊಳ್ಳಲಾಗಿದೆ. ಅಲ್ಲದೇ ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ರಚನೆಗೊಂಡಂತಹ ಮೊಹರಂ ಹಾಡುಗಳು, ತತ್ವಪದಗಳ ಧ್ವನಿ ಸುರಳಿಗಳಲ್ಲಿನ ಹಾಡುಗಳನ್ನು ಅವಶ್ಯಕತೆಗನುಗುಣವಾಗಿ ಬಳಸಿಕೊಳ್ಳಲಾಗಿದೆ.

ಈಗಾಗಲೇ ಸಿದ್ಧವಿರುವ ಆಕರ ಸಾಮಾಗ್ರಿಗಳಾದ ಸಾಹಿತ್ಯ ಕೃತಿಗಳು, ನಿಘಂಟುಗಳು, ವಿಶ್ವಕೋಶಗಳು, ಗೆಜೇಟಿಯರಗಳು ಹಾಗೂ ಪ್ರಕಟಿತ ಮತ್ತು ಅಪ್ರಕಟಿತ ಎಂ.ಫಿಲ್, ಪಿಎಚ್.ಡಿ. ಡಿ.ಲಿಟ್ ಸಂಶೋಧನಾ ಪ್ರಬಂಧಗಳು, ನಕ್ಷೆ ಮತ್ತು ಲಭ್ಯವಿರುವ ಸರಕಾರಿ ಹಾಗೂ ಖಾಸಗಿ ಸಂಘ ಸಂಸ್ಥೆ ಕಛೇರಿಗಳ ಅಂಕಿ ಅಂಶಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಅಧ್ಯಾಯ ಎರಡು: ಕೊಪ್ಪಳ ಜಿಲ್ಲೆಯ ಪ್ರಮುಖ ಅಂಶಗಳು: ಎಂಬ ಶೀರ್ಷಿಕೆ ಅಡಿಯಲ್ಲಿ ಒಟ್ಟು ಏಳು ಭಾಗಗಳನ್ನಾಗಿ ವಿಭಾಗ ಮಾಡಿಕೊಂಡು ಚರ್ಚಿಸಲಾಗಿದೆ. ಕೊಪ್ಪಳ ಜಿಲ್ಲೆಯ ಭೌಗೋಳಿಕ ಅಂಶಗಳು,

ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ, ಸಾಹಿತ್ಯಿಕ, ರಾಜಕೀಯ, ಐತಿಹಾಸಿಕ ಹಾಗೂ ಶಾಸನಾತ್ಮಕ ಆಧಾರಗಳನ್ನು ಚರ್ಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ನೋಡುವುದರೊಂದಿಗೆ, ಐತಿಹಾಸಿಕ ಸಂಗತಿಗಳಲ್ಲಿ ಈ ಪ್ರದೇಶವನ್ನಾಳಿದ ಪ್ರಮುಖ ಅರಸು ಮನೆತನಗಳಾದ ಮೌರ್ಯರು, ಶಾತವಾಹನರು, ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ವಿಜಯನಗರದ ಅರಸರು, ಮುಸ್ಲಿಂ ಅರಸರಾದ ದೆಹಲಿ ಸುಲ್ತಾನರು, ಬಹಮನಿ ಸುಲ್ತಾನರು, ಹೈದ್ರಾಬಾದ್ ನಿಜಾಮರು ಹೀಗೆ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಬಹುತೇಕ ಅರಸು ಮನೆನಗಳ ಆಳ್ವಿಕೆಯನ್ನು ಇಲ್ಲಿ ಅವಲೋಕಿಸಲಾಗಿದೆ. ಈ ಅವಲೋಕನದಿಂದ ಇಲ್ಲಿನ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸ್ಥಿತಿಗತಿಗಳ ಮೇಲೆ ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಬೀರಿದ ಪ್ರಭಾವಗಳೇನು ಎಂಬುದನ್ನು ತಿಳಿದಂತಾಗುತ್ತದೆ. ಇದು ಪ್ರಾದೇಶಿಕವಾಗಿ ಚರಿತ್ರೆಯೊಂದನ್ನು ಭಿನ್ನವಾಗಿ ರೂಪಿಸಿದಂತಾಗುತ್ತದೆ.

ಅಧ್ಯಾಯ ಮೂರು: ಕೋಮು ಸೌಹಾರ್ದತೆಯ ಪರಿಕಲ್ಪನೆ : ಪ್ರಸ್ತುತ ಅಧ್ಯಾಯವು ಈ ಸಂಶೋಧನೆಯ ಜೀವಾಳವಾಗಿದ್ದು, ಕೋಮುವಾದ ಎಂದರೇನು? ಕೋಮು ಸೌಹಾರ್ದತೆಯ ಅರ್ಥ, ವ್ಯಾಖ್ಯಾನ ಮತ್ತು ವಿಶ್ಲೇಷಣೆ ಕೋಮು ಸೌಹಾರ್ದತೆ ಬೆಳೆದು ಬಂದ ಬಗೆ, ಕೊಡೇಕಲ್ ಬಸವಣ್ಣ, ತಿಂಥಿಣಿ ಮೊನಪ್ಪಯ್ಯ ಖ್ವಾಜಾ ಬಂದೇ ನವಾಜ ಮತ್ತು ಮಂಟೇಸ್ವಾಮಿ ಅವರ ಜೀವನ ಚರಿತ್ರೆಯೊಂದಿಗೆ, ಅವರು ಕೈಗೊಂಡ ಸಾಮಾಜಿಕ ಚಿಂತನೆಯನ್ನು ತಿಳಿಸಲಾಗಿದೆ. ವಾಸ್ತವಿಕ ಚಿತ್ರಣವನ್ನು ತಿಳಿಸುವುದರೊಂದಿಗೆ ಇದುವರೆಗೂ ನಾವು ಕಟ್ಟಿಕೊಂಡ ಕೋಮು ಸೌಹಾರ್ದತೆಯ ಸೌದಕ್ಕೆ ಈ ಅಧ್ಯಯನವು ಬುನಾದಿಯನ್ನು ಹಾಕುತ್ತದೆ.

ಕೋಮು ಸೌಹಾರ್ದತೆ ನಮ್ಮಲ್ಲಿ ಬೆಳೆದುಕೊಂಡು ಬರಲು ಪ್ರಮುಖ ಪಾತ್ರವಹಿಸಿರುವ ಸೂಫಿ– ಸಂತರ ಸಿದ್ಧಾಂತ ಮತ್ತು ಅವರ ಜೀವ – ಪ್ರೇಮಗಳ ಭಾವನೆಗಳು ಸ್ವಾಸ್ಥ ಸಮಾಜವನ್ನುಂಟು ಮಾಡುವಲ್ಲಿ ಸಹಕಾರಿಯಾಗಿವೆ. ಈ ಹಿನ್ನೆಲೆಯಿಂದಲೇ ಸೂಫಿ ಸಂತರು ಪ್ರೇಮ ಧರ್ಮಿಯರಾಗಿದ್ದಾರೆ. ಅವರಿಗೆ ಯಾವುದೇ ನಿರ್ದಿಷ್ಟ ದೇವರು, ದೈವ ಪ್ರಮುಖವಾಗುವುದಿಲ್ಲ. ಅವರಿಗೆ ಗುರು ಮತ್ತು ತಮ್ಮ ಅನುಯಾಯಿಗಳು ಮುಖ್ಯರಾಗುತ್ತಾರೆ. ಆದ್ದರಿಂದಲೇ ಇವರು ಸಮಾಜದ ಸ್ವಾಸ್ಥ ಕಾಪಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಇವರು ಕಂಡುಕೊಂಡ ಚಿಂತನ – ಮಂಥನಗಳನ್ನು ಚರ್ಚಿಸುತ್ತಾ, ರಾಜಕೀಯ, ಆರ್ಥಿಕ, ಶೈಕ್ಷಣಿಕಗಳಂತಹ ಅಂಶಗಳು ಕೋಮು ಸೌಹಾರ್ದತೆಯನ್ನು ಹೇಗೆ ಪರಿಗಣಿಸಿವೆ ಎಂಬುದನ್ನು ನೋಡಲಾಗಿದೆ.

ಅಧ್ಯಾಯ ನಾಲ್ಕು: ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು : ಪ್ರಸ್ತುತ ಅಧ್ಯಾಯದಲ್ಲಿ ಕೋಮು – ಸೌಹಾರ್ದತೆಯನ್ನು ಗಟ್ಟಿಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಈ ಜಿಲ್ಲೆಯ ಸೂಫಿ ಸಂತರ ಪರಿಚಯವನ್ನು ತಿಳಿಸುತ್ತಾ, ಅವರಲ್ಲಿರುವ ಸೌಹಾರ್ದತೆಯ ಭಾವನೆಗಳು ಮತ್ತು ಅವು ಹೇಗೆ ಸೌಹಾರ್ದತೆಗೆ ಪೂರಕವಾಗಿವೆ ಎಂಬುದನ್ನು ಚರ್ಚಿಸಲಾಗಿದೆ. ಕೋಮು – ಸೌಹಾರ್ದತೆಯ

ಉಳಿಯುವಿಕೆಗೆ ಕಾರಣವಾದ ಇಲ್ಲಿನ ಸೌಹಾರ್ದತಾ ಸಂಸ್ಕೃತಿಯನ್ನು, ಇಲ್ಲಿನ ಸಾಂಸ್ಕೃತಿಕ ಆಚರಣೆಗಳನ್ನು ನೋಡುತ್ತ ಇವುಗಳನ್ನೆಲ್ಲ ಪರಿಶೀಲಿಸಲಾಗಿದೆ. ಕೊಪ್ಪಳ ತಾಲ್ಲೂಕಿನ ಸಿರಸಪ್ಪಯ್ಯನ ಮಠ, ಹಜರತ್ ಮರ್ದಾನ್ ಗೈಬ್ ದರ್ಗಾ, ರಾಜಾಭಕ್ಷಿ/ಯಮನೂರಪ್ಪ, ಖಾದರಲಿಂಗ, ಜಡೇತಾತ/ಯಮನೂರಸಾಬ್ (ಹಾಲವರ್ತಿ), ಸೈಯದ್ ಷರಾಜ್ ಅಲಿ ಖಾದ್ರಿ (ಬಿಸರಳ್ಳಿ), ಯಮನೂರಸಾಬ್ (ಬಹದ್ದೂರ ಬಂಡಿ), ಹಜರತ ಮುಸ್ತಾಫ್ ಖಾದ್ರಿ (ಬೆಳಗಟ್ಟಿ), ಗ್ಯಾನಪ್ಪಜ್ಜ / ಗ್ಯಾನೇಶ್ವರ ಖಾದ್ರಿ (ಗುನ್ನಳ್ಳಿ), ಯಲಬುರ್ಗಾ ತಾಲೂಕಿನ ಹುಸೇನ್ ಷಾಹವಲಿ / ಫಕೀರಜ್ಜ (ತಳಕಲ್ಲ), ಮೃತ್ಯುಂಜಯ ಖಾದ್ರಿ (ಮಂಗಳೂರು), ಬಾಬ ಹಸರಫ್ ಅಲಿ (ಯಲಬುರ್ಗಾ), ಹಜರತ್ ಹುಸೇನಿ ಆಲಮ್ ದರ್ಗಾ (ಕುದರಿಮೋತಿ), ಯಮನೂರಸ್ವಾಮಿ (ಮುರಡಿ), ಗಂಗಾವತಿ ತಾಲ್ಲೂಕಿನ ಸೈಯದ್ ಮುಸ್ತಾಫ್ ಖಾದ್ರಿ (ಕಾರಟಗಿ), ವೈಬುಸುಬಾನಿ ದರ್ಗಾ (ಚಿಕ್ಕ ಜಂತಕಲ್), ಕುಷ್ಟಗಿ ತಾಲೂಕಿನ ಸೈಯದ್ ಷಾಹ ಅಬ್ದುಲ್ ಹಸನ್ ಖಾದ್ರಿ (ಹನುಮಸಾಗರ), ಸೈಯದ್ ಷಾಹ ಹಮೀನುದ್ದೀನ್ ಖಾದ್ರಿ (ತಾವರಗೇರ) ಮುಂತಾದ ಸೂಫಿ ಸಂತರ ಜೀವನ ಚರಿತ್ರೆ ಹಾಗೂ ಇವರ ಮಠ ಹಾಗೂ ದರ್ಗಾಗಳಲ್ಲಿರುವ ವೈಶಿಷ್ಟತೆಯನ್ನು ಕುರಿತು ಅಭಿವ್ಯಕ್ತಿಸಲಾಗಿದೆ.

ಅಧ್ಯಾಯ ಐದು : ಕನ್ನಡ ನಾಡಿಗೆ ಸೂಫಿ ಹಾಗೂ ತತ್ವಪದಕಾರರ ಕೊಡುಗೆ : ಈ ಅಧ್ಯಾಯದಲ್ಲಿ ಕನ್ನಡ ನಾಡಿಗೆ ಸೂಫಿ ಸಂತರು ಹಾಗೂ ತತ್ವಪದಕಾರರು ಸಾಧಿಸಿರುವ ಕೋಮು ಸೌಹಾರ್ದತೆ ಭಾವನೆಗಳ ವೈಶಿಷ್ಟತೆಯನ್ನು ಇಲ್ಲಿ ಚರ್ಚಿಸಲಾಗಿದೆ. ಕೋಮುವಾದವು ಭಾರತದ ಉದಯೋನ್ಮುಖ ವರ್ಗಗಳಿಗೆ ಪ್ರತಿನಿಧಿಸುವ ಕಾರ್ಯಗಳನ್ನು ಕೈಗೊಂಡಿತು. ಅಲ್ಲದೆ ಬ್ರಿಟಿಷರ ಆಡಳಿತಕ್ಕೆ ನಿಷ್ಠೆಯನ್ನು ತೋರುವ ಹಿಂದು ಕೋಮುವಾದ ಭಾವನೆಗಳನ್ನು ಅರಿತ ಮುಸ್ಲಿಂ ನಾಯಕರು ತಟಸ್ಥರಾಗಿ ಸುಮ್ಮನಿರದೇ ಮುಸ್ಲಿಂ ಜಾಗಿರದಾರರನ್ನು, ಅನುಯಾಯಿಗಳನ್ನು ಸಂಘಟಿಸಿ ಕಾಂಗ್ರೇಸ್ ಪಕ್ಷವು ಹಿಂದೂಗಳಿಗೆ ಮಾತ್ರ ಸೀಮಿತವಾಗಿದೆ ಎಂದು ಪ್ರಚಾರ ಮಾಡಿತ್ತು. ಹೀಗೆ ಒಂದಲ್ಲ ಒಂದು ರೀತಿಯಿಂದ ಗಮನಿಸಿದ ಬ್ರಿಟಿಷರು ಭಾರತದಲ್ಲಿ ಒಡೆದು ದಾಳುವ ನೀತಿಯನ್ನು ಜಾರಿಗೆ ತಂದರು. ಅವರು ಅಷ್ಟಕ್ಕೆ ಕೂಡದೆ ಹಿಂದೂ ಸಿದ್ಧಾಂತಗಳನ್ನು ಪ್ರೋತ್ಸಾಹಿಸಿ ದೇಶದ ವಿಭಜನೆಗೆ ಕಾರಣರಾದರು. ಕೊಪ್ಪಳ ಜಿಲ್ಲೆಯ ಬಹದ್ದೂರಬಂಡಿ, ತಳಕಲ್, ಕುದ್ರಿಮೋತಿ, ಕಾರಟಗಿ, ಹನುಮಸಾಗರ, ತಾವರಗೇರಾ, ಬೆಳಗಟ್ಟಿ, ಬುಳ್ಳಾಪುರ, ಯಲಬುರ್ಗಾ, ಗಂಗಾವತಿ, ಬಿಸರಳ್ಳಿಗಳಲ್ಲಿ ಜಾತ್ರೆಯೇ ಇರಲಿ, ಇಲ್ಲವೇ ಉರುಸು ಆಗಿರಲಿ ಇಲ್ಲಿ ಎಲ್ಲಾ ಧರ್ಮದವರು, ಜಾತಿಗಳವರು, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಏಕತೆಯಿಂದ ಬೆರೆತಿರುವುದನ್ನು ಕಾಣಬಹುದಾಗಿದೆ.

ಕೊಪ್ಪಳ ಜಿಲ್ಲೆಯು ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಧಾರ್ಮಿಕವಾಗಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಪುರಾತನ ಕಾಲದಿಂದ ಇಲ್ಲಿಯವರೆಗೆ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವೆ ಐಕ್ಯತೆ ಎಂಬುವುದು ಕಾಣಿಸಿಕೊಂಡು ಸೌಹಾರ್ದತೆ ಭಾವನೆಯನ್ನು ತುಂಬಿರುವ ಪ್ರಯತ್ನ ಕಂಡು

ಬಂದಿದೆ. ನಮ್ಮಲ್ಲಿ ಇವೆರಡರ ನಡುವೆ ಸೌಹಾರ್ದತೆಯನ್ನು ಕಾಣುವ ಸಂದರ್ಭದಲ್ಲಿ ಭಾರತವನ್ನು ಅವಲೋಕಿಸಿದಾಗ ಮುಸ್ಲಿಂ ಆಳ್ವಿಕೆಯ ಪ್ರಾರಂಭದ ಮೊದಲೇ ಇತ್ತೆಂದು ಹೇಳಬಹುದು. ಈ ದೃಷ್ಟಿಯಿಂದ ಇವೆರಡು ಪೂರಕವಾಗಿ ಇಲ್ಲಿನ ಸೌಹಾರ್ದತೆಗೆ ಕಾರಣವಾಗಿದ್ದವು. ಯಲಬುರ್ಗಾ, ಕುಷ್ಟಗಿ, ಗಂಗಾವತಿ ಮತ್ತು ಕೊಪ್ಪಳ ತಾಲೂಕುನ್ನೊಳಗೊಂಡ ಜಿಲ್ಲೆಯು ಹಲವಾರು ಸೌಹಾರ್ದತಾ ತಾಣಗಳ ಮುಖಾಂತರ ತನ್ನದೆ ಆದ ಛಾಪನ್ನು ಮೂಡಿಸಿದೆ. ಹಿಂದೂ ಧರ್ಮಕ್ಕೆ ಸಂಬಂಧಿಸಿದ ಅನೇಕ ದೇವಾಲಯಗಳು ಇಲ್ಲಿವೆ. ಅಂತೆಯೇ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಅನೇಕ ಮಸೀದಿಗಳು, ದರ್ಗಾಗಳು ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಇವುಗಳಲ್ಲಿ ಆಚರಣಾ ಪದ್ಧತಿಗಳು ಬೇರೆ ಬೇರೆ ಆಗಿದ್ದರೂ ಅಂತರಂಗದಲ್ಲಿ ಒಂದಲ್ಲ ಒಂದು ರೀತಿಯಿಂದ ಜನರ ಸಂಸ್ಕೃತಿಗೆ ಪೂರಕವಾಗಿವೆ. ಹೀಗಾಗಿ ಇಲ್ಲಿನ ತಾಣಗಳನ್ನು ಪರಿಚಯ ಮಾಡಿಕೊಳ್ಳುವುದು ಮುಖ್ಯವಾಗಿದೆ.

ಅಧ್ಯಾಯ ಆರು: ಸಮಕಾಲೀನತೆ ಮತ್ತು ಕೋಮು ಸೌಹಾರ್ದತೆ : ಒಂದು ಕಡೆ ಧರ್ಮ – ಧರ್ಮಗಳ ನಡುವೆ ಸಾಹಿತ್ಯ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ಕುತೂಹಲ ಮೂಡಿಸುವಂತೆ ಕಂಡು ಬಂದರೂ ಮತ್ತೊಂದೆಡೆ ಅವುಗಳ ನಡುವೆ ಕಂಡೂ ಕಾಣದಂತೆ ಸಂಘರ್ಷ ಉಂಟಾಗಿದ್ದನ್ನು ಕಾಣುತ್ತೇವೆ. ಕಾರಣ ಅವರವರ ಧರ್ಮದ ಅಥವಾ ಕೋಮುವಿನ ಶ್ರೇಷ್ಠತೆಯೆಂಬುದೇ ಇಲ್ಲಿ ಮುಖ್ಯ ಹೀಗಾಗಿ ಈ ಧರ್ಮವು ಕೋಮುಗಲಭೆಗಳನ್ನು ಸೃಷ್ಟಿ ಮಾಡುತ್ತಿರುವದು ಶೋಚನೀಯ ಸಂಗತಿಯಾಗಿದೆ.

ಯಾವ ಧರ್ಮಗಳು ಜನರ ಜೀವನದ ವಿಧಾನವನ್ನು ಸುವ್ಯವಸ್ಥೆಯಿಂದ ಕಾಪಾಡಬೇಕಿತ್ತೋ ಆ ಧರ್ಮಗಳೇ ಒಂದು ಕೋಮು, ಮತ ಹಾಗೂ ಜಾತಿಗೆ ಸೀಮಿತಪಡಿಸಿ ಜನರ ನಡುವೆ ಸೌಹಾರ್ದವನ್ನುಂಟುಮಾಡದೆ ಕೋಮುದಳ್ಳುರಿಯನ್ನು ಎಬ್ಬಿಸುವಂತಹ ಹಲವಾರು ದುಷ್ಟ ಶಕ್ತಿಗಳು ಜಗತ್ತಿನಲ್ಲಿ ಕಾಣುತ್ತವೆ. ಭಾರತೀಯ ಸಂದರ್ಭದಲ್ಲಿ ಈ ಮಾತು ಒಪ್ಪುವಂತಹ ಸಂಗತಿಯಾಗಿದೆಂದರೆ ತಪ್ಪಾಗಲಾರದು, ಏಕೆಂದರೆ, ಭಾರತವು ಮುಖ್ಯವಾಗಿ ಎಲ್ಲಾ ಧರ್ಮಗಳಲ್ಲೂ ವಿಭಿನ್ನತೆಯನ್ನು ಕಂಡರೂ, ಅಂತರಂಗದಲ್ಲಿ ಹಿಂದೂ – ಮುಸ್ಲಿಂ ಕೋಮುಗಳ ನಡುವೆ ಉದ್ಭವಿಸುವಂತಹ ವಿಚಾರಗಳಿಗೆ ಕೊಡಲಿ ಪೆಟ್ಟನ್ನು ಹಾಕದೆ, ಉರಿಯುವ ಬೆಂಕಿಗೆ ತುಪ್ಪವ ಸುರಿಯುವಂತಹ ಕೆಲಸವನ್ನು ಮಾಡುತ್ತಿರುವುದು ಅತ್ಯಂತ ಅಪಾಯಕಾರಿ ಸಂಗತಿಯಾಗಿದೆ.

ಸತ್ಯ ಸಂಗತಿಗಳನ್ನು ಸಮಾಜದ ಮುಂದಿಡುತ್ತಿದ್ದ ಸೂಫಿ–ಸಂತರ ಕುರಿತಾದ ವಿಚಾರಗಳನ್ನು ಈ ಅಧ್ಯಾಯದಲ್ಲಿ ಉಲ್ಲೇಖಿಸುತ್ತಾ ಕೋಮು–ಸೌಹಾರ್ದತೆಯ ಪಂಥಗಳು, ಮತ್ತು ಅವುಗಳ ತಾಣಗಳ ಕುರಿತು ಮಾಹಿತಿಗಳನ್ನು ಒದಗಿಸುತ್ತಾ ಪ್ರಮುಖವಾಗಿ ಕೊಪ್ಪಳ ಜಿಲ್ಲೆಯ ಕೋಮು–ಸೌಹಾರ್ದತೆಯ

ನೆಲೆಗಳನ್ನು ಗುರುತಿಸಿ ಅವು ಬೆಳೆಸಿಕೊಂಡು ಬಂದ ಕೋಮು ಸೌಹಾರ್ದತೆ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಈ ಎಲ್ಲಾ ಅಂಶಗಳನ್ನು ಪ್ರಸ್ತುತ ಅಧ್ಯಯನಗಳಲ್ಲಿ ಅಳವಡಿಸಿಕೊಂಡು ಕೊಪ್ಪಳ ಜಿಲ್ಲೆಯಲ್ಲಿನ ಕೋಮು ಸೌಹಾರ್ದತೆಯ ತಾಣಗಳಲ್ಲಿ ನಡೆಯುತ್ತಿರುವ ಆಚರಣೆ, ಸಂಪ್ರದಾಯ, ಭಕ್ತರ ಧಾರ್ಮಿಕ ಭಾವನೆಗಳನ್ನು ಹಿಡಿದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇಲ್ಲಿನ ಕೋಮು–ಸೌಹಾರ್ದತೆಯ ತಾಣಗಳ ಪಂಥಗಳ ಅರ್ಥ, ಉದ್ದೇಶ ವ್ಯಾಪ್ತಿಗಳನ್ನು ಹೇಳುವ ಸಂದರ್ಭದಲ್ಲಿ ಇದಕ್ಕೆ ಒಂದು ರೀತಿಯಲ್ಲಿ ಮುಖ್ಯವೆನಿಸುವ ಕೋಮು–ಸೌಹಾರ್ದತೆಗೆ ಕಾರಣವಾಗಿರುವ ಅನೇಕ ಹಿಂದೂ – ಮುಸ್ಲಿಂರು ಸೇರಿಕೊಂಡು ಆರಾಧಿಸುವ ಸ್ಥಳಗಳನ್ನು ಮತ್ತು ಅವುಗಳ ಚರಿತ್ರೆಗಳನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಪ್ರಯತ್ನಿಸಲಾಗಿದೆ. ಇಲ್ಲಿ ಅತಿ ಮುಖ್ಯವಾಗಿ ಸೂಫಿಗಳು, ಶರಣರು, ಸಂತರು, ತತ್ವಪದಕಾರರು, ರಾಜಮಹಾರಾಜರು ಕೊಪ್ಪಳ ಜಿಲ್ಲೆಯ ಕೋಮು – ಸೌಹಾರ್ದ ಸಾಮರಸ್ಯಕ್ಕೆ ತುಂಬಾ ಮಹತ್ತರವಾದ ಕೊಡುಗೆಯನ್ನು ನೀಡಿದ್ದಾರೆ. ಈ ಎಲ್ಲಾ ಮಾಹಿತಿಗಳಿಗೆ ಪೂರಕವೆಂಬಂತೆ ಪ್ರಮುಖವಾಗಿ ಕೋಮು – ಸೌಹಾರ್ದತೆಗೆ ಇಲ್ಲಿನ ಧಾರ್ಮಿಕ ತಾಣಗಳ ಕೊಡುಗೆಗಳೇನು ಹಾಗೂ ಕೊಪ್ಪಳ ಜಿಲ್ಲೆಯಲ್ಲಿನ ಪ್ರಮುಖ ಕೋಮು ಸೌಹಾರ್ದತೆಯ ತಾಣಗಳಾವವು ಎಂಬುದನ್ನು ಚರ್ಚಿಸಲಾಗಿದೆ.

ಅಧ್ಯಾಯ ಏಳು : ಸಮಾರೋಪಾದಿಯಲ್ಲಿ ಕ್ಷೇತ್ರಗಳ ಕುರಿತು, ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸುವುದು, ಹಾಗೆಯೇ ಈ ಕೋಮು–ಸೌಹಾರ್ದತೆಯ ತಾಣಗಳಲ್ಲಿ ಭಕ್ತರು ಯಾವ ರೀತಿ ಆಚರಣೆಗಳನ್ನು, ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಇವುಗಳ ಹಿಂದಿನ ಉದ್ದೇಶಗಳನ್ನು, ಮುಂದಿನ ದಿನಗಳಲ್ಲಿ ಈ ಕೋಮು – ಸೌಹಾರ್ದತೆಯ ತಾಣಗಳ ಕಾರ್ಯವೈಖರಿ ಹೇಗಿರಬೇಕು ಎಂಬುದನ್ನು ಸಹ ಅಧ್ಯಯನದ ದೃಷ್ಟಿಯಿಂದ ನೋಡಲಾಗಿದೆ. ಅನುಬಂಧದಲ್ಲಿ ನಕಾಶೆ, ಆಕರ ಗ್ರಂಥಗಳನ್ನು, ಛಾಯಾಚಿತ್ರಗಳನ್ನು ಮತ್ತು ವಕ್ತೃಗಳ ಪಟ್ಟಿಯನ್ನು ನೀಡಲಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ಕೊಪ್ಪಳ ಜಿಲ್ಲೆಯ ಬಹುಪಾಲು ಸ್ಥಳಗಳ ಕ್ಷೇತ್ರ ಕಾರ್ಯ ಮಾಡುವುದರ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನ ನಡೆಸಲಾಗಿ ಇಡೀ ಅಧ್ಯಯನವು ಕೊಪ್ಪಳ ಜಿಲ್ಲೆಯ ನಾಡಿನ ಕೋಮು ಸೌಹಾರ್ದತೆಗೆ ನೀಡಿದ ಕೊಡುಗೆಯನ್ನು ಕುರಿತು ಚರ್ಚಿಸಲಾಗಿದೆ.

# ಅಧ್ಯಾಯ ೨

## ಕೊಪ್ಪಳ ಜಿಲ್ಲೆಯ ಭೌಗೋಳಿಕ ಅಂಶಗಳು

೨.೧ ಭೌಗೋಳಿಕತೆ

೨.೨ ಚಾರಿತ್ರಿಕ ಹಿನ್ನಲೆ

೨.೩ ಶೈಕ್ಷಣಿಕ ಹಾಗೂ ರಾಜಕೀಯತೆ

೨.೪ ಸಾಹಿತ್ಯಿಕ ಅಂಶಗಳು

೨.೫ ಸಾಮಾಜಿಕ ಮತ್ತು ಸಾಂಸ್ಕೃತಿಕ ಅವಲೋಕನ

೨.೬ ಶಾಸನಾತ್ಮಕ ಆಧಾರಗಳು

೨.೭ ಐತಿಹಾಸಿಕ ಸ್ಥಳಗಳು

# ಅಧ್ಯಾಯ-೨

## ಕೊಪ್ಪಳ ಜಿಲ್ಲೆಯ ಭೌಗೋಳಿಕ ಅಂಶಗಳು

ಯಾವುದೇ ಒಂದು ಪ್ರದೇಶದ ಸ್ಥಿತಿ-ಗತಿಗಳನ್ನು ತಿಳಿದುಕೊಳ್ಳುವ ಮುನ್ನ ಅಲ್ಲಿನ ಸಾಹಿತ್ಯಿಕ ಆಧಾರಗಳು, ಚಾರಿತ್ರಿಕ ಘಟನೆಗಳು, ಸಾಂಸ್ಕೃತಿಕ ಮತ್ತು ಧಾರ್ಮಿಕ ಅಂಶಗಳನ್ನು ತಿಳಿದುಕೊಳ್ಳುವುದು ಮುಖ್ಯವಾಗುತ್ತದೆ. ಈ ಅಂಶಗಳನ್ನಷ್ಟೇ ಪರಿಗಣಿಸಿದರೆ ಸಂಪೂರ್ಣವಾಗಿ ಆ ಪರಿಸರವನ್ನು ತಿಳಿದುಕೊಳ್ಳಲು ಆಗುವುದಿಲ್ಲ. ಆದ್ದರಿಂದ ಇವುಗಳ ಜೊತೆಗೆ ಅಲ್ಲಿನ ಪ್ರಾಕೃತಿಕ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳವದು ಮುಖ್ಯವೆನಿಸುತ್ತದೆ. ಮಾನವನು ಪರಿಸರದ ಕೂಸು. ಆದುದರಿಂದ ಅವನು ಅನಾದಿಕಾಲದಿಂದಲೂ ಪರಿಸರದ ಕೂಸಾಗಿ ಬೆಳೆದು ನಿಸರ್ಗದೊಡನೆ ಹೋರಾಡುತ್ತಾ ಬೆಳೆದಿರುವುದು ಗಮನಾರ್ಹ. ಹೀಗಾಗಿ ನಮ್ಮ ಸುತ್ತಮುತ್ತ ಕಂಡುಬರುವ ನಿಸರ್ಗದತ್ತವಾದ ಅಂಶಗಳೇ ಒಮ್ಮೊಮ್ಮೆ ಅಲ್ಲಿನ ಸ್ಥಿತಿ-ಗತಿಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆಗಳು ಹೆಚ್ಚಾಗಿರುತ್ತದೆ.

ಶಿಲಾಯುಗದ ಕಾಲದಿಂದಲೂ ಈ ಜಿಲ್ಲೆಯ ಇತಿಹಾಸವನ್ನು ತಿಳಿಯಬಹುದಾಗಿದೆ. ಕೊಪ್ಪಳ ಪ್ರದೇಶದಲ್ಲಿ ಜನವಸತಿ ಸೌಕರ್ಯದ ಕುರಿತಂತೆ ನಾಗರಿಕತೆ ಬೆಳೆದುಕೊಳ್ಳುತ್ತಾ ಬಂದಿರುವುದಕ್ಕೆ ಹಲವಾರು ಸ್ಥಳಗಳೇ ಸಾಕ್ಷಿ. ಅವುಗಳೆಂದರೆ ತಾವರಗೇರೆ, ಕೊಪ್ಪಳ ಅಲ್ಲದೇ ಕೊಪ್ಪಳ-ತಾಲೂಕಿನ ಇಂದ್ರಗಿ, ಗಂಗಾವತಿ ತಾಲೂಕಿನ ಹಿರೇಬೆಣಕಲ್ ಹಾಗೂ ಏಳುಗುಡ್ಡಗಳಲ್ಲಿ ದೊರಕಿರುವ ಗವಿ ವರ್ಣಚಿತ್ರಗಳು ಹಾಗೂ ಆದಿಮಾನವನ ವಾಸ ಮುಂತಾದವುಗಳು ಕ್ರಿ.ಪೂ.೧೦,೦೦೦-೪,೦೦೦ ವರ್ಷಗಳ ಸೂಕ್ಷ್ಮ ಶಿಲಾಯುಗದ ಪೂರ್ವಕಾಲದವೆಂಬ ಅಂಶ ಒಂದು ಕಡೆಯಾದರೆ, ಇನ್ನೊಂದೆಡೆ ಏಳುಬೀಳುಗಳಿಂದಾಗಿಯೇ ಈ ಪ್ರದೇಶ ಹಿಂದುಳಿದಿದೆ ಎಂಬುದು ಈ ಪ್ರಾಕೃತಿಕ ಕಾರಣಗಳಿಂದಾಗಿ ಗೊತ್ತಾಗುತ್ತದೆ.

ಈ ಜಿಲ್ಲೆಯ ಪ್ರದೇಶದಲ್ಲಿನ ನೈಸರ್ಗಿಕ ಸಂಪತ್ತು, ಹವಾಗುಣ, ನಿಸರ್ಗದತ್ತ ಪ್ರಾದೇಶಿಕ ಮೇರೆಗಳು, ಇಲ್ಲಿ ಸಿಗುವ ನೀರಿನ ಮೂಲ, ಜನಸಾಂದ್ರತೆ, ಸಾರಿಗೆ ಸಂಪರ್ಕ, ಔದ್ಯೋಗಿಕರಣಗಳಂತಹ ಅನೇಕಾನೇಕ ಅಂಶಗಳನ್ನು ಅವಲೋಕಿಸಬೇಕಾಗುತ್ತದೆ. ಇವುಗಳ ಮೇಲೆಯೇ ಈ ಪ್ರದೇಶದ ಜನರ ಸಂಸ್ಕೃತಿ, ಭಾಷೆ, ಜನಜೀವನದ ಅಸ್ತಿತ್ವ ರೂಪಗೊಂಡಿರುತ್ತದೆ. ಈ ಮೇಲೆ ಹೇಳಿದ ಎಲ್ಲ ಅಂಶಗಳನ್ನು ಕೆಳಗಿನಂತೆ ಪ್ರಸ್ತುತ ಅಧ್ಯಾಯದಲ್ಲಿ ವಿಭಾಗೀಕರಿಸಿ ವಿಶ್ಲೇಷಣೆ ಮಾಡಲಾಗಿದೆ.

**೨.೧: ಭೌಗೋಳಿಕತೆ**

**೨.೨: ಚಾರಿತ್ರಿಕ ಹಿನ್ನಲೆ**

೨.೩. ಶೈಕ್ಷಣಿಕ ಹಾಗೂ ರಾಜಕೀಯತೆ

೨.೪: ಸಾಹಿತ್ಯಿಕ ಅಂಶಗಳು

೨.೫: ಸಾಮಾಜಿಕ ಹಾಗೂ ಸಾಂಸ್ಕೃತಿಕ ಅವಲೋಕನ

೨..೬: ಶಾಸನಾತ್ಮಕ ಆಧಾರಗಳು

೨.೬: ಐತಿಹಾಸಿಕ ಸ್ಥಳಗಳು

**೨.೧: ಭೌಗೋಳಿಕತೆ :**

ಒಂದು ಪ್ರದೇಶದ ಗುಣಲಕ್ಷಣಗಳನ್ನು ಅರಿಯಬೇಕಾದರೆ, ಅಲ್ಲಿನ ಭೌಗೋಳಿಕ ಪರಿಸರವನ್ನು ಗಮನಿಸುವುದು ಅತೀ ಮುಖ್ಯವಾಗುತ್ತದೆ. ಈ ಭೌಗೋಳಿಕ ಅಂಶಗಳ ಮೇಲೆಯೇ ಅಲ್ಲಿನ ಜನರ ಆಗು-ಹೋಗುಗಳು ಅವಲಂಬಿತವಾಗಿರುತ್ತವೆ. ಇಲ್ಲಿ ಭೌಗೋಳಿಕ ಅಂಶಗಳೆಂದರೆ ನೈಸರ್ಗಿಕ ಸಂಪತ್ತು, ಹವಾಗುಣ, ಪ್ರಾದೇಶಿಕ ಮೇರೆಗಳು, ವೃತ್ತಿ, ಜನಸಾಂದ್ರತೆ, ಸಾರಿಗೆ-ಸಂಪರ್ಕ, ಔದ್ಯೋಗಿಕತೆ ಮೊದಲಾದವುಗಳು. ಇವು ಈ ಪ್ರದೇಶದ ಜನರ ಸಂಸ್ಕೃತಿ, ಭಾಷೆ ಮತ್ತು ಜನರ ಜೀವನದ ಮೇಲೆ ಪ್ರಭಾವ ಬೀರುತ್ತವೆ. ಈ ಹಿನ್ನಲೆಯಿಂದಾಗಿ ಕೊಪ್ಪಳವು ಪುರಾಣ ಪ್ರಸಿದ್ಧ ಸ್ಥಳವೂ ಹೌದು ಹಾಗೂ ಇತಿಹಾಸ ಪ್ರಸಿದ್ಧ ಸ್ಥಳವೂ ಆಗಿದೆ.

"ಕರ್ನಾಟಕ ರಾಜ್ಯದ ಈಶಾನ್ಯ ದಿಕ್ಕಿಗಿರುವ ಕೊಪ್ಪಳವು ಇಂದು ಜಿಲ್ಲಾ ಕೇಂದ್ರವಾಗಿ ಮಾರ್ಪಟ್ಟಿದೆ. ಈ ಮುಂಚೆ ರಾಯಚೂರು ಜಿಲ್ಲೆಯ ಒಂದು ತಾಲೂಕಾಗಿತ್ತು. ಇದನ್ನು ಶ್ರೀ ಜೆ.ಎಚ್.ಪಟೇಲರ ಸರಕಾರವು ಕೊಪ್ಪಳವನ್ನು ೧೯೯೭ ರಲ್ಲಿ ಜಿಲ್ಲಾ ಕೇಂದ್ರವಾಗಿ ಘೋಷಿಸಿತು. ಈ ನೂತನ ಜಿಲ್ಲೆಯು ಕೊಪ್ಪಳ, ಕುಷ್ಟಗಿ, ಗಂಗಾವತಿ ಹಾಗೂ ಯಲಬುರ್ಗಾ ತಾಲೂಕು ಕೇಂದ್ರಗಳನ್ನೊಳಗೊಂಡಿದೆ. ಕೊಪ್ಪಳ ಜಿಲ್ಲೆಯು ಪೂರ್ವ ರೇಖಾಂಶ ೭೫-೭೬ ರಿಂದ ೭೭-೫೦ ಹಾಗೂ ೧೫-೧೦ ರಿಂದ ೧೬-೫೧ ಉತ್ತರ ಅಕ್ಷಾಂಶದ ನಡುವೆ ಇದೆ. ಇದು ಸಮುದ್ರ ಮಟ್ಟದಿಂದ (ಎಂ.ಎಸ್.ಎಲ್) ೫೨೩.೦೪ ಮೀಟರ್ ಎತ್ತರದಲ್ಲಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ೭೧೮೯.೦೦ ಇದ್ದು (ಕುಷ್ಟಗಿ-೧೩೭೦.೩೮, ಕೊಪ್ಪಳ-೧೩೬೪.೨೫, ಗಂಗಾವತಿ-೧೩೧೧.೨೧, ಹಾಗೂ ಯಲಬುರ್ಗಾ-೧೪೮೯.೬೬) ಚದರ ಕಿಲೋಮೀಟರ್‌ಗಳಿವೆ. ಜಿಲ್ಲೆಯಲ್ಲಿ ನಾಲ್ಕು ತಾಲೂಕುಗಳು, ೨೦ ಹೋಬಳಿಗಳು, ೧೩೪ ಗ್ರಾಮ ಪಂಚಾಯಿತಿಗಳು, ೬೨೯ ಕಂದಾಯ ಗ್ರಾಮಗಳು, ೫೯೪ ಜನವಸತಿ, ಮತ್ತು ಜನವಸತಿ ಇಲ್ಲದ ೩೫ ಗ್ರಾಮಗಳು ಕಂಡು ಬರುತ್ತವೆ. ಕಪ್ಪಾದ ಎರೆ ಭೂಮಿ, ಕೆಂಪು ಮಸಾರಿ, ಕೆಲವು ಕಡೆ ಸವಳು(ಜವಳು), ಜೇಡಿ ಮಣ್ಣಿನಿಂದ ಫಲವತ್ತಾದ ಭೂಮಿಯನ್ನೊಳಗೊಂಡ ಜಿಲ್ಲೆ ಕೊಪ್ಪಳ. ಅಲ್ಲದೇ ಜಿಲ್ಲೆಯಾದ್ಯಂತ ಅಲ್ಲಲ್ಲಿ ಬೆಟ್ಟ-ಗುಡ್ಡಗಳಿದ್ದು, ನಿಸರ್ಗ ತಾಣಗಳಾಗಿರುವುದನ್ನು ಕಾಣುತ್ತೇವೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ಕುರಿತಂತೆ ಈ ಕೆಳಗಿನ ಕೋಷ್ಟಕವನ್ನು ನೀಡಲಾಗಿದೆ."[1]

**ಜಿಲ್ಲೆಯ ತಾಲ್ಲೂಕುವಾರು ವಿಸ್ತೀರ್ಣದ ಕೋಷ್ಟಕ :**

| ಕ್ರಸಂ. | ತಾಲ್ಲೂಕುಗಳು | ಭೌಗೋಳಿಕ ವಿಸ್ತೀರ್ಣ (ಚದರ ಕಿಲೋಮೀಟರ್) |
|---|---|---|
| ೧ | ಕುಷ್ಟಗಿ | ೧೩೬೬ |
| ೨ | ಕೊಪ್ಪಳ | ೧೩೨೫ |
| ೩ | ಗಂಗಾವತಿ | ೧೩೨೮ |
| ೪ | ಯಲಬುರ್ಗಾ | ೧೪೬೦ |
| **ಒಟ್ಟು** | **ಜಿಲ್ಲೆ** | **೫೫೫೯** |

ಈ ಜಿಲ್ಲೆಯ ಕುಷ್ಟಗಿ ಮತ್ತು ಗಂಗಾವತಿ ತಾಲೂಕುಗಳು ಎತ್ತರ ಪ್ರದೇಶದಲ್ಲಿದ್ದು, ತನ್ನದೇ ಆದ ಮಹತ್ವವನ್ನು ಪಡೆದಿವೆ. ಕುಷ್ಟಗಿ ತಾಲೂಕಿನಲ್ಲಿ ಎಮ್ಮಿ ಗುಡ್ಡ, ಕೊಪ್ಪಳದಲ್ಲಿ ಮಳೆಮಲ್ಲೇಶ್ವರ ಗುಡ್ಡ, ಯಲಬುರ್ಗಾದ ಈಶಾನ್ಯ ಭಾಗದಲ್ಲಿ ನಿರ್ಮಲ ಬಂಡೆಗಳಲ್ಲದೆ, ಹನುಮಸಾಗರ, ಗುಡುದೂರು ಮತ್ತು ಹುಲಿಹೈದರಗಳ ಪರಿಸರದಲ್ಲಿ ಬೆಟ್ಟಗುಡ್ಡಗಳ ಸಾಲುಗಳಿವೆ. ಈ ಜಿಲ್ಲೆಯ ಭೂಗರ್ಭದಲ್ಲಿ ಪೂರ್ವಕೆಂಬ್ರಿಯನ್ ಕಾಲದ ಪಿಷ್ಟ ಹಾಗೂ ಗ್ರ್ಯಾನೈಟ್ ಶಿಲೆಗಳಿವೆ. ಕುಷ್ಟಗಿಯ ಜಗದಗುಡ್ಡದಲ್ಲಿ ಸಾಧಾರಣ ಮಟ್ಟದ ಕಬ್ಬಿಣದ ಅದಿರು, ಅಭ್ರಕ ಹಾಗೂ ಗಾಜು ಮಿಶ್ರಿತ ಮತ್ತು ಈಚನಿ ವಸ್ತುಗಳ ಕಾರ್ಖಾನೆಗೆ ಬೇಕಾಗುವ ಬಿಳಿಯ ಬಣ್ಣದ ಬೆಣಚುಕಲ್ಲುಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ.

**ಕೊಪ್ಪಳ ಜಿಲ್ಲೆಯ ಗಡಿ ಭಾಗ :**

ಇನ್ನುಳಿದಂತೆ ಕೊಪ್ಪಳ ಜಿಲ್ಲೆಯ ಉತ್ತರಕ್ಕೆ ಬಾಗಲಕೋಟೆ ಜಿಲ್ಲೆ, ಈಶಾನ್ಯ ಮತ್ತು ಪೂರ್ವಕ್ಕೆ ರಾಯಚೂರು ಜಿಲ್ಲೆ, ಆಗ್ನೇಯ ಹಾಗೂ ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆ ಹಾಗೂ ಪಶ್ಚಿಮಕ್ಕೆ ಗದಗ ಜಿಲ್ಲೆಗಳ ಗಡಿಗಳನ್ನು ಹೊಂದಿದೆ. ಈ ಜಿಲ್ಲೆಯು ಸಮುದ್ರ ಪಾತಳಿದಿಂದ ೫೨೩.೦೪ ಮೀಟರ್ ಎತ್ತರದಲ್ಲಿದೆ. ಮಳೆಯ ನೆರಳಿನ ಪ್ರದೇಶದಲ್ಲಿರುವುದರಿಂದ ಹವೆಯು ತಂಪಾಗಿರದೆ, ಸಾಮಾನ್ಯವಾಗಿ ಒಣ ಹವೆಯಿಂದ ಕೂಡಿರುತ್ತದೆ. ವರ್ಷದಿಂದ ವರ್ಷಕ್ಕೆ ಬೀಳುವ ಮಳೆಯಲ್ಲಿನ ಆಗಾಧ ವ್ಯತ್ಯಾಸವು ಈ ಜಿಲ್ಲೆಯ ಜನರ ಜೀವನ ಮಟ್ಟದ ಮೇಲೆ ಅಷ್ಟೇ ಪ್ರಭಾವ ಬೀರುತ್ತದೆ. ವಿಶೇಷವಾಗಿ ಕೊಪ್ಪಳ ಹಾಗೂ ಗಂಗಾವತಿ ತಾಲ್ಲೂಕುಗಳೆರಡೂ ಕಲ್ಲುಗುಡ್ಡಕ್ಕೆ ಹೊಂದಿಕೊಂಡಿರುವುದರಿಂದ ತಾಪಮಾನ ಹೆಚ್ಚಾಗಿರುತ್ತದೆ. ಇದರಿಂದಾಗಿ ಬೇಸಿಗೆ ಕಾಲವು ಅತೀ ದೀರ್ಘವಾಗಿದ್ದು, ಫೆಬ್ರುವರಿ ಮಧ್ಯಭಾಗದಿಂದ ಮೇ ತಿಂಗಳ ಕೊನೆಯವರೆಗೂ ಹಾಗೂ ಕೆಲವೊಮ್ಮೆ ಜೂನ್ ತಿಂಗಳವರೆಗೂ ವಿಸ್ತರಿಸುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಜೂನ್ ಆರನೆಯ ದಿನಾಂಕದಂದು ನೈರುತ್ತ ಮಾನ್ಸೂನ್ ಪ್ರವೇಶಿಸುತ್ತದೆ. ಜುಲೈ, ಆಗಸ್ಟ,

ಸೆಪ್ಟಂಬರ ಹಾಗೂ ಅಕ್ಟೋಬರ್ ತಿಂಗಳಿನಲ್ಲಿ ಈ ಭಾಗದಲ್ಲಿ ಹೆಚ್ಚಾಗಿ ಮಳೆಗಾಲವಿರುತ್ತದೆ. ಇತರ ಕಾಲದಲ್ಲಿ ೩೦-೩೫ ಸೆಲ್ಸಿಯಸ್ ತಾಪಮಾನವಿರುತ್ತದೆ. ಅಲ್ಲದೇ ಈ ಪ್ರದೇಶಗಳಲ್ಲೆಲ್ಲಾ ಹೆಚ್ಚಾಗಿ ವರ್ಷದ ಎಲ್ಲ ಕಾಲಗಳಲ್ಲಿಯೂ ಅತೀ ವೇಗವಾಗಿ ಗಾಳಿ ಬೀಸುತ್ತದೆ. ಬೇಸಿಗೆಯಲ್ಲಿ ತೀವ್ರವಾದ ಉಷ್ಣ ಹವೆ ಎಲ್ಲಾ ಕಡೆ ಅತಿಯಾಗಿ ಹಬ್ಬಿರುತ್ತದೆ. ಈ ಬಿಸಿಲಿನ ಪ್ರಖರತೆಗೆ ದೇಹ ಸುಸ್ತಾಗಿ ಕೆಲಸ ಮಾಡದಂತಾಗುತ್ತದೆ. ಅಲ್ಲದೆ ಅತಿಯಾದ ಬಿಸಿಲು ಮತ್ತು ಉಷ್ಣ ಹವೆಯಿಂದಾಗಿ ಪ್ರತಿ ವರ್ಷ ಇಲ್ಲಿ ಸಾವುಗಳೂ ಸಂಭವಿಸುವ ಸಾಧ್ಯತೆಗಳು ಹೆಚ್ಚಾಗಿ ಕಂಡುಬರುತ್ತವೆ.

**ಈ ಜಿಲ್ಲೆಯ ಪ್ರಮುಖ ಬೆಳೆಗಳು :**

ಇಂತಹ ಹವಾಮಾನ, ಮಳೆ, ವಾಯುಗುಣಗಳಿಂದಾಗಿ ಈ ಪ್ರದೇಶದಲ್ಲಿ ಹೆಸರು, ಉದ್ದು, ಮಡಿಕೆ, ಅಲಸಂದಿ, ತೊಗರಿಯಂತಹ ಬೇಳೆಕಾಳು, ಎಣ್ಣೆಕಾಳು, ತರಕಾರಿ, ಹಣ್ಣು-ಆಹಾರ ಧಾನ್ಯಗಳಾದ ಜೋಳ, ಗೋಧಿ, ಭತ್ತ, ರಾಗಿ, ನವಣೆ, ಮೆಕ್ಕೆ, ಸಜ್ಜೆಗಳಂತಹ ದವಸ-ಧಾನ್ಯಗಳನ್ನು ಬೆಳೆಯುತ್ತಾರೆ. ಜಿಲ್ಲೆಯಲ್ಲಿ ರೈತರು ಇತ್ತೀಚೆಗೆ ಪಪ್ಪಾಯ, ದಾಳಿಂಬೆ, ಕರಬೂಜ, ಕಲ್ಲಂಗಡಿ ಹಣ್ಣಗಳನ್ನು ಬೆಳೆದು, ವಿದೇಶಗಳಿಗೆ ರಫ್ತು ಮಾಡುತ್ತಾರೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವನ್ನು ಈ ಕೆಳಗಿನಂತೆ ಕೋಷ್ಟಕದಲ್ಲಿ ನೀಡಲಾಗಿದೆ."[೨]

**ಜಿಲ್ಲೆಯ ಪ್ರಮುಖ ಬೆಳೆಗಳು:**

| **ಕ್ರಸಂ** | **ಮುಖ್ಯ ಬೆಳೆಗಳು** | **ಬೆಳೆಗಳ ಪ್ರದೇಶ (ಹೆಕ್ಟೇರುಗಳಲ್ಲಿ)** |
|---|---|---|
| ೧ | ಭತ್ತ | ೫೭,೯೬೨ |
| ೨ | ಜೋಳ | ೮೪,೭೭೬ |
| ೩ | ಸಜ್ಜೆ | ೪೭,೫೯೯ |
| ೪ | ಗೋದಿ | ೧೨,೪೨೨ |
| ೫ | ಮುಸುಕಿನ ಜೋಳ | ೭,೧೫೩ |
| ೬ | ಉಪಧಾನ್ಯಗಳು | ೧೧,೮೬೮ |
| | **ಒಟ್ಟು ಏಕದಳ ಧಾನ್ಯಗಳು** | **೨,೨೧,೭೮೫ (೬೦,೪೨)** |
| ೧ | ಕಡಲೆ | ೧೨,೯೪೯ |
| ೨ | ತೊಗರಿ | ೧೪,೯೫೮ |
| | **ಇತರೇ ದ್ವಿದಳ ಧಾನ್ಯಗಳು** | **೫೮,೯೭೧ (೧೬.೦೭)** |
| ೧ | ಶೇಂಗಾ | ೫೧,೩೫೦ |
| ೨ | ಕಬ್ಬು | ೨,೯೧೨ |

| | | |
|---|---|---|
| ೩ | ಹತ್ತಿ | ೨೪,೭೧೧ |
| | **ಒಟ್ಟು ವಾಣಿಜ್ಯ ಬೆಳೆಗಳು** | **೭೮,೯೭೩ (೨೧,೫೨)** |
| ೧ | **ಪ್ರಮುಖ ಬೆಳೆಗಳು ಬೆಳೆಯುವ ಪ್ರದೇಶ** | **೩,೫೫,೭೨೫ (೯೮,೦೧)** |
| ೨ | **ಅಧಿಕ ಇಳುವರಿ ಬೆಳೆಗಳು** | **೧,೪೬,೬೧೦ (೩೯,೯೪)** |
| ೧ | ಸಾರಜನಕ ಗೊಬ್ಬರ | ೨೭,೯೦೦ |
| ೨ | ರಂಜಕ ಗೊಬ್ಬರ | ೧೧,೦೦೦ |
| ೩ | ಪೋಟ್ಯಾಷ್ | ೫೨,೦೦೦ |
| | **ಒಟ್ಟು ರಾಸಾಯನಿಕ ಗೊಬ್ಬರ** | **೪೪,೧೦೦** |

**ನೀರಿನ ಮೂಲ:**

ಈ ಪ್ರದೇಶವು ಸಮುದ್ರ ಮಟ್ಟದಿಂದ ೫೨೩.೦೪ ಚ.ಕಿ.ಮೀ ಎತ್ತರದಲ್ಲಿರುವುದರಿಂದ ಇಲ್ಲಿನ ಗಟ್ಟಿ ಶಿಲಾಪದರುಗಳಿಂದ ಅಂತರ್ಜಲದ ಮಟ್ಟ ಆಳದಲ್ಲಿದೆ. ಅಲ್ಲದೇ ಮಳೆಯ ಸರಾಸರಿ ಪ್ರಮಾಣ ಕಡಿಮೆಯಾಗಿರುವುದರಿಂದ ಇಲ್ಲಿನ ಅಂತರ್ಜಲ ಮಟ್ಟದ ಪ್ರಮಾಣ ಕಡಿಮೆಯಾಗಿದೆ. ಆದಾಗ್ಯೂ ನದಿ, ಅಣೆಕಟ್ಟು, ಕಾಲುವೆಗಳಲ್ಲಿನ ಒಳ ಹರಿವು, ಕುಡಿಯುವ ಮತ್ತು ನೀರಾವರಿಯ ಸೌಲಭ್ಯ ಒದಗಿಸಿವೆ. ಈ ಜಿಲ್ಲೆಯ ದಕ್ಷಿಣ ಗಡಿಯಲ್ಲಿ ಹರಿಯುವ ತುಂಗಾಭದ್ರಾ ನದಿ ಇಲ್ಲಿನ ಜೀವ ನದಿಯಾಗಿದೆ.

ತುಂಗಾಭದ್ರಾ ನದಿಗೆ ಕಟ್ಟಿದ ಅಣೆಕಟ್ಟು ಮತ್ತು ಅಣೆಕಟ್ಟಿನ ಎಡದಂಡೆ ಕಾಲುವೆ ಕೊಪ್ಪಳ ಹಾಗೂ ಗಂಗಾವತಿ ತಾಲೂಕುಗಳಿಗೆ ವರದಾನವಾಗಿದೆ. ಗಂಗಾವತಿ ತಾಲೂಕಿನ ೩,೬೨೦೫ ಹೆಕ್ಟೇರು ಕಾಲುವೆ ನೀರಿನಿಂದ, ೩೦೧೧ ಹೆಕ್ಟೇರು ಕೊಳವೆ ಬಾವಿಗಳಿಂದ, ೧೪೬೫ ಹೆಕ್ಟೇರು ಏತ ನೀರಾವರಿಯಿಂದ ಕೃಷಿ ನೀರಾವರಿಗೊಳ್ಳುತ್ತಿದೆ. ಕುಷ್ಟಗಿ ತಾಲೂಕಿನಲ್ಲಿ ೪೪ ಹೆಕ್ಟೇರು ಕೆರೆಗಳಿಂದ, ೮೦೧೬ ಹೆಕ್ಟೇರು ಕೊಳುವೆ ಬಾವಿಗಳಿಂದ ಕೂಡಿದೆ. ಯಲಬುರ್ಗಾ ತಾಲೂಕು ೯೭೪೩ ಹೆಕ್ಟೇರು ಕೇವಲ ಕೊಳುವೆ ಬಾವಿಗಳಿಂದ ಮಾತ್ರ ನೀರಾವರಿಗೊಂಡಿದೆ. ಮುಂದುವರೆದಂತೆಯೇ ಇಲ್ಲಿನ ಕೃಷಿ 'ಬಿ' ಸ್ಕೀಮಿನಿಂದ ಕೂಡಿದ ಗಂಗಾವತಿ ತಾಲೂಕಿನ ಕನಕಗಿರಿ ಹಾಗೂ ಯಲಬುರ್ಗಾ ತಾಲೂಕಿನ ಜಮೀನಿಗೆ ನೀರಾವರಿ ಸೌಲಭ್ಯವನ್ನು ಸಿಂಗಟಾಲೂರು ಏತ ನೀರಾವರಿಯಿಂದ ಒದಗಿಸಲಾಗಿದೆ. ಕೊಪ್ಪಳ ತಾಲೂಕಿನ ಅಳವಂಡಿ ಹೋಬಳಿಗೆ ನೀರಾವರಿ ಸೌಲಭ್ಯ ಇನ್ನೂ ಹೊಂದಬೇಕಾಗಿದೆ.

**ಜನಸಂಖ್ಯೆ ಹಾಗೂ ಜನ ವರ್ಗ:**

ಕೊಪ್ಪಳ ಜಿಲ್ಲೆಯು ೨೦೦೧ರ ಜನಗಣತಿಯಂತೆ ಒಟ್ಟು ಜನಸಂಖ್ಯೆ ೧೧,೯೬,೦೮೯ ಇದ್ದು, ಇದರಲ್ಲಿ ೬,೦೩,೩೧೨ ಗಂಡಸರೂ, ಹಾಗೂ ೫,೯೨,೭೭೭ ಹೆಂಗಸರನ್ನು ಹೊಂದಿದೆ. ಈ ಜಿಲ್ಲೆಯಲ್ಲಿ

ಹಿಂದುಗಳು, ಜೈನರು, ಸಿಖ್ಖರು, ಮುಸ್ಲಿಂರು ಹಾಗೂ ಕ್ರಿಶ್ಚಿಯನ್ನ ಧರ್ಮಿಯರು ಇದ್ದಾರೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳೆಂದು ಜನರನ್ನು ಗುರುತಿಸಲಾಗಿದೆ. ಇತ್ತೀಚಿನ ದಶಕದಲ್ಲಿ ಕೃಷಿಗೆ ಬಳಸುತ್ತಿರುವ ರಾಸಾಯನಿಕ ಗೊಬ್ಬರ, ಕೀಟ ನಾಶಕಗಳಿಂದಾಗಿ, ಹೆಚ್ಚುತ್ತಿರುವ ಕೈಗಾರೀಕರಣಗಳಿಂದಾಗಿ ಪರಿಸರ ಮಾಲಿನ್ಯ ಉಂಟಾಗಿ, ಆಹಾರ-ನೀರು-ವಾಯು ಮಾಲಿನ್ಯಗೊಂಡಿವೆ. ಇದರಿಂದಾಗಿ ಮಕ್ಕಳು-ವಯೋವೃದ್ಧರು ಅನಾರೋಗ್ಯದಿಂದ ಬಳಲುತ್ತಿದ್ದಾರೆ.

ಇತ್ತೀಚೆಗೆ ಬೆಳೆಯುತ್ತಿರುವ ಆಹಾರ ಧಾನ್ಯ- ತರಕಾರಿ-ಹಣ್ಣು, ನಿಸರ್ಗದತ್ತ ತೊಪ್ಪಲು ಪಲ್ಲೆಗಳು ಇಲ್ಲಿನ ಜನರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಲಿವೆ. ಈ ಎಲ್ಲಾ ಕಾರಣಗಳಿಂದಾಗಿ ಜನರ ದೈಹಿಕ ಧಾರಣಶಕ್ತಿ ಕಡಿಮೆಯಾಗಿದೆ. ಇಲ್ಲಿನ ಜನರಿಗೆ ಅಲರ್ಜಿಯಾಗುತ್ತಿರುವುದು ಸಾಮಾನ್ಯವಾಗಿದೆ. ಪ್ರಸ್ತುತ ದಿನಗಳಲ್ಲಿ ಹಿಂದಿನವರಿಗಿಂತ ಈಗಿನವರು ಹೆಚ್ಚು ರೋಗ ಪೀಡಿತರಾಗುತ್ತಿದ್ದಾರೆಂಬುದನ್ನು ಒಪ್ಪಿಕೊಳ್ಳಬೇಕಾಗಿದೆ. ಕೃಷಿ ಭೂಮಿ ಸಾಗುವಳಿದಾರರು, ಕೃಷಿ ಕಾರ್ಮಿಕರು, ಪಶುಪಾಲನೆಯಲ್ಲದೇ, ಗಣಿಗಾರಿಕೆಗಳಲ್ಲಿ ದುಡಿಯುತ್ತಿದ್ದಾರೆ. ಕುಟುಂಬ ಕೈಗಾರಿಕಾ ಚಟುವಟಿಕೆಗಳು, ಕುಟುಂಬೇತರ ಕೈಗಾರಿಕಾ ಚಟುವಟಿಕೆಗಳು, ನಿರ್ಮಾಣ ಚಟುವಟಿಕೆಗಳು, ವ್ಯಾಪಾರ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದ ಇತರ ಸೇವೆಯಲ್ಲಿ ಜನವರ್ಗ ತೊಡಗಿಸಿಕೊಂಡಿದೆ. ಸರಕಾರಿ, ಅರೆಸರಕಾರಿ ಹಾಗೂ ಖಾಸಗಿ ವಲಯದಲ್ಲಿ ಜನವರ್ಗ ದುಡಿಯುತ್ತಲಿರುವುದನ್ನು ಮನಗಾಣಬಹುದು.

ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ ಮಾಲೆ-೧ ರಲ್ಲಿ ತಿಳಿಸಿರುವಂತೆ ೧೯೯೧-೨೦೦೧ ರ ದಶಕಕ್ಕೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆ ಪ್ರಮಾಣವನ್ನು ಕೋಷ್ಟಕದಲ್ಲಿ ಗಮನಿಸಬಹುದು.

**ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವನ್ನು ಈ ಕೆಳಗಿನಂತೆ ಕೋಷ್ಟಕದಲ್ಲಿ ನೀಡಲಾಗಿದೆ.**

| ತಾಲ್ಲೂಕುಗಳು | ಜನಸಂಖ್ಯೆ | | ೧೯೯೧-೨೦೦೧ ದಶಕದ ಬದಲಾವಣೆ |
|---|---|---|---|
| | ೧೯೯೧ | ೨೦೦೧ | |
| ಗಂಗಾವತಿ | ೩,೨೦,೩೯೪ | ೪,೦೬೩೩೪ | ೮೫,೯೪೦ |
| ಕೊಪ್ಪಳ | ೨,೫೧,೭೧೩ | ೩,೧೪೦೫೧ | ೬೨,೩೩೮ |
| ಕುಷ್ಟಗಿ | ೧,೮೯,೮೯೧ | ೨,೩೯೩೩೧ | ೪೯,೪೪೦ |
| ಯಲಬುರ್ಗಾ | ೧೯೬,೦೮೦ | ೨,೩೬೩೭೩ | ೪೦,೨೯೩ |
| ಕೊಪ್ಪಳ ಜಿಲ್ಲೆ | ೯,೫೮,೦೭೮ | ೧೧೯೬೦೮೯ | ೨,೩೮,೦೧೧ |

"೧೯೮೧ರಲ್ಲಿ ಕೊಪ್ಪಳ ಜಿಲ್ಲೆಯ ಜನಸಂಖ್ಯೆ ೭.೪೮ ಲಕ್ಷ ಇತ್ತು. ೧೯೯೧ರಲ್ಲಿ ಅದು ೯.೫೮ ಲಕ್ಷಕ್ಕೆ ಏರಿಕೆಯಾಗಿದೆ. ಅಂದರೆ ೧೯೮೧-೯೧ರ ದಶಕದಲ್ಲಿ ಜಿಲ್ಲೆಯ ಜನಸಂಖ್ಯೆ ನಿವ್ವಳ ೨.೧೦ ಲಕ್ಷ ಅಧಿಕಗೊಂಡಿದೆ. ಇಲ್ಲಿ ಉಂಟಾದ ದಶಕವಾರು ಶೇಕಡ ಏರಿಕೆ ೨೮.೦೫. ಇದು ರಾಜ್ಯ ಮಟ್ಟದ ಜನಸಂಖ್ಯಾ ಬೆಳವಣಿಗೆಯ ಸರಾಸರಿ ಬೆಳವಣಿಗೆಗಿಂತ ಅಧಿಕವಾಗಿದೆ. ಅವಿಭಜಿತ ರಾಯಚೂರು ಜಿಲ್ಲೆಯ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ.೨೯.೪೯ರಷ್ಟಿತ್ತು. ವಿಭಜನೆಗೊಂಡ ಮೇಲೆ ಕೊಪ್ಪಳ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆ ಪ್ರಮಾಣವು ರಾಯಚೂರು ಜಿಲ್ಲೆಯ ಜನಸಂಖ್ಯೆಯ ಬೆಳವಣಿಗೆ ಪ್ರಮಾಣಕ್ಕಿಂತ ಕಡಿಮೆ ಇದೆ. ಜನಸಂಖ್ಯಾ ಬೆಳವಣಿಗೆಗೆ ಸಂಬಂಧಿಸಿದಂತೆ ರಾಜ್ಯದಲ್ಲಿ (ಬೆಂಗಳೂರು ನಗರ ಬಿಟ್ಟು) ೨೭ನೆಯ ಸ್ಥಾನ ರಾಯಚೂರಿನದಾಗಿದ್ದರೆ, ೨೬ನೆಯ ಸ್ಥಾನ ಕೊಪ್ಪಳದ್ದಾಗಿದೆ."[೩]

**ಆರ್ಥಿಕತೆ :**

ಈ ಪ್ರದೇಶಕ್ಕೆ ಗಟ್ಟಿಯಾದ ಭದ್ರ ಬುನಾದಿ ಹಾಕಲು ಕೈಗಾರಿಕೆಗಳು ಪ್ರಮುಖ ಪಾತ್ರ ವಹಿಸಿದೆ. ಕೈಗಾರಿಕೆಗಳ ಮೂಲಕ ಇಲ್ಲಿನ ಆರ್ಥಿಕ ಸ್ಥಿತಿ ಸುಧಾರಿಸಲು ಒಂದಷ್ಟು ಸಾಧ್ಯವಾಗಿದೆ. ಕೊಪ್ಪಳ ತಾಲೂಕಿನ ಗಿಣಿಗೇರಾ ಹತ್ತಿರ ಅಲ್ಟ್ರಾಟೆಕ್ ಬೃಹತ್ ಸಿಮೆಂಟ್ ಕಾರ್ಖಾನೆ ಆರಂಭಗೊಂಡು ಈ ಸಿಮೆಂಟಿನ ಬೇಡಿಕೆ ಹೆಚ್ಚುತ್ತಿದೆ. ಕಿಡದಾಳ ಹತ್ತಿರ ಮಿನಿ ಸಿಮೆಂಟ್ ಪ್ಲ್ಯಾಂಟ್ ಕಾರ್ಯಾರಂಭ ಮಾಡಿದೆ. ಈ ಜಿಲ್ಲೆಯ ಕಿರ್ಲೋಸ್ಕರ್ ಫೆರಸ್ ಲಿಮಿಟೆಡ್ ಹೆಸರಿನ ಉಕ್ಕು ಮತ್ತು ಕಬ್ಬಿಣ ತಯಾರಿಸುವ ಕೈಗಾರಿಕೋದ್ಯಮವು ದೇಶಾದ್ಯಂತ ತುಂಬ ಹೆಸರು ಪಡೆದಿದೆ. ಕಲ್ಯಾಣಿ ಸ್ಟೀಲ್ಸ್, ಇಸ್ಪಾತ್, ಹೊಸಪೇಟೆ ಸ್ಟೀಲ್ಸ್ ಹೀಗೆ ಚಿಕ್ಕ-ಪುಟ್ಟ ಒಟ್ಟು ೩೮ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆಗಳು ಕೊಪ್ಪಳ ಜಿಲ್ಲೆಯಲ್ಲಿ ಸಿಗುವ ಭೂಗರ್ಭ ಸಂಪತ್ತಿನಿಂದ ಕಾರ್ಯನಿರ್ವಹಿಸುತ್ತಿವೆ. ಪ್ರಮುಖವಾಗಿ ಇಲ್ಲಿ ಸಿಗುವ ಕಬ್ಬಿಣದ ಅದಿರಿನಿಂದ ಕೊಪ್ಪಳ ಜಿಲ್ಲೆಯು ಇಂದು ಮುಂದುವರೆದ ಜಿಲ್ಲೆಗಳಲ್ಲೊಂದಾಗುತ್ತಿದೆ. ಇದಕ್ಕಾಗಿಯೇ ಕೊಪ್ಪಳ ಜಿಲ್ಲೆಯನ್ನು ಸ್ಟೀಲ್ ಪಾರ್ಕ ಅಥವಾ ಸ್ಟೀಲ್ ಝೋನ್ ಮಾಡುವದಾಗಿ ಸರಕಾರ ಘೋಷಿಸಿದೆ. ಕೊಪ್ಪಳ ಜಿಲ್ಲೆಯಲ್ಲಿ ಕೈಗಾರಿಕೋದ್ಯಮಕ್ಕೆ ಬಹಳ ಅವಕಾಶಗಳಿರುವದರಿಂದ ಕಾರ್ಖಾನೆಗಳು ದಿನದಿಂದ ದಿನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿತಗೊಳ್ಳುತ್ತಿವೆ. ಇಷ್ಟಲ್ಲದೆ ತುಂಗಭದ್ರಾ ಅಣೆಕಟ್ಟಿನ ಅಚ್ಚುಕಟ್ಟಾದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಮತ್ತು ಸುತ್ತಮುತ್ತಲಿನ ಸ್ಥಳಗಳನ್ನು ಗಣನೆಗೆ ತೆಗೆದುಕೊಂಡು ಗಂಗಾವತಿ ತಾಲೂಕನ್ನು ರೈಸ್ ಪಾರ್ಕ್ ಎಂದು ಘೋಷಿಸಲಾಗಿದೆ.

ಈ ಜಿಲ್ಲೆಯ ಕಿನ್ನಾಳ ಗೊಂಬೆ ಮತ್ತು ಚೌಕಿ ಮಣಿಗಳು ನಾಡಿನಾದ್ಯಂತ ತುಂಬ ಹೆಸರು ಪಡೆದಿವೆ. ಕಿನ್ನಾಳದ ಗೊಂಬೆ ಮತ್ತು ಚೌಕಿಗಳಿಗೆ ಕಟ್ಟಿಗೆಯೇ ಬಂಡವಾಳ. ಇಲ್ಲಿನ ಚಿತ್ರಗಾರರು ಕೇವಲ ಚಿತ್ರಗಾರರಾಗಿರದೇ, ಬಡಿಗತನದಲ್ಲೂ ವಿಶೇಷ ಪರಿಣತಿ ಹೊಂದಿದವರಾಗಿದ್ದಾರೆ. ಚಿತ್ರ ತಯಾರಿಸುವ, ಬರೆಯುವ ಮುನ್ನ ಆ ಆಕಾರದ ಆ ಅಳತೆಯ ಕಚ್ಚಾ ಆಕೃತಿಯನ್ನು ಬಡಿಗತನದ ಕೌಶಲ್ಯದಿಂದ ಮಾಡುತ್ತಾರೆ. ನಂತರ ಅದಕ್ಕೆ ಬೇಕಾದ ಕಚ್ಚಾ ವಸ್ತುಗಳನ್ನು ಬಳಸಿ ಸರಿಹಚ್ಚಿ

ಗಟ್ಟಿಗೊಳಿಸಿ ಬಣ್ಣಕೊಟ್ಟು ಚಿತ್ರ ಬರೆದು ಕಣ್ಣು, ಕಿವಿ, ಮೂಗು, ರೆಕ್ಕೆ ಮೂಡಿಸಿ ಗೊಂಬೆಗಳಿಗೆ ಜೀವ ತುಂಬುತ್ತಾರೆ. ಶಿವ–ಪಾರ್ವತಿ, ಗಣಪತಿ, ರುದ್ರ, ವೀರಭದ್ರ, ನಂದಿ, ಆಕಳು, ಹುಲಿ, ಸಿಂಹ, ಆನೆ, ಒಂಟೆ, ನಾಯಿ, ನರಿ, ಬೆಕ್ಕು, ಬಸವಣ್ಣ, ಕುದುರೆ, ಮುಂತಾದ ಪ್ರಾಣಿಗಳನ್ನು, ಗಿಳಿ, ಗುಬ್ಬಿ, ಕೋಗಿಲೆ, ನವಿಲು, ಹಕ್ಕಿ, ಹಂಸ ಮುಂತಾದ ಪಕ್ಷಿಗಳನ್ನು ತಯಾರಿಸುತ್ತಾರೆ. ಹಾಗೆಯೆ ಪ್ರಕೃತಿಯ ಸೊಬಗಿನ ಎಲ್ಲ ವಸ್ತುಗಳನ್ನು ಈ ಕಲಾವಿದರು ತಯಾರಿಸುತ್ತಾರೆ. ಗೊಂಬೆಗಳಲ್ಲದೆ ಚೌಕಿಗಳನ್ನು ಕಿನ್ನಾಳದ ಚಿತ್ರಗಾರರು ತಯಾರಿಸುತ್ತಾರೆ. ಇಲ್ಲಿನ ಚೌಕಿ ಮಣಿಗಳು ಷಟ್ಭುಜದಿಂದ ಅಷ್ಟ ಭುಜದವರೆಗೂ ವೃತ್ತಾಕಾರ ಹಾಗೂ ನಕ್ಷತ್ರಾಕಾರದಲ್ಲೂ ಕಂಡು ಬರುತ್ತವೆ.

ಕೊಪ್ಪಳ ಜಿಲ್ಲೆ ನೇಕಾರಿಕೆಗೂ ಪ್ರಸಿದ್ಧಿಯನ್ನು ಪಡೆದಿದೆ. ಕೊಪ್ಪಳ ತಾಲೂಕಿನ 'ಭಾಗ್ಯನಗರ' ನೇಕಾರಿಕೆಗೆ ಜಿಲ್ಲೆಯಾದ್ಯಂತ ಪ್ರಸಿದ್ಧಿಯಾಗಿದೆ. ಅಲ್ಲದೇ ಕಿನ್ನಾಳ, ಕುಕನೂರು, ಹನಮಸಾಗರ, ತಾವರಗೇರೆ, ಅಳವಂಡಿ, ಗಿಣಿಗೇರಾ ಈ ಮೊದಲಾದೆಡೆ ಏಳೆಂಟು ಸಾವಿರ ಕೈಮಗ್ಗಗಳಿವೆ. ಈ ಮುಂಚೆ ಕುಣಿಯಲ್ಲಿ ಕುಳಿತು ಕೈಯಿಂದಲೇ ಲಾಳಿ ಒಗೆಯುತ್ತ ಬೀಜ ಎತ್ತುವ ವಿಧಾನದಿಂದ ನೇಯುತ್ತಿದ್ದರು. ಈ ಕಲೆ ಕ್ರಮೇಣ ತಾಂತ್ರಿಕತೆಯಲ್ಲಿ ಸುಧಾರಿತ ನಾವಿನ್ಯತೆಯನ್ನು ಸಾಧಿಸುತ್ತ ಸೆಟಲ್‌ಮಗ್ಗ, ಅಟೋಮೆಟಿಕ್, ಪೆಡ್‌ಲಮ್, ಪಿಟ್‌ಲೂಮ್ ಮತ್ತು ಪವರಲೂಮ್ ಹೀಗೆ ವೈವಿಧ್ಯತೆಯಿಂದ ಬೆಳೆಯುತ್ತಾಸಾಗಿದೆ. ಈಗ ಮಿಲ್ ಬಟ್ಟೆಯೊಡನೆ ಸ್ಪರ್ಧೆಯಿಂದಾಗಿ ಈ ಕೈಮಗ್ಗದ ನೇಕಾರಿಕೆ ಸೋಲನ್ನು ಅನುಭವಿಸತೊಡಗಿದೆ. ಆದರೂ ಈ ಎಲ್ಲ ರೀತಿಯ ಆರ್ಥಿಕ ಮೂಲಗಳಿಂದ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೧೦,೯೨೨ ಜನರು ಉದ್ಯೋಗವನ್ನು ಪಡೆದುಕೊಂಡು ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ.

**೨.೨ ಚಾರಿತ್ರಿಕ ಹಿನ್ನೆಲೆ :**

ಕೊಪ್ಪಳ ಜಿಲ್ಲೆಯ ಚರಿತ್ರೆ ಸುಮಾರು ೨೦೦೦ ವರ್ಷಗಳ ಹಿಂದಿನದು. ಇಂದಿನ ಕೊಪ್ಪಳ ಜಿಲ್ಲೆಯ ಇತಿಹಾಸವನ್ನು ಅವಲೋಕಿಸಿದರೆ ಈ ಜಿಲ್ಲೆಯಲ್ಲಿ ಪ್ರಮುಖ ರಾಜಮನೆತನಗಳು ಸ್ಥಾಪನೆಗೊಂಡಿರುವುದು ವಿಶೇಷ. ಈ ಜಿಲ್ಲೆಯನ್ನಾಳಿದ ರಾಜಮನೆತನಗಳು ತಮ್ಮ ಆಡಳಿತದ ಅವಧಿಯಲ್ಲಿ ಅನೇಕ ಶಾಸನಗಳನ್ನು ಹಾಕಿಸಿ ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದನ್ನು ನಾವು ಕಾಣುತ್ತೇವೆ. ಈ ಶಾಸನಗಳೂ ಪ್ರಸ್ತುತ ಕೊಪ್ಪಳ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ದೊರೆಯುತ್ತವೆ. ಕೊಪ್ಪಳ ತಾಲೂಕಿನಲ್ಲಿ ೧೭೪, ಯಲಬುರ್ಗಾ ೭೨, ಕುಷ್ಟಗಿ ೩೧, ಗಂಗಾವತಿ ೧೧೩ ಹಾಗೂ ಕೆಲವು ನಿಯತಕಾಲಿಕೆಗಳಲ್ಲಿ ಬಿಡಿ ಬಿಡಿಯಾಗಿ ಪ್ರಕಟಗೊಂಡ ಲೇಖನಗಳು ಹೀಗೆ ಒಟ್ಟು ೩೯೦ಕ್ಕೂ ಅಧಿಕವಾದ ಶಾಸನಗಳು ದೊರೆತಿವೆ. ಈ ಶಾಸನಗಳನ್ನೆಲ್ಲ ಒಂದು ಕಡೆ ಸೇರಿಸಿ ಅದರ ಮೂಲಕ ಆ ಪ್ರದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಇತರೆ ವಿಚಾರಗಳನ್ನು ಅರಿತುಕೊಳ್ಳಬಹುದಾಗಿದೆ. ಹಿರೇಬೆಣಕಲ್ಲಿನ ಕಲ್ಗೋರಿ (ಡಾಲಮನ್ಸ)ಗಳು, ಅಲ್ಲಿಯ ಗವಿವರ್ಣಚಿತ್ರಗಳು,

ಆನೆಗೊಂದಿಯ ಗವಿವರ್ಣ ಚಿತ್ರಗಳು ಈ ಪ್ರದೇಶದ ಪುರಾತತ್ವ ನೆಲೆಗಳಾಗಿವೆ. ಲಿಯೋನಾರ್ಡರು ಈ ಹಿಂದೆ ಹಿರೇಬೆಣಕಲ್ಲಿನಲ್ಲಿ ಶೋಧಿಸಿದ ಚಿತ್ರಗಳ ನೆಲೆಗಳ ಆಧಾರದ ಮೇಲೆ ೧೯೬೮ರಲ್ಲಿ ಡಾ.ಅ.ಸುಂದರವರು ಬೇರೆ ಬೇರೆ ಒಂಭತ್ತು ಸ್ಥಳಗಳಲ್ಲಿ ಒಂಬತ್ತು ಚಿತ್ರಗಳನ್ನು ಬೆಳಕಿಗೆ ತಂದಿದ್ದಾರೆ. ಯಲಬುರ್ಗಾ ತಾಲೂಕಿನ ಇಟಗಿ, ಮುಧೋಳ, ಕೊಪ್ಪಳ, ತಳಕಲ್ಲಗಳಲ್ಲಿ ಕ್ರಿ.ಶ ಒಂದನೇ ಹಾಗೂ ಎರಡನೇಯ ಶತಮಾನದ ಕುರುಹುಗಳು ಇಲ್ಲಿ ಕಂಡು ಬರುತ್ತವೆ. ಕುಷ್ಟಗಿ ತಾಲೂಕಿನಲ್ಲಿ ನಡೆದ ಉತ್ಖನನ ಹಾಗೂ ಸಂಶೋಧಕರು ನಡೆಸಿದ ಸಂಶೋಧನೆಗಳಿಂದಾಗಿ ಈ ಪ್ರದೇಶದಲ್ಲಿ ಮಣ್ಣಿನ ಪಾತ್ರೆಗಳು, ಮಡಿಕೆ ಚೂರು, ಕಲ್ಲಾಸರೆಯ ವರ್ಣ ಚಿತ್ರಗಳು, ಬಯಲು ಬಂಡೆಯ ಮೇಲೆ ಕುಟ್ಟಿ ರಚಿಸಿದ ಚಿತ್ರಗಳು ಬೆಳಕು ಕಂಡಿವೆ. ಇಲ್ಲಿ ಹಳೆಯ ಹಾಗೂ ಹೊಸ ಶಿಲಾಯುಗದ ನೆಲೆಗಳನ್ನು ಗುರುತಿಸಿದ್ದಾರೆ. ಶಿಲಾಯುಗದ ನೆಲೆಗಳೆಂದು ಪ್ರಸಿದ್ದಿಯಾದ ಬಿಜಕಲ್ಲು, ಮಾಟೂರು, ಹೊಸೂರು, ನವಲಹಳ್ಳಿ, ಟೆಂಗುಂಟೆ, ದೋಟಿಹಾಳ, ಗುಮಗೇರಿ, ಗೋನಾಳ, ಹಿರೇಮನ್ನಾಪೂರ ಮುಂತಾದ ಕಡೆಗಳಲ್ಲಿ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿದ್ದಾರೆ, ಕೊಪ್ಪಳ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳು ಹಾಗೂ ಐತಿಹಾಸಿಕ ಮಹತ್ವದ ನೆಲೆಗಳಿರುವುದು ಸ್ಪಷ್ಟವಾಗುತ್ತದೆ. ಇದರಿಂದ ದೊರಕಿದ ಮಾನವ ಮೂಳೆಗಳು ನಾಲ್ಕು ಸಾವಿರ ವರ್ಷದವುಗಳೆಂದು ರಾಸಾಯನಿಕ ಪರೀಕ್ಷೆಯಿಂದ ತಿಳಿದಿದೆ. ಇದಕ್ಕಿಂತ ಪೂರ್ವದಲ್ಲಿ ಇಲ್ಲಿ ಮಾನವನ ವಾಸವಿತ್ತೆಂದು ತಿಳಿದು ಬರುತ್ತದೆ.

ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕನೂರು, ಕುಷ್ಟಗಿ ತಾಲೂಕಿನ ಹೊಸೂರು, ನವಲಹಳ್ಳಿ ಹಾಗೂ ಬಿಜಕಲ್ಲು ಗ್ರಾಮಗಳು ಶಿಲಾಯುಗದ ನೆಲೆಗಳಾಗಿವೆ, ಗಂಗಾವತಿ ತಾಲೂಕಿನ ಹಿರೇಬೆಣಕಲ್ ಪ್ರಾಗೈತಿಹಾಸ ಕಾಲದ ವಾಸದ ನೆಲೆಯಾಗಿದೆ, ಬೃಹತ್ ಶಿಲಾ ಸಂಸ್ಕೃತಿಯ ಕಲ್ಗೋರಿಗಳು, ಎರಡು ಬೃಹದಾಕಾರದ ಕೀಲ್ಗೊಂಬೆಗಳು ಕಲ್ಲಾಸರೆಗಳ ವರ್ಣ ಚಿತ್ರಗಳಂತವುಗಳಿಂದ ಈ ಜಿಲ್ಲೆ ಪ್ರಾಗೈತಿಹಾಸಿಕ ಕಾಲದ ಎಲ್ಲ ಲಕ್ಷಣಗಳನ್ನು ಪಡೆದುಕೊಂಡಿದೆ. ಕೊಪ್ಪಳ ತಾಲೂಕಿನ ಇಂದರಗಿ, ಗಂಗಾವತಿ ತಾಲೂಕಿನ ಹಿರೇಬೆಣಕಲ್ಲ ಹಾಗೂ ಏಳುಗುಡ್ಡಗಳ ಗವಿ ವರ್ಣ ಚಿತ್ರಗಳನ್ನು ಸೂಕ್ಷ್ಮ ಶಿಲಾಯುಗದವು ಎಂದಿದ್ದಾರೆ. ಇವು ಕ್ರಿ.ಶ.ಪೂ ೧೦,೦೦೦ರಿಂದ ಕ್ರಿ.ಶ.೪,೦೦೦ ಪೂರ್ವ ಕಾಲದವೆಂದು ಪ್ರಾಕ್ತನ ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದರಿಂದ ಈ ಜಿಲ್ಲೆಯ ಪ್ರಾಚೀನತೆ ಇನ್ನಷ್ಟು ಹೆಚ್ಚಾಗುತ್ತದೆ.

ನಾವು ನಡೆದಾಡುವ ಈ ನೆಲದಲ್ಲಿ ಅನೇಕಾನೇಕ ಸಂಸ್ಕೃತಿಯ ನಾಗರೀಕತೆಗಳು ಜನ್ಮ ತಳೆದಿವೆ. ಒಂದೊಂದು ಸಂಸ್ಕೃತಿಯು ಒಂದೊಂದು ಬಗೆಯಲ್ಲಿ ಒಟ್ಟುಗೂಡಿ ತಮ್ಮದೇ ಆದ ವಿಶಿಷ್ಟ ಸಮುದಾಯಗಳನ್ನು ನಿರ್ಮಿಸಿಕೊಂಡಿವೆ. ಆದರೆ ಬದಲಾಗುತ್ತಿರುವ ಇಂದಿನ ಸಂಸ್ಕೃತಿ, ಉಪ ಸಂಸ್ಕೃತಿ, ಮಿಶ್ರ ಸಂಸ್ಕೃತಿಗಳು ತಾವು ತಳೆದಿರುವ ಮೊದಲಿನ ಪ್ರಣಾಳಿಕೆಯನ್ನು ದಿನದಿಂದ ದಿನಕ್ಕೆ ಬದಲಾಯಿಸಿಕೊಳ್ಳುತ್ತಿವೆ. ಈ ನೆಲದ ಮೂಲ ಸಂಸ್ಕೃತಿ ಎಂದು ಹೇಳಲಾಗುತ್ತಿರುವ ಸಂಸ್ಕೃತಿಯೊಂದಿಗೆ ಎಲ್ಲಿಂದಲೋ ಬಂದ ಸಂಸ್ಕೃತಿ ಎನ್ನುವ ಬೇರೊಂದು ಸಂಸ್ಕೃತಿಯು ದೀರ್ಘ ಸಮಯದವರೆಗೆ

ಕಾದಾಡಿ-ಕಾದಾಡಿ ಕೊನೆಗೆ ಆ ಭಿನ್ನ ಭಿನ್ನ ಸಂಸ್ಕೃತಿಗಳೆಲ್ಲವು ತಮಗರಿವಿಲ್ಲದಂತೆಯೇ, ಪರಸ್ಪರ ಮೊದಲಿನ ದ್ವೇಷ ಬಿಟ್ಟು ತಮ್ಮತಮ್ಮೊಳಗೆ ಸ್ನೇಹವನ್ನು ಬೆಳೆಸಿಕೊಂಡಿರುವುದಕ್ಕೆ ಅನೇಕ ಉದಾಹರಣೆಗಳು ನಮಗೆ ಕಾಣಸಿಗುತ್ತವೆ.

ಹೊರಗಿನಿಂದ ಬಂದವೆಂದು ಹೇಳಲಾಗುವ ಫಾರಸಿ, ಇಸ್ಲಾಂ, ಕ್ರೈಸ್ತಧರ್ಮಗಳಂತಹ ಸಂಸ್ಕೃತಿಗಳು ಇಲ್ಲಿಯ ಸಂಸ್ಕೃತಿಯೊಂದಿಗಿನ ಕೊಡು-ಕೊಳ್ಳುವಿಕೆಯಿಂದಾಗಿಯೇ ಇಲ್ಲಿದ್ದ ಸಂಸ್ಕೃತಿ ಸರಳಗೊಂಡಿತು. ಹೀಗೆ ಭಿನ್ನ ಭಿನ್ನ ಸಂಸ್ಕೃತಿಗಳು ಬೇರೆ ಬೇರೆ ಹಲವು ಹತ್ತು ವಿಷಯಗಳಿಗೆ ಸಂಬಂಧಿಸಿದಂತೆ ಒಂದೇ ವೇದಿಕೆಯಡಿಯಲ್ಲಿ ಬಂದುನಿಂತು ಒಂದು ಹೊಸ ಸಂಸ್ಕೃತಿ ಹುಟ್ಟಲು ಕಾರಣೀಭೂತವಾದವು. ಈ ರೀತಿ ಹುಟ್ಟಿದ ಸಮ್ಮಿಶ್ರ ಸಂಸ್ಕೃತಿ ನಾಗರೀಕತೆಯಾಗಿ ಬೆಳೆದು ಮುಂದೆ ಈ ನಾಗರೀಕತೆಗಳೇ ರಾಜ್ಯ ಕಟ್ಟಿ ಆಳ್ವಿಕೆ ನಡೆಸಿ ಚರಿತ್ರೆಯನ್ನು ನಿರ್ಮಿಸಿದವು. ಇಂತಹ ಚರಿತ್ರೆಯ ಕೆಲವು ಅಂಶಗಳನ್ನು ಪದೇ ಪದೇ ಮೆಲುಕು ಹಾಕುವುದರಿಂದ ಚರಿತ್ರೆಯ ಪುಟಗಳು ಮನಸಿನ ಆಳದಲ್ಲಿ ಬೇರೂರುತ್ತವೆ.

ಅಂತೆಯೇ ಒಂದು ಪ್ರದೇಶದ, ಒಂದು ಜನಾಂಗದ, ಒಂದು ವರ್ಗದ ಸ್ಥಿತಿ-ಗತಿಗಳು ಅಲ್ಲಿನ ಅನೇಕಾನೇಕ ಘಟನೆಗಳ ಕಾರಣಗಳಿಂದ ನಿರ್ಧರಿಸಲ್ಪಡುತ್ತವೆ. ಅವುಗಳಲ್ಲಿ ಚಾರಿತ್ರಿಕ ಹಾಗೂ ಐತಿಹಾಸಿಕ ಅಂಶಗಳು ಪ್ರಮುಖ ಸ್ಥಾನ ಪಡೆದಿರುತ್ತವೆ. ಅಂತಲೇ ಆ ಪ್ರದೇಶದ ಸ್ಥಿತಿಗತಿಗಳನ್ನು ಅರಿಯುವಾಗ ಅಲ್ಲಿ ಘಟಿಸಿದ ಚಾರಿತ್ರಿಕ ಘಟನೆಗಳನ್ನು, ಸಂಗತಿಗಳನ್ನು ಪರಿಗಣಿಸಬೇಕಾಗುತ್ತದೆ. ಚರಿತ್ರೆಯ ಹುಟ್ಟು ಇಂತಹ ವರ್ಷದಿಂದಲೇ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟಸಾಧ್ಯ. ಆದರೆ ಅಲ್ಲಿ ಘಟಿಸುವ ಘಟನೆಯಿಂದ ಹುಟ್ಟು ಪಡೆದುಕೊಳ್ಳುವ ಚರಿತ್ರೆಯನ್ನು ನಿಖರವಾಗಿ ಸ್ಪಷ್ಟವಾಗಿ ಹೇಳಲು ಸಾಧ್ಯವಾಗುತ್ತದೆ. ಒಬ್ಬರ ಮೇಲೆ ಒಬ್ಬರು, ಒಂದು ಸಮೂಹ ಇನ್ನೊಂದು ಸಮೂಹದ ಮೇಲೆ ಹಿಡಿತ ಸಾಧಿಸುವ ಘಟನೆಗಳು ಹೆಚ್ಚಾಗಿ ಬಲಪ್ರಯೋಗದಿಂದ ಕೂಡಿರುವುದು ಇಲ್ಲಿನ ವಿಶೇಷ. ಶಕ್ತಿ ಇದ್ದವನು, ಶಕ್ತಿ ಇಲ್ಲದವನ ಮೇಲೆ ಹಿಡಿತ ಸಾಧಿಸಿರುವುದು ಇಲ್ಲಿ ಕಂಡು ಬರುತ್ತದೆ. ಒಮ್ಮೆ ಹೀಗೆ ಶಕ್ತಿ ಆಧಾರದ ಮೇಲೆ ಹಿಡಿತ ಪಡೆದುಕೊಂಡ ಮೇಲೆ ತನ್ನ ಮತ್ತು ತನ್ನವರ ರಕ್ಷಣೆಗಾಗಿ ಗುಂಪೊಂದು ಜನ್ಮ ತಾಳಿ, ಆ ಗುಂಪಿಗೊಬ್ಬ ನಾಯಕ ಹುಟ್ಟಿಕೊಳ್ಳುತ್ತಾನೆ. ಇಂತಹ ಸಮೂಹಗಳು ತಮ್ಮ ಅಸ್ತಿತ್ವ ಗುರುತಿಗಾಗಿ ಆ ಸಮೂಹಕ್ಕೊಂದು ಹೆಸರನ್ನಿಟ್ಟುಕೊಳ್ಳುತ್ತವೆ. ಹೀಗೆ ಹೆಸರೊಂದನ್ನು ಇಟ್ಟುಕೊಂಡ ಎಲ್ಲ ಸಮೂಹಗಳು ಸಾಮ್ರಾಜ್ಯ ಸ್ಥಾಪಿಸದಿದ್ದರೂ ಕೆಲವಂತೂ ತಮ್ಮ ಹೆಸರಿನಿಂದ ಸಾಮ್ರಾಜ್ಯ ಸ್ಥಾಪಿಸಿಕೊಂಡು ಮುಂದೊಮ್ಮೆ ಚರಿತ್ರೆಯಲ್ಲಿ ದಾಖಲಾಗುತ್ತವೆ. ಇಂತಹ ಚಾರಿತ್ರಿಕ ದಾಖಲೆಗಳಲ್ಲಿ ಗುರುತಿಸಿಕೊಂಡ ಅನೇಕಾನೇಕ ಅರಸು ಮನೆತನಗಳು ಕೊಪ್ಪಳ ಜಿಲ್ಲೆಯ ಪ್ರದೇಶಗಳನ್ನೊಳಗೊಂಡಂತೆ ಆಳ್ವಿಕೆ ನಡೆಸಿವೆ.

ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಗೊಳಪಡುವ ಪ್ರದೇಶದಲ್ಲಿ ಶಾತವಾಹನರು, ಗುಪ್ತರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರ್ಯರು, ಗಂಗರು,

ಹೊಯ್ಸಳರು, ಸೇವುಣರು, ನೊಳಂಬರು, ವಿಜಯನಗರದರಸರು, ಸಿಂಧರು, ಬಹುಮನಿ ಹಾಗೂ ಆದಿಲ್‌ಶಾಹಿಗಳು, ಮರಾಠರು, ಮೈಸೂರಿನ ಹೈದರಲಿ ಮತ್ತು ಟಿಪ್ಪು ಸುಲ್ತಾನರು, ಹೈದರಾಬಾದ್ ನಿಜಾಮರ ಅರಸು ಮನೆತನಗಳು ಕ್ರಿ.ಪೂ.ಸುಮಾರು ೨೨೦ ರಿಂದ ಕ್ರಿ.ಶ.೧೯೪೭ರವರಗೆ ಕ್ರಮವಾಗಿ ಆಳ್ವಿಕೆ ನಡೆಸಿದವು, ಈ ಮನೆತನಗಳ ಅವಧಿಯಲ್ಲಿ ಕೊಪ್ಪಳ ಜಿಲ್ಲೆಯ ಅನೇಕ ಪ್ರದೇಶಗಳು ಈ ಎಲ್ಲ ಅರಸರ ಆಳ್ವಿಕೆಗೆ ಒಳಪಟ್ಟಿದ್ದವು. ಈ ಅರಸು ಮನೆತನಗಳು ಇಂದಿಗೂ ಇಲ್ಲಿನ ಪ್ರಾಕೃತಿಕ, ಧಾರ್ಮಿಕ, ಸಾಂಸ್ಕೃತಿಕ ಸಾಮಾಜಿಕ, ಭಾಷಿಕ, ಆರ್ಥಿಕ, ಶೈಕ್ಷಣಿಕ, ಸ್ಥಿತಿಗತಿಗಳ ಮೇಲೆ ಪ್ರಭಾವ ಬೀರಿವೆ. ಅಂತಲೇ ಮೇಲೆ ಹೇಳಿದ ಎಲ್ಲ ಅರಸು ಮನೆತನಗಳನ್ನು ಈ ಮುಂದೆ ನೋಡಲಾಗುತ್ತದೆ.

**೨.೩.ಶೈಕ್ಷಣಿಕ ಹಾಗೂ ರಾಜಕೀಯತೆ:**

ಶಿಕ್ಷಣವೆಂಬುದು ರಾಜಕೀಯ, ಆಡಳಿತ ಶಕ್ತಿಯ ಆಘಾತಗಳಿಂದ ಘಾಸಿಗೊಂಡ ಕೂಸು. ಏಕೆಂದರೆ ಒಂದು ಪ್ರದೇಶದ ಹಿಂದುಳಿವಿಕೆಗೆ ಆ ಪ್ರದೇಶದ ಶೈಕ್ಷಣಿಕ ಅಂಶವೇ ಪ್ರಧಾನವಾಗಿರುತ್ತದೆ. ಕೊಪ್ಪಳ ಜಿಲ್ಲೆಯ ಇತ್ತೀಚಿನ ದಿನಗಳಲ್ಲಿ ಶಿಕ್ಷಣದ ಬಗ್ಗೆ ನಾವು ಅವಲೋಕನ ಮಾಡಿದಾಗ ಪ್ರಾಚೀನ ಶಿಕ್ಷಣದ ಮಹತ್ವ ಪ್ರಮುಖವೆನಿಸುತ್ತದೆ. ಏಕೆಂದರೆ ಪ್ರಾಚೀನ ದಿನಗಳಲ್ಲಿ ಈ ಜಿಲ್ಲೆಯಲ್ಲಿರುವ ಅಗ್ರಹಾರಗಳು, ಮಠಗಳು ಮತ್ತು ಘಟಿಕಾಲಯಗಳು ಈ ಜಿಲ್ಲೆಯಾದ್ಯಂತ ಹರಡಿ ಇಡೀ ಕರ್ನಾಟಕ ಶಿಕ್ಷಣದಿಂದ ಗೌರವಿಸಲ್ಪಟ್ಟಿದೆ. ಉದಾಹರಣೆಗಾಗಿ ಅಳವಂಡಿ, ಕವಲೂರು, ಇಟಗಿ, ಮುಧೋಳ, ಮಾದಿನೂರು ಹಾಗೂ ಕುಕನೂರು ಈ ಅಗ್ರಹಾರಗಳು ಕರ್ನಾಟಕದ ಪ್ರಮುಖ ವಿದ್ಯಾ ಕೇಂದ್ರಗಳಾಗಿದ್ದವು.

ಈ ಮಾತಿಗೆ "ಮೊಗಲ್ ಸಾಮ್ರಾಜ್ಯದ ದಕ್ಷಿಣದ ಸುಬೇದಾರ ಮೀರ್ ಕರೀಮುದ್ದೀನ್ ಕ್ರಿ.ಶ ೧೭೨೪ರಲ್ಲಿ ಹೈದರಾಬಾದ ಸಂಸ್ಥಾನ ಸ್ಥಾಪಿಸಿದ. ಈ ಸಂಸ್ಥಾನ ಹದಿನೆಂಟು ಜಿಲ್ಲೆಗಳನ್ನೊಳಗೊಂಡಿತ್ತು. ಕೊಪ್ಪಳ ಜಿಲ್ಲೆಯನ್ನೊಳಗೊಂಡಿದ್ದ ರಾಯಚೂರು ಜಿಲ್ಲೆ ಆ ಹದಿನೆಂಟು ಜಿಲ್ಲೆಗಳ ಪೈಕಿ ಒಂದಾಗಿತ್ತು. ೧೯೨೦ರ ದಶಕದಲ್ಲಿ ಸಾಲಾರಜಂಗ್ ಬಹದ್ದೂರರು ಕೊಪ್ಪಳ, ಯಲಬುರ್ಗಿ ತಾಲೂಕುಗಳನ್ನೊಳಗೊಂಡ ಂತೆ ಕೊಪ್ಪಳಕ್ಕೆ ಜಿಲ್ಲೆಯ ಸ್ಥಾನಮಾನ ಕೊಟ್ಟು ಈ ಜಹಗೀರನ ನವಾಬರಾಗಿ ಹೈದರಾಬಾದಿನಿಂದಲೇ ಆಡಳಿತ ನಡೆಸುತ್ತಿದ್ದರು. ೧೯೪೯ರಲ್ಲಿ ಜಹಗೀರುಗಳು ರದ್ದಾದವು. ಜಹಗೀರಿನ ಕೊಪ್ಪಳ ಮತ್ತು ಯಲಬುರ್ಗಿ ತಾಲೂಕುಗಳು ರಾಯಚೂರು ಜಿಲ್ಲೆಗೆ ಸೇರಿದವು. ೧೯೫೬ರಲ್ಲಿ ರಾಜ್ಯಗಳ ಪುನರ್ವಿಂಗಡಣೆಯಾಯಿತು. ಆ ಸಂದರ್ಭದಲ್ಲಿ ರಾಯಚೂರು ಜಿಲ್ಲೆ ಈಗಿನ ಕೊಪ್ಪಳ ಜಿಲ್ಲೆಯ ನಾಲ್ಕು ತಾಲೂಕುಗಳನ್ನೊಳಗೊಂಡಂತೆ ಒಂಬತ್ತು ತಾಲೂಕುಗಳ ಒಂದು ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿತು. ವಿಸ್ತಾರದಲ್ಲಿ ರಾಯಚೂರ ಜಿಲ್ಲೆ ರಾಜ್ಯದಲ್ಲೇ ಮೂರನೇ ಅತಿ ದೊಡ್ಡ ಜಿಲ್ಲೆಯಾಗಿದ್ದರೂ ಶಿಕ್ಷಣದಲ್ಲಿ ಮಾತ್ರ ಅಂದಿನ ಇಪ್ಪತ್ತು ಜಿಲ್ಲೆಗಳ ಪೈಕಿ ಹದಿನೈದನೇ ಸ್ಥಾನದಲ್ಲಿತ್ತು. ೧೯೨೨ರ ಆಗಸ್ಟ ೨೪ರಂದು

ಕೊಪ್ಪಳ, ಯಲಬುರ್ಗಿ, ಕುಷ್ಟಗಿ, ಗಂಗಾವತಿಯನ್ನೊಳಗೊಂಡ ನೂತನ ಕೊಪ್ಪಳ ಜಿಲ್ಲೆ ಅಸ್ತಿತ್ವಕ್ಕೆ ಬಂದಿತು."[೪]

ಒಂದು ನಾಡು ತುಂಬಾ ಸುಸಂಸ್ಕೃತವಾಗಿದೆ ಎಂಬುದನ್ನು ತಿಳಿಯಬೇಕಾದರೆ ಇಲ್ಲಿರುವ ವಿದ್ಯಾಕೇಂದ್ರಗಳನ್ನು ಅವಲೋಕಿಸ ಬೇಕಾಗುತ್ತದೆ. ಭಾರತೀಯರು ಪ್ರಾಚೀನ ಕಾಲದಿಂದಲೂ ವಿದ್ಯೆಗೆ ಅಪಾರ ಗೌರವವನ್ನು ನೀಡುತ್ತಾ ಬಂದಿದ್ದಾರೆ. "ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಸರ್ವದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು, ಅದು ಅನರ್ಘ್ಯವಾದುದು ಮತ್ತು ಅಕ್ಷಯವಾದುದು."[೫] ಆದ್ದರಿಂದ ವಿದ್ಯೆಯ ಪರಮ ಪ್ರಯೋಜನವು ಆತ್ಮಸಿದ್ಧಿ ಮತ್ತು ಆತ್ಮಜ್ಞಾನಗಳೇ ಆಗಿದ್ದವು. ದೇವಾಲಯಗಳಿಗೆ ದಾನ ದತ್ತಿಗಳನ್ನು ಬಿಡುವಾಗ ವಿದ್ಯಾಭ್ಯಾಸಕ್ಕೂ ಇಂತಿಷ್ಟೆಂಬಂತೆ ದತ್ತಿಯನ್ನು ಮೀಸಲಾಗಿರಿಸುತ್ತಿದ್ದರು.

ಅಗ್ರಹಾರಗಳು ಮನುಷ್ಯನ ವ್ಯಕ್ತಿತ್ವ ವಿಕಸನದ ಬೆಳವಣಿಗೆಯೊಂದಿಗೆ ಆ ನಾಡಿನ ವಿಕಾಸದ ಬೆಳವಣಿಗೆಯನ್ನು ಗುರುತಿಸಿಕೊಂಡಿದ್ದವು. ಅಂದಿನ ಕಾಲದಲ್ಲಿ ವಿದ್ವಾಂಸರಿಂದ ಕೂಡಿದ್ದ ಅಗ್ರಹಾರಗಳು ತಮ್ಮ ಪ್ರಾಮುಖ್ಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದನ್ನು ಕಾಣುತ್ತೇವೆ. ಅದಕ್ಕೆಂದೇ ಅಗ್ರಹಾರಗಳು ವಿದ್ಯಾಭ್ಯಾಸದ ದೃಷ್ಟಿಯಿಂದ ಮಹತ್ವದ ಸ್ಥಾನವನ್ನು ಪಡೆದಿವೆ. ಕೊಪ್ಪಳ ಜಿಲ್ಲೆಯೂ ಇದಕ್ಕೆ ಹೊರತಾಗಿಲ್ಲ. "ಅಗ್ರಹಾರವೆಂದರೆ ವಿದ್ಯಾವಂತ ಬ್ರಾಹ್ಮಣರ ನಿವಾಸಕ್ಕಾಗಿ ಕೆಲವು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾರ್ಪಡಿಸಿ ಅವರಿಗೆ ದಾನವಾಗಿ ಬಿಟ್ಟುಕೊಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ರಾಜ್ಯವು ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯಕ್ಷವಾಗಿ ವಹಿಸಿದ್ದರೂ, ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ಪರೋಕ್ಷವಾಗಿ ಸಹಾಯ ಮಾಡಿದೆ ಎನ್ನಬಹುದು. ಹೊಟ್ಟೆ ಬಟ್ಟೆಗಳ ಚಿಂತೆಯನ್ನು ರಾಜ್ಯವು ಹೋಗಲಾಡಿಸಿದುದರಿಂದ ಅಗ್ರಹಾರಗಳ ಬ್ರಾಹ್ಮಣರು ತಮ್ಮ ಗಮನವನ್ನು ವಿದ್ಯಾದಾನದ ಕಡೆಗೆ ಕೊಡಲು ಸಾಧ್ಯವಾಯಿತು."[೬]

ಈ ಮೇಲಿನ ವಿಚಾರಗಳನ್ನು ಗಮನಿಸಿದಾಗ ಕೊಪ್ಪಳ ಜಿಲ್ಲೆಯು ಹೈದ್ರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಒಂದಾಗಿ ಈ ಭಾಗದಿಂದ ಶೈಕ್ಷಣಿಕ ದೃಷ್ಠಿಯಿಂದ ಹೊರತಾಗಿಲ್ಲ ಎನ್ನುವುದಕ್ಕೆ ಇತ್ತೀಚಿಗೆ ೧೯೫೫-೫೬ ರ ಸಂಧರ್ಭದಲ್ಲಿ ನಮ್ಮ ದೇಶದ ಸಾಕ್ಷರತೆ ಶೇಕಡಾ ೧೯.೩೦ ಇದ್ದರೆ ಈ ಹೈದ್ರಾಬಾದ್ ಕರ್ನಾಟಕ ಪ್ರದೇಶವು ಕೇವಲ ೮.೫ರಷ್ಟಿತ್ತು. ೧೯೫೬ರ ಮುಂಚೆ ಬೇರೆ ಬೇರೆಯಾಗಿದ್ದ ರಾಜ್ಯವು ೧೯೫೬ ರಲ್ಲಿ ಒಂದಾಗಿ ಹೊಸ ರಾಜ್ಯ ಸ್ಥಾಪನೆಗೊಂಡ ನಂತರ ಈ ಪ್ರದೇಶ ನಿರ್ಲಕ್ಷ್ಯಕ್ಕೆ ಒಳಗಾಗಿ ೧೯೮೧ರ ಜನಗಣತಿಯ ಪ್ರಕಾರ ರಾಯಚೂರು ಜಿಲ್ಲೆಯಲ್ಲಿ ಒಳಪಟ್ಟ ಕೊಪ್ಪಳವು ಶೇಕಡಾ ೨೦.೨ ರಷ್ಟಿತ್ತು. ೨೦೦೧ ರ ಜನಗಣತಿಯ ಪ್ರಕಾರ ಶೇಕಡಾ ೫೫.೨ ರಷ್ಟು ಇದ್ದು ಪುರುಷರ ಸಂಖ್ಯೆ ಶೇಕಡಾ

೬೯.೧೫ ಇದ್ದರೆ ಮಹಿಳೆಯರ ಸಾಕ್ಷರತೆಯ ಸಂಖ್ಯೆ ಶೇಕಡಾ ೩೯.೬ ರಷ್ಟಿತ್ತು. "ಈ ಜಿಲ್ಲೆಯಲ್ಲಿ ಪೂರ್ವಪ್ರಾಥಮಿಕ ಶಿಕ್ಷಣ ನಿರೀಕ್ಷಿತ ಮಟ್ಟದ ವ್ಯಾಪ್ತಿ ಹೊಂದಿಲ್ಲ. ಜಿಲ್ಲೆಯಲ್ಲಿ ೮೦ಕ್ಕೂ ಹೆಚ್ಚು ಪೂರ್ವಪ್ರಾಥಮಿಕ ಶಾಲೆಗಳಿದ್ದು ೮೯೩ ಅಂಗನವಾಡಿಗಳಿವೆ. ಜಿಲ್ಲೆಯ ೫೮೮ ಗ್ರಾಮಗಳ ಹಾಗೂ ೪ ಪಟ್ಟಣಗಳಲ್ಲಿ ೯೫೧ ಪ್ರಾಥಮಿಕ ಶಾಲೆಗಳಿದ್ದು ೨೧೭೫೬೦ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಜಿಲ್ಲೆಯ ಒಟ್ಟು ೧೪೨ ಪ್ರೌಢ ಶಾಲೆಗಳಿದ್ದು ೩೨೩೪೪ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಜಿಲ್ಲೆಯಲ್ಲಿ ಐದಕ್ಕಿಂತ ಹೆಚ್ಚು ಆಂಗ್ಲ ಮಾಧ್ಯಮ ಪ್ರೌಢಶಾಲೆಗಳಿದ್ದು ಮೂರು ತೆಲುಗು ಮಾಧ್ಯಮ ಎರಡು ಉರ್ದು ಮಾಧ್ಯಮ ಪ್ರೌಢಶಾಲೆಗಳಿವೆ. ಅಂಗವಿಕಲ ಮಕ್ಕಳಿಗಾಗಿ ಗಂಗಾವತಿಯಲ್ಲಿ ಹಾಗೂ ಬೂದಗುಂಪಿಯಲ್ಲಿ ಪೌಢಶಾಲಾ ಹಂತದವರೆಗೆ ಶಿಕ್ಷಣ ವ್ಯವಸ್ಥೆ ಇದೆ."[೭]

**ಪದವಿ, ಪದವಿಪೂರ್ವ ಕಾಲೇಜು ಹಾಗೂ ಸಾಕ್ಷರತೆ :**

ಜಿಲ್ಲೆಯಲ್ಲಿ ಒಟ್ಟು ೧೫ ಪದವಿ ಮಹಾವಿದ್ಯಾಲಯಗಳು,೫೮ ೭೦ ಪದವಿ ಪೂರ್ವ ಕಾಲೇಜುಗಳು ಇದ್ದು, ಇವುಗಳಲ್ಲಿ ೩೫ ಸರಕಾರಿ, ೦೮ ಅನುದಾನಿತ ಹಾಗೂ ೨೭ ಅನುದಾನರಹಿತ ಕಾಲೇಜುಗಳು ಇವೆ.

**ಕೊಪ್ಪಳ ಜಿಲ್ಲೆಯ ಸಾಕ್ಷರತೆ : ೧೯೬೧ ಮತ್ತು ೧೯೯೧**

| ಸಾಕ್ಷರತೆ (ಶೇಕಡಾ) | ೧೯೬೧ | | | ೧೯೯೧ | | |
|---|---|---|---|---|---|---|
| | ಒಟ್ಟು | ಮಹಿಳೆಯರು | ಪುರುಷರು | ಒಟ್ಟು | ಮಹಿಳೆಯರು | ಪುರುಷರು |
| | ೧೭.೩೪ . | ೫.೩೫ | ೨೯.೦೨ | ೨೮.೨೩ | ೨೨.೭೮ | ೫೩.೪೬ |

**ಕೊಪ್ಪಳ ಜಿಲ್ಲೆಯಲ್ಲಿ ಮಹಿಳೆಯರ ಸಾಕ್ಷರತೆ : ೧೯೬೧ ಮತ್ತು ೧೯೯೧**

| | ಒಟ್ಟು | ಮಹಿಳೆಯರು | ಪುರುಷರು |
|---|---|---|---|
| ೧೯೬೧ | ೧೭.೩೪ | ೫.೩೫ | ೨೯.೦೨ |
| ೧೯೯೧ | ೩೮.೨೩ | ೨೨.೭೮ | ೫೩.೪೬ |

**ಮೌರ್ಯರು :**

ಕೊಪ್ಪಳವು ಒಂದು ಪ್ರಸಿದ್ಧ ಪ್ರಾಚೀನ ನೆಲೆ. ಇದು ಶಿಲಾಯುಗ ಕಾಲದಿಂದಲೂ ಮಾನವನ ವಸತಿ ತಾಣವಾಗಿದೆ. ಇಲ್ಲಿ ನೂತನ ಶಿಲಾಯುಗದ ಮಡಕೆ, ಕೊಡಲಿಗಳು ದೊರೆತಿವೆ. ಬೃಹತ್ ಶಿಲಾಯುಗದ ಮಡಕೆಯ ಅವಶೇಷಗಳಲ್ಲದೆ ಸ್ಥಳೀಯವಾಗಿ ಕರೆಯುವ ಮೌರ್ಯರ ಮನೆಗಳು ಇಲ್ಲಿವೆ. "ಇವು ಪ್ರಾಚೀನ ಕಾಲದವಾದರೆ, ಚರಿತ್ರೆ ಕಾಲದ ಶಾಸನಗಳಾದ ಮೌರ್ಯ ಚಕ್ರವರ್ತಿ ಅಶೋಕ

ಹಾಕಿಸಿದ ಬಂಡೆಗಲ್ಲು ಶಾಸನಗಳಲ್ಲಿ ಎರಡು ಶಾಸನಗಳು ದೊರೆತಿರುವುದು ಕೊಪ್ಪಳದಲ್ಲೆ. ಅಶೋಕ ಬೌದ್ಧ ಧರ್ಮವನ್ನು ಸ್ವೀಕರಿಸಿದ ಎರಡೂವರೆ ವರ್ಷಗಳ ಬಳಿಕ ಉಪಾಸಕನಾಗಿ, ಒಂದೂವರೆ ವರ್ಷದ ನಂತರ ಧರ್ಮ ಪ್ರವರ್ತಕನಾದ ಕಾಲದಲ್ಲಿ ಹಾಕಿಸಿದ ಶಾಸನಗಳಿವು. ಈ ಶಾಸನಗಳು ಕೇವಲ ಬಲ್ಲವರು ಮಾತ್ರವಲ್ಲದೆ ತೀರ ಸಾಮಾನ್ಯನೂ, ಬಡವನೂ, ಹಿಂದುಳಿದವನೂ ಕೂಡ ತನ್ನ ಪ್ರಯತ್ನಶೀಲತೆಯಿಂದ ಸ್ವರ್ಗ ಸುಖವನ್ನು ಪಡೆಯಬಹುದೆಂದು ಸಾರುತ್ತವೆ. ಈ ಶಾಸನಗಳಿಂದ ಕೊಪ್ಪಳ ಪ್ರದೇಶದಲ್ಲಿದ್ದ ಬೌದ್ಧ ಧರ್ಮದ ಅಸ್ತಿತ್ವವನ್ನು ಅರಿಯಬಹುದಾಗಿದೆ. ಆದರೆ ಈ ಕಾಲದ ದೇಗುಲ ಅವಶೇಷಗಳು ದೊರೆಯುವುದಿಲ್ಲ."[೮]

ಇದರಿಂದಾಗಿ ಅಶೋಕನ ಕಾಲದಲ್ಲಿ ಈ ಪ್ರದೇಶದಲ್ಲಿ ಬೌದ್ಧಧರ್ಮವು ಪ್ರಬಲವಾಗಿತ್ತೆಂದು ತಿಳಿದುಬರುತ್ತದೆ. ಅಶೋಕನ ಕೊಪ್ಪಳದ ಶಾಸನದ ಪ್ರತಿ ಹೀಗೆ ಸಾರುತ್ತದೆ. "ದೇವನಾಂಪ್ರಿಯನು ಹೀಗೆ ಹೇಳುತ್ತಾನೆ. ನಾನು ಎರಡೂವರೆ ವರ್ಷಗಳಿಗಿಂತ ಹೆಚ್ಚು ಕಾಲ ಪ್ರಕಾಶದಲ್ಲಿ ಶಾಕ್ಯನಾಗಿದ್ದೆ. ಆದರೆ ಅಷ್ಟು ಚೆನ್ನಾಗಿ ಮನಸ್ಸಿಟ್ಟು ಪ್ರಯತ್ನಿಸಲಿಲ್ಲ. ಆದರೆ ಈಗ ಒಂದು ಸಂವತ್ಸರಕ್ಕಿಂತ ಹೆಚ್ಚು ಕಾಲ ಸಂಘವನ್ನು ಪ್ರವೇಶಿಸಿ ಚೆನ್ನಾಗಿ ಪ್ರಯತ್ನಿಸಿರುವೆನು. ಈ ಕಾಲದಲ್ಲಿ ಜಂಬೂದ್ವೀಪದ ಜನರು ದೇವರುಗಳೊಂದಿಗೆ ಮಿಶ್ರರಾಗಿದ್ದವರೆಲ್ಲರೂ ದೇವರುಗಳೊಂದಿಗೆ ಮಿತ್ರರಾದರು. ಇದು ಪ್ರಯತ್ನದ ಫಲ. ಮಹತ್ತರಿಂದ ಮಾತ್ರ ಇದು ಸಾಧ್ಯವೆಂದು ತಿಳಿಯಬೇಡಿ. ಕ್ಷುದ್ರ ಜನರೂ ಕೂಡ ತಮ್ಮ ಪ್ರಯತ್ನದಿಂದ ಸ್ವರ್ಗವನ್ನು ಪಡೆಯಬಹುದು. ಇದಕ್ಕಾಗಿಯೇ ಈ ಧರ್ಮ ಶ್ರವಣವನ್ನು ಮಾಡಿರುವುದು. ಕ್ಷುದ್ರರೂ, ಮಹಾತ್ಮರೂ ಎಲ್ಲರೂ ಪರಾಕ್ರಮಿಸಲಿ ಎಂದು, ನೆರೆಯವರು ಕೂಡ ಇದನ್ನು ತಿಳಿಯಲಿ ಎಂದು, ಪರಾಕ್ರಮ ಎಂದರೆ ಇದು. ಚಿರಸ್ಥಾಯಿಯಾಗಿ ನಿಲ್ಲಲಿ ಎಂದು ಇದು ವರ್ಧಿಸುತ್ತದೆ. ವಿಪುಲವಾಗಿ ವರ್ಧಿಸುತ್ತದೆ. ಈಗಿನಕ್ಕಿಂತ ಒಂದೂವರೆಯಷ್ಟು ವರ್ಧಿಸುತ್ತದೆ."[೯]

**ಶಾತವಾಹನರು:**

ಕನ್ನಡಿಗರು ಸ್ವತಂತ್ರ ಆಳ್ವಿಕೆ ಪ್ರಾರಂಭಿಸುವುದಕ್ಕೂ ಪೂರ್ವದ ಕೊಪ್ಪಳ ಜಿಲ್ಲೆಯ ಭಾಗ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಇಲ್ಲಿ ಸಿಕ್ಕ ಕುರುಹುಗಳಿಂದ ಖಚಿತಗೊಳ್ಳುತ್ತದೆ. ಕ್ರಿ.ಶ.ಪೂ. ೨೨೦ ರಿಂದ ಕ್ರಿ.ಶ.೨೩೦ ರವರೆಗೆ ಸುಮಾರು ೪೧೦ ವರ್ಷಗಳವರೆಗೆ ಶಾತವಾಹನರು ಆಳ್ವಿಕೆ ಮಾಡಿದರು. ಕನ್ನಡಿಗರಿಗೆ ಅದರಲ್ಲೂ ಕೊಪ್ಪಳ ಜಿಲ್ಲೆಯ ಪ್ರದೇಶವು ಶಾತವಾಹನರ ಆಳ್ವಿಕೆಗೆ ಪ್ರಧಾನವಾಗಿದೆ. ಏಕೆಂದರೆ ಶಾತವಾಹನರ ರಾಜಧಾನಿ ಕೊಪ್ಪಳಕ್ಕೆ ಹತ್ತಿರದಲ್ಲಿಯ ಬಳ್ಳಾರಿಯಾಗಿತ್ತೆಂದು ಊಹಿಸಲಾಗಿದೆ. ಶಾತವಾಹನರ ಮೂಲ ಪುರುಷ ಸಿಮುಖ. ಈತನಿಂದಲೇ ಈ ವಂಶಕ್ಕೆ ಶಾತವಾಹನರು ಎಂಬ ಹೆಸರು ಬಂದಿರಬಹುದೆಂದು ಊಹಿಸಲಾಗಿದೆ.

ಪುರಾಣಗಳಲ್ಲಿ ಈ ವಂಶಕ್ಕೆ ಮೂಲಪುರುಷರು ಆಂದ್ರ ಜಾತಿಗೆ ಸೇರಿದ್ದರಿಂದ ಇವರನ್ನು ಆಂಧ್ರರೆಂದು ಹೆಸರಿಸಲಾಗಿದೆ. ಗೌತಮಿಪುತ್ರ ಶಾತಕರ್ಣಿಯು ಋಷಿಕ (ಕೃಷ್ಣಾ ನದಿ ದಂಡೆ ಮೇಲಿರುವ

ಋಷಿಕ ನಗರ ಪ್ರದೇಶ) ಅಷ್ಟಕ (ಬೋಧನಾ ಪ್ರಾಂತ) ಮುಳಕ (ಗೋದಾವರಿ ದಂಡೆ ಮೇಲಿರುವ ಪೈಠಣ) ಮತ್ತು ವಿದರ್ಭಗಳ ಮೇಲೆ ತನ್ನ ಆಧಿಕಾರವನ್ನು ಸ್ಥಾಪಿಸಿದ್ದನು. ಇವುಗಳಲ್ಲಿನ ಋಷಿಕವೆಂದರೆ ಕರ್ನಾಟಕದ ಗುಲಬರ್ಗಾ ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಯ ಪ್ರದೇಶಗಳಾಗಿದ್ದವು. ಇವುಗಳನ್ನು ಶಾತವಾಹ ನೀಹಾರ, ಶಾತವಾಹನ ರಾಷ್ಟ್ರ ಎಂದು ಕರೆಯುತ್ತಿದ್ದುದ್ದಕ್ಕೆ ಇಲ್ಲಿ ಸಿಕ್ಕ ಶಾಸನಗಳೇ ಸಾಕ್ಷಿಯಾಗಿವೆ.

ಅಲ್ಲದೇ ಶಾತವಾಹನರ ಕಾಲದ ಅರಸರಾದ ಸದಕಣ ಕಲಲಾಯ, ಸದಕನ ಮರಾಠಿ, ಸದಕನ, ಚಟುಕನ್ಹ, ಮರಾಠಿಯರ ಕಾಲದ ನಾಣ್ಯಗಳು ಈ ಭಾಗದಲ್ಲೆಲ್ಲ ಅನೇಕ ಕಡೆ ಸಿಕ್ಕಿವೆ. ಹೀಗಾಗಿ ಶಾತವಾಹನರ ಮೂಲ ನೆಲೆ ಆಂಧ್ರವೆಂದು ಅದರಲ್ಲೂ ಬಳ್ಳಾರಿಯಂದೆ ವಿದ್ವಾಂಸರು ತಮ್ಮ ಸಾಕ್ಷಿಯನ್ನು ಬಳಸುತ್ತಾರೆ. ಬಳ್ಳಾರಿ ಶಾತವಾಹನರ ರಾಜಧಾನಿಯಾದರೆ, ಶಾತವಾಹನರ ರಾಜ್ಯ ಆಂದ್ರವಾದರೆ ಖಂಡಿತವಾಗಿಯೂ ಶಾತವಾಹನರ ಪ್ರಭಾವ ಕೊಪ್ಪಳ ಜಿಲ್ಲೆಯ ಪ್ರದೇಶದ ಮೇಲಾಗಿರುತ್ತದೆ. ಅಂತಲೆ ಶಾತವಾಹನರ ಲಾಂಛನ ಆನೆಯ ಆಕರ್ಷಣೀಯ ರೇಖಾಚಿತ್ರವು ಕೊಪ್ಪಳ ಕೋಟೆಯ ಎತ್ತರದ ಸ್ಥಳವಾದ ಉಸ್ಮಾನ್ ತಾಣದಲ್ಲಿದೆ. “ಶಾತವಾಹನ ಕಾಲದ ಮುದ್ರಾಂಕಿತ ನಾಣ್ಯಗಳು ಇದೇ ತಾಲ್ಲೂಕಿನ ಚಿಕ್ಕ ಸಿಂಧೋಗಿಯಲ್ಲಿ ದೊರೆತಿವೆ. ಇಲ್ಲಿ ೫೫೩ಳ ನಾಣ್ಯಗಳ ರಾಶಿಯೇ ದೊರೆತಿದೆ. ಈ ನಾಣ್ಯಗಳಿದ್ದ ಮಡಕೆಯ ಮೇಲೆ ‘ಚಿಂತಸ’ ಎಂಬ ಬ್ರಾಹ್ಮಿಲಿಪಿಯ ಬರವಣಿಗೆಯನ್ನು ಗುರುತಿಸಲಾಗಿದೆ. ಕೊಪ್ಪಳದಲ್ಲಿ ಬ್ರಾಹ್ಮಿ ಲಿಪಿಯ ನಾಣ್ಯವೊಂದು ದೊರೆತಿದ್ದು ಅದರಲ್ಲಿ ‘ಸಿರಿಸತನ (ನಿ)’ಎಂದಿದೆ.ಹಿಂಬದಿಯಲ್ಲಿ ವೃಕ್ಷವಿದೆ. ಇದು ಶಾತವಾಹನ ಅರಸ ಗೌತಮಿ ಪುತ್ರ ಶಾತಕರ್ಣಿಯ ಕಾಲದ್ದೆಂದು ದೃಢವಾಗುತ್ತದೆ.”[೧೦]

ಕೊಪ್ಪಳದ ಚಿಕ್ಕ ಸಿಂದೋಗಿಯ ಹೊಲದಲ್ಲಿ ೫೫೬೩ ಚಿಕ್ಕ ಚಿಕ್ಕ ಬೆಳ್ಳಿ ನಾಣ್ಯಗಳಿದ್ದ ತಾಮ್ರ ಪಾತ್ರೆ ದೊರಕಿದೆ. ಈ ಪಾತ್ರೆಯ ಮೇಲೆ “ಚಿಂತಸ” ಎಂದು ಬರೆಯಲಾಗಿದೆ. ಈ ಎಲ್ಲ ಆಧಾರಗಳಿಂದ ಕೊಪ್ಪಳ ಪ್ರದೇಶವು ಶಾತವಾಹನ ಅರಸರ ಆಡಳಿತಕ್ಕೊಳಪಟ್ಟಿತ್ತೆಂದು ತಿಳಿದು ಬರುತ್ತದೆ. ಶಾತವಾಹನರ ಕೊನೆಯ ಅರಸ ಪುಲೋಮನು ಮತ್ತು ಇವನ ತರುವಾಯ ಸುಮಾರು ಮೂರನೆಯ ಶತಮಾನದ ನಂತರ ಆಂದ್ರ ಭಾಗದಲ್ಲಿ ಅಭೀರರು, ಇಷ್ವಾಕುಗಳು ಮತ್ತು ಕರ್ನಾಟಕದಲ್ಲಿ ತಮ್ಮ ಸ್ವತಂತ್ರ ಆಡಳಿತವನ್ನು ಅರಂಭಿಸಿ ಪ್ರಾದೇಶಿಕ ಅರಸು ಮನೆತನಗಳಿಗೆ ನಾಂದಿಯಾದರು.

**ಬನವಾಸಿ ಕದಂಬರು:**

“ಶಾತವಾಹನರ ಬಳಿಕ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಕದಂಬರ ಆಡಳಿತ ವ್ಯಾಪ್ತಿಯಲ್ಲಿ ಕೊಪ್ಪಳವೂ ಸೇರಿದ್ದಿತು. ಮಯೂರವರ್ಮನ ಚಂದ್ರವಳ್ಳಿಯ ಶಾಸನದಲ್ಲಿ ‘ಕುಪಣದ ಚಾಮ’ನ ಉಲ್ಲೇಖವನ್ನು ಎತ್ತಿ ತೋರಿಸಲಾಗಿದೆ. ಇದರಿಂದ ಕದಂಬರ ಕಾಲದಲ್ಲಿ ಕೊಪ್ಪಳವನ್ನು ‘ಕುಪಣ’ವೆಂದು ಕರೆದಿರುವುದನ್ನು ಗಮನಿಸಬೇಕಾಗಿದೆ.”[೧೧]

ಉತ್ತರದಲ್ಲಿ ಬನವಾಸಿ ಕದಂಬರು, ದಕ್ಷಿಣದಲ್ಲಿ ಗಂಗರಿಂದ ಕನ್ನಡ ನಾಡು ಸ್ವತಂತ್ರ ಚರಿತ್ರೆಯನ್ನು ಪ್ರಾರಂಭಿಸಿತು. ರವಿವರ್ಮನ ವಿಜಯಯಾತ್ರೆಯನ್ನು ಇಲ್ಲಿನ ಹಾಳದ ತಾಮ್ರ ಪಟದಲ್ಲಿನ ವಿಷಯದಿಂದ ಗಮನಿಸಬಹುದು. ಕದಂಬರ ರಾಜ್ಯವು ಪಶ್ಚಿಮ ಸಮುದ್ರದಿಂದ ಶ್ರೀಶೈಲ ಪರ್ವತದವರೆಗೂ, ಉತ್ತರದ ಮಲಪ್ರಭಾ ನದಿಯಿಂದ ದಕ್ಷಿಣದ ಹಾಸನ, ತುಮಕೂರು ಜಿಲ್ಲೆಗಳ ಉತ್ತರ ಭಾಗದವರೆಗೂ ವಿಸ್ತರಿಸಿತ್ತು. ೪ನೇ ಯ ಶತಮಾನದ ಕದಂಬರ ಚಂದ್ರವಳ್ಳಿ ಶಾಸನ ಕೆತ್ತಿದವನು ಕುಪಣದ ಚಮ ಎಂಬುವನು, ಆ ಕಾಲದಲ್ಲಿಯೇ ಕೊಪ್ಪಳದ ಕುಶಲಕರ್ಮಿಯು ಅಷ್ಟೇ ದೂರದ ಚಿತ್ರದುರ್ಗದವರೆಗೆ ಹೋಗಿ ತನ್ನ ಹೆಸರು ಮಾಡಿರುವುದು ವಿಶೇಷ. ಈ ಪ್ರದೇಶ ವಿದ್ಯಾಕೇಂದ್ರವಾಗಿತ್ತೆಂದು ಹೇಳಬಹುದು.

ತುಂಗಭದ್ರ ಹಾಗೂ ಮಲಪ್ರಭ ನದಿಗಳ ನಡುವಣ ಕೊಪ್ಪಳವು ಕದಂಬರ ಆಡಳಿತಕ್ಕೊಳಪಟ್ಟಿರಬೇಕು. ಅಲ್ಲದೇ ಚಂದ್ರವಳ್ಳಿಯ ಕದಂಬ ಶಾಸನದಲ್ಲಿ ಕುಪಣದ ಚಮನ ಉಲ್ಲೇಖವಿದೆ. ಈ ಕದಂಬರ ರಾಜ್ಯದಲ್ಲಿ ಕೊಪ್ಪಳ ಪ್ರದೇಶ ಇದ್ದದ್ದು ಈ ಶಾಸನದಿಂದ ಧ್ವನಿತವಾಗುತ್ತದೆ. ಅಲ್ಲದೇ ಕುಷ್ಟಗಿ ತಾಲೂಕಿನ ಹಿರೇಮನ್ನಾಪುರದ ಹುಡೆಯದ ಗ್ರಾಮದ ಪಕ್ಕದಲ್ಲಿ ಬಿದ್ದಿರುವ ತುಂಡು ಶಾಸನದಲ್ಲಿ ನನ್ನಿಗದಂಬ, ಕದಂಬರಾಭರಣ, ಬನವಾಸಿ ಪುರವರಾಧೀಶ್ವರ ಮುಂತಾದ ವಿಶೇಷಣಗಳನ್ನುಳ್ಳ ಅಜ್ಜವರ್ಮರಸನು ಕೆಳವಾಡಿಯನ್ನಾಳುತ್ತಿದ್ದಾಗ ಕಿರುದೆರೆ, ಕಿರುಕುಳಾಯಿ ಮೊದಲಾದವನ್ನು ಸರ್ವಬಾಧಾ ಪರಿಹಾರವಾಗಿ ನೀಡುತ್ತಾನೆ. ಕದಂಬ ಅಜ್ಜವರ್ಮರಸನನ್ನು ಹೇಳುವ ಈ ಶಾಸನವು ಅಪರೂಪದಾಗಿದ್ದು ಕದಂಬರ ಆಳ್ವಿಕೆ ಇಲ್ಲಿ ನಡೆದಿತ್ತೆಂಬುದಕ್ಕೆ ಪುಷ್ಠಿ ನೀಡುತ್ತದೆ.

**ತಲಕಾಡಿನ ಗಂಗರು:**

ಬನವಾಸಿ ಕದಂಬರ ರಾಜ ಮನೆತನದ ನಂತರ ಕರ್ನಾಟಕದಲ್ಲಿ ಆಳಿದ ಮನೆತನವೆಂದರೆ ತಲಕಾಡಿನ ಗಂಗರು. ಇವರು ಈ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಯಾವುದೇ ಖಚಿತ ಆಧಾರಗಳು ದೊರಕದಿದ್ದರೂ, ಇವರಿಗೆ ಸಂಬಂಧಿಸಿದ ಕೆಲವು ಶಾಸನಗಳು ಈ ಜಿಲ್ಲೆಯ ಕೆಲ ಭಾಗಗಳಲ್ಲಿ ನಿದರ್ಶನವೆಂಬಂತಿವೆ. ಈ ಮನೆತನಕ್ಕೆ ಸಂಬಂಧಿಸಿದ ಶಾಸನಗಳೆಂದರೆ ಕೊಪ್ಪಳ, ಇಟಗಿ, ಕುಕನೂರು ಹಾಗೂ ಹೆಬ್ಬಾಳ ಗ್ರಾಮಗಳಲ್ಲಿ ದೊರಕುತ್ತವೆ. ಈ ಮಾತಿಗೆ ಸ್ಪಷ್ಟವಾದ ನಿದರ್ಶನವೆಂದರೆ "ಕ್ರಿ.ಶಕ ೧೦ನೇ ಶತಮಾನದ ಹೆಬ್ಬಾಳದ ಶಾಸನದಲ್ಲಿ ಗಂಗರ ಪಾರಂಪರಿಕ ಬಿರುದುಗಳು, ಗಂಗರಸನ ಉಲ್ಲೇಖ ಮತ್ತು ಮಾರಸಿಂಹನ ಉಲ್ಲೇಖಗಳು ದೊರಕುತ್ತವೆ."[೮]

ಈ ಅರಸರ ಕಾಲದಲ್ಲಿ ಕೊಪ್ಪಳ ಪ್ರದೇಶಕ್ಕೆ ಗಂಗವಾಡಿ – ೯೬,೦೦೦ ಎಂದು ಕರೆಯಲಾಗುತ್ತಿತ್ತು. ಇದರ ಪ್ರಕಾರ ಈ ಪ್ರದೇಶವು ಆ ಕಾಲದಲ್ಲಿ ಬೃಹತ್ತಾದ ವಿಭಾಗವಾಗಿ ೯೬,೦೦೦

ಗ್ರಾಮಗಳನ್ನು ಒಳಗೊಂಡಿತ್ತೆಂದು ತಿಳಿದುಬರುತ್ತದೆ. ಹೀಗೆ ತಲಕಾಡಿನ ಗಂಗರು ತಮ್ಮದೇ ಆದ ಸ್ಥಾನಮಾನವನ್ನು ಹೊಂದುವುದರ ಮೂಲಕ ಚಾರಿತ್ರಿಕ ದೃಷ್ಟಿಯಿಂದ ಮಹತ್ವವನ್ನು ಸಾಧಿಸಿದ್ದಾರೆ.

**ಬಾದಾಮಿ ಚಾಲುಕ್ಯರು:**

ಮೌರ್ಯರ ನಂತರ ಅಧಿಕೃತವಾಗಿ ಕೊಪ್ಪಳವನ್ನು ಆಳಿದ ರಾಜಮನೆತನವೆಂದರೇ ಬಾದಾಮಿ ಚಾಲುಕ್ಯರು. ಚಾಲುಕ್ಯರು ಮೊಟ್ಟ ಮೊದಲ ಬಾರಿಗೆ ಕನ್ನಡ ನಾಡನ್ನು ಕಾವೇರಿಯಿಂದ ನರ್ಮದಾ ನದಿಯವರೆಗೆ ವಿಸ್ತರಿಸಿದರು. ಆರನೇಯ ಶತಮಾನದಲ್ಲಿ ಆಳ್ವಿಕೆಯನ್ನು ನಡೆಸಿದ ಬದಾಮಿ ಚಾಲುಕ್ಯರು ಹರಿದುಹಂಚಿಹೋಗಿದ್ದ ಕನ್ನಡ ನೆಲವನ್ನು ರಾಜಕೀಯವಾಗಿ ಒಗ್ಗೂಡಿಸಿದರು. ಇವರ ರಾಜಧಾನಿ ಬಾದಾಮಿ. ಈ ಬಾದಾಮಿ ಕೊಪ್ಪಳಕ್ಕೆ ತುಂಬಾ ಹತ್ತಿರದಲ್ಲಿರುವದು ವಿಶೇಷ.

"ಕದಂಬರ ಬಳಿಕ ಯಶಸ್ವಿಯಾಗಿ ಆಳ್ವಿಕೆ ನಡೆಸಿದವರು ಬಾದಾಮಿ ಚಾಲುಕ್ಯರು. ಇವರ ಕಾಲದಲ್ಲಿ ಭೇಟಿ ನೀಡಿದ ಚೀನಾದ ಬೌದ್ಧ ಪ್ರವಾಸಿ ಹೂಯೆನ್‌ತ್ಸಾಂಗನು ಪುಲಕೇಶಿಯ ಸಾಮ್ರಾಜ್ಯದ ಹಲವು ಸ್ಥಳಗಳಿಗೆ ಭೇಟಿ ನೀಡಿದ್ದನು. ಅವನು ಹೆಸರಿಸಿದ ಸ್ಥಳಗಳಲ್ಲಿ ಕೊಂಕಿನಪುಲೋವೆ ಇಂದಿನ ಕೊಪ್ಪಳವೆಂಬುದು ವಿದ್ವಾಂಸರ ಅಭಿಮತವಾಗಿದೆ. ಹೊಯೆನ್‌ತ್ಸಾಂಗನ ನಂತರದ ಕುರುಹೆಂದರೆ ಹಲಗೇರಿಯ ಶಾಸನ. ಇದು ಬಾದಾಮಿ ಚಾಲುಕ್ಯ ಅರಸ ವಿಜಯಾದಿತ್ಯನ ಕಾಲದ್ದು. ವಿಜಯಾದಿತ್ಯನನ್ನು ಹೆಸರಿಸುವ ಜೊತೆಗೆ ಇದರಲ್ಲಿ ಕೊಪ್ಪಳವನ್ನು ಕೊಪಣವೆಂದು ಹೇಳಿದೆ. ಇದನ್ನು ಕೊಪ್ಪಳದ ಪ್ರಾಚೀನ ಹೆಸರನ್ನು ಸೂಚಿಸುವ ಅಧಿಕೃತ ದಾಖಲೆಯೆನ್ನಬಹುದು. ಇದರಿಂದ ಕೊಪ್ಪಳ ಪ್ರದೇಶವು ಬಾದಾಮಿ ಚಾಲುಕ್ಯರ ಆಡಳಿತದ ವ್ಯಾಪ್ತಿಯಲ್ಲಿ ಇತ್ತೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ಮೂರು ಜಾತಿಗಳು ಮತ್ತು ಗುತ್ತಿಯೂರ ಒಡೆಯನಾಗಿದ್ದ ಅಂಗರಾಜನನ್ನು ಉಲ್ಲೇಖಿಸಿದೆ."[೧೩]

ಕೊಪ್ಪಳ ಜಿಲ್ಲೆಯ ಇಟ್ಟಗಿ, ಹಲಗೇರಿ ಹಾಗೂ ಕುಕನೂರುಗಳಲ್ಲಿ ಬಾದಾಮಿ ಚಾಲುಕ್ಯರ ಶಿಲಾಶಾಸನಗಳು ಸಿಕ್ಕಿವೆ. ಬಾದಾಮಿ ಚಾಲುಕ್ಯರು ಆಡಳಿತದ ದೃಷ್ಠಿಯಿಂದ ಆಯಾ ಸ್ಥಳಗಳಲ್ಲಿ ಪ್ರಾಂತೀಯ ಆಡಳಿತಗಾರರನ್ನು ನೇಮಿಸಿದ್ದರು. ಅಂತೆಯೇ ವಿಜಯಾದಿತ್ಯನು ಕೊಪ್ಪಳ ಪ್ರದೇಶವನ್ನು ನೋಡಿಕೊಳ್ಳಲು ಅಂಗರಾಜ (ಗರೋಜ)ನನ್ನು ನೇಮಿಸಿದ್ದನು. ಈತ ಬಾದಾಮಿ ಚಾಲುಕ್ಯರ ಅಧಿನದಲ್ಲಿ ಆಡಳಿತ ನಡೆಸುತ್ತಿದ್ದನು. ಕ್ರಿಶ ಎಂಟನೇ ಶತಮಾನದ ಹಲಗೇರಿಯ ಶಾಸನವು ವಿಜಯಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದಾಗಿದೆ.

ತ್ರುಟಿತ ಶಾಸನದಲ್ಲಿ ಬಾದಾಮಿ ಚಾಲುಕ್ಯರ ಅರಸ ಯುದ್ದಮಲ್ಲ ಸತ್ಯಾಶ್ರಯ ಪೃಥ್ವಿವಲ್ಲಭ ಮಹಾರಾಜನು ರಾಜ್ಯಭಾರ ಮಾಡುತ್ತಿದ್ದಾಗ, ನಾಗಣ್ಣ ಸೋಮಯಾಜಿಗೆ ಇಟ್ಟಿಗೆಯನ್ನು ನೀಡಿದ್ದಾಗಿ ಹೇಳಿದೆ. ಕ್ರಿ.ಶ. ೧೧೪೩ಕ್ಕೆ ಸೇರಿದ ಚಾಲುಕ್ಯ ಜಗದೇಕಮಲ್ಲನ ಕುಕನೂರು ಶಾಸನದಲ್ಲಿ ಅಗ್ರಹಾರ ಕುಕುನೂರಿನ ಸಾಪಿರ ಮಹಾಜನರ ಪ್ರಿಯ ಮಕ್ಕಳಾದ ಗೆಳೆಯ ಹಾಗೂ ಮಹಾಜನರಿಗೆ ನೀಡಿದ ದಾನ

ಶಾಸನವಾಗಿದೆ. ಈ ಎಲ್ಲ ಶಾಸನ ಮತ್ತು ಇನ್ನಿತರ ಮಾಹಿತಿಗಳಿಂದ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಕೊಪ್ಪಳ ಒಳಪಟ್ಟಿತೆಂದು ನಿಖರವಾಗಿ ಹೇಳಬಹುದು.

**ಮಳಖೇಡದ ರಾಷ್ಟ್ರಕೂಟರು:**

ರಾಷ್ಟ್ರಕೂಟರು ರಾಜ್ಯಸ್ಥಾಪನೆ ಮಾಡುವುದರ ಮೂಲಕ ದಂತಿದುರ್ಗನು ತನ್ನದೇ ಆದ ವೈಭವವನ್ನು ಮೆರೆದನು. ರಾಷ್ಟಕೂಟರಲ್ಲಿ ಅತ್ಯಂತ ಪ್ರಸಿದ್ಧ ಅರಸ ಅಮೋಘವರ್ಷ ನೃಪತುಂಗನ ಆಳ್ವಿಕೆಯಲ್ಲಿಯೇ ಮಾನ್ಯಖೇಟವು ರಾಷ್ಟ್ರಕೂಟರ ಸುಪ್ರಸಿದ್ದ ರಾಜಧಾನಿಯಾಯಿತು. "ಚರಿತ್ರೆಯಲ್ಲಿ ದಾಖಲಾಗಿರುವ ಕ್ರಿ.ಶ. ೭೦೦ ರಿಂದ ೧೦೦೦ ರವರೆಗಿನ ಕಾಲಾವಧಿ ಕರ್ನಾಟಕದ ಮಹಿಮಾನ್ವಿತಯುಗ, ಈ ಮೂರು ಶತಮಾನಗಳ ಕಾಲದಲ್ಲಿ ರಾಷ್ಟಕೂಟರು ಉತ್ತರ ಭಾರತದ ಮೇಲೆ ತಮ್ಮ ಪ್ರಭಾವವನ್ನು ಬೀರಿದರು. ಅಲ್ಲದೇ ಇಡೀ ಭಾರತದ ಅದೃಷ್ಟವನ್ನು ಬದಲಿಸಿದರು. ನಿಷ್ಪಕ್ಷಪಾತವಾಗಿ ಭಾರತದ ಇತಿಹಾಸವನ್ನು ರಚಿಸಿದಲ್ಲಿ ಈ ಯುಗವನ್ನು ಕರ್ನಾಟಕದ ಯುಗ ಎಂದು ಹೆಸರಿಸಬಹುದು."[೧೪]

"ಕೊಪ್ಪಳ ಜಿಲ್ಲೆಯ ಪ್ರಾಚೀನ ದೇಗುಲಗಳೆಂದರೆ ರಾಷ್ಟ್ರಕೂಟ ಕಾಲದ ನಿರ್ಮಿತಿಗಳೆಂದೇ ಹೇಳಬೇಕು. ಈ ಕಾಲದ ದೇಗುಲಗಳೆಂದರೆ ಕರಮುಡಿಯ ಕಲ್ಲೇಶ್ವರ ಮತ್ತು ಕುಸುಮೇಶ್ವರ, ಕಡೂರಿನ ಕಲ್ಲೇಶ್ವರ, ಮುಧೋಳದ ಸಿದ್ದೇಶ್ವರ, ಹಲಗೇರಿಯ ಕಲ್ಲೇಶ್ವರ ಹಾಗೂ ಕುಕನೂರಿನ ನವಲಿಂಗೇಶ್ವರ ದೇಗುಲದ ಒಂದು ಭಾಗ. ಇವುಗಳಲ್ಲದೆ ಕೆಲವು ಶಾಸನಗಳಿಂದಲೂ ಈ ಕಾಲದ ದೇಗುಲಗಳನ್ನು ಗುರುತಿಸಬಹುದಾಗಿದ್ದು. ಕ್ರಿ.ಶ. ೮೮೩ರ ಕೊಪ್ಪಳದ ಶಾಸನದಲ್ಲಿ ರಾಷ್ಟ್ರಕೂಟ ಮಹಾದಂಡನಾಯಕ ಬನವಾಸಿ ಕದಂಬರ ದಡಿಯಮರಸನು ಕೊಪ್ಪಳದಲ್ಲಿ ಜೈನಬಸದಿಯೊಂದನ್ನು ಕಟ್ಟಿಸಿ ಅದಕ್ಕೆ ಕಳಸಾರೋಹಣ ಮಾಡಿಸಿದನೆಂದು ಹೇಳಿದೆ. ಉಪ್ಪಿನ ಬೆಟಗೇರಿಯ ಇನ್ನೊಂದು ಶಾಸನವು ಶಂಕರಗಂಡನೆಂಬ ಅಧಿಕಾರಿ ಕುಪಣ (ಕೊಪ್ಪಳ)ದಲ್ಲಿ ಜಯಧೀರ ಜಿನಾಲಯವನ್ನು ಕಟ್ಟಿಸಿದ್ದನು. ಇದಕ್ಕೆ ತಳವೃತ್ತಿಯಾಗಿ ರೊಟ್ಟಯ್ಯನು ಕುಕನೂರು ೩೦ರ ಗ್ರಾಮದ ಭೂಮಿಯನ್ನು ದತ್ತಿ ಬಿಟ್ಟುದಾಗಿ ಹೇಳುತ್ತದೆ. ಈ ಮೇಲಿನ ಎಲ್ಲ ಸಂಗತಿಗಳು ರಾಷ್ಟ್ರಕೂಟ ಆಳ್ವಿಕೆಯನ್ನು ಸಮರ್ಥಿಸುತ್ತವೆ."[೧೫]

ಕೊಪ್ಪಳ ತಾಲೂಕಿನ ಉಪ್ಪಿನ ಬೆಟಗೇರಿಯಲ್ಲಿ ರಾಷ್ಟ್ರಕೂಟ ೩ನೇ ಕೃಷ್ಣನ ಕಾಲದ ಶಾಸನ ದೊರಕಿದ್ದು, ಕ್ರಿ.ಶ.೯೬೫ ಯಾದವ ವಂಶದ ಶಂಕರಗಂಡ ಅರಸನು ತನ್ನ ಚಕ್ರವರ್ತಿಗಳಾದ ರಾಷ್ಟರಕೂಟರಿಗಾಗಿ ಕುಪನ (ಕೊಪ್ಪಳ) ದಲ್ಲಿ ಜಯಧೀರ ಜಿನಾಲಯ (ಬಸದಿ)ಯನ್ನು ಕಟ್ಟಿಸಿದ್ದಾಗಿ ಹೇಳಿದೆ. ೨ನೇ ಕೃಷ್ಣನ ಕಾಲಕ್ಕೆ ಯಲಬುರ್ಗಾ ತಾಲೂಕಿನ ಮುಧೋಳದಲ್ಲಿ ಮಹಾಶ್ರೀಮಸ್ತನು ಬೆಳ್ವೊಲ ೩೦೦ ಆಳುತ್ತಿದ್ದಾಗ ಕ್ರಿ.ಶ. ೮೯೭ರಲ್ಲಿ ನಡೆದ ಕಾಳಗದಲ್ಲಿ ಸಮ್ಮಗಾರ ಚನ್ದನು ಮರಣ ಹೊಂದಿರುವುದನ್ನು ಯಲಬುರ್ಗಿಯ ೩೦ನೇ ಶಾಸನವು ತಿಳಿಸುತ್ತದೆ. ಕ್ರಿ.ಶ. ೯೩೯ರಲ್ಲಿ ಮುಮ್ಮಡಿ ಕೃಷ್ಣನು ಆಳ್ವಿಕೆ ಮಾಡುತ್ತಿರುವಾಗ ಈತನ ಸಾಮಂತರಾದ ಭೂತುಗ ಪೆರ್ಮಾಡಿ ಈತನ ಕೈಕೆಳಗಿನ

ಬುಟ್ಟಯ್ಯ ಇವರಲ್ಲಿ ದಾನ ನೀಡಿದ ವಿಷಯ ಇಟಗಿಯ ಶಾಸನದಿಂದ ತಿಳಿದು ಬರುತ್ತದೆ. ಗಂಗಾವತಿ ತಾಲೂಕಿನ ಹೊಸಕೇರಿಯ ಶಾಸನವು ಮುಮ್ಮಡಿ ಕೃಷ್ಣನ ಹೆಸರನ್ನು ಉಲ್ಲೇಖಿಸಿದೆ. ಗಂಗ ಮಾರಸಿಂಹನ ಕುಕನೂರು ತಾಮ್ರ ಶಾಸನವು ಕ್ರಿ.ಶ.೯೬೯ರಲ್ಲಿ ನಾಲ್ಕನೆಯ ಇಂದ್ರನನ್ನು ಪಟ್ಟಕ್ಕೆ ಕುಳ್ಳಿರಿಸಿ ಪ್ರಶಂಸೆಗೊಳಗಾದನೆಂಬ ಸಂಗತಿ ತಿಳಿಸುತ್ತದೆ. ಈ ಎಲ್ಲ ಶಾಸನಾಧಾರಗಳಿಂದ ಹಾಗೂ ಕವಿರಾಜ ಮಾರ್ಗದಲ್ಲಿನ ನಾಡಿನ ವರ್ಣನೆಯಿಂದ ಕೊಪ್ಪಳ ಜಿಲ್ಲಾ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

**ಕಲ್ಯಾಣಿ ಚಾಲುಕ್ಯರು ಮತ್ತು ಕುಲಚೂರಿಗಳು:**

ಕಲ್ಯಾಣಿ ಚಾಲುಕ್ಯರು ರಾಷ್ಟ್ರಕೂಟರ ತರುವಾಯ ಅಧಿಕಾರಕ್ಕೆ ಬಂದರು. ಈ ಮೊದಲು ಬಾದಾಮಿ ಚಾಲುಕ್ಯರ ಕೈಕೆಳಗೆ ಅಧಿಕಾರಿಯಾಗಿದ್ದ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಮಾಂಡಲಿಕತ್ವ ಧಿಕ್ಕರಿಸಿ ಸ್ವತಂತ್ರ ರಾಜ್ಯವನ್ನು ಕಟ್ಟಿದರು. ಬಾದಾಮಿ ಚಾಲುಕ್ಯರು ಅವನತಿ ಹೊಂದಿದರೂ, ಅಲ್ಲಲ್ಲಿ ಚಾಲುಕ್ಯರ ವಂಶ ಮುಂದುವರೆದಿತ್ತು. ಮುಂದೆ ಈ ಚಾಲುಕ್ಯವಂಶದ ಕುಡಿಗಳು ಮತ್ತು ರಾಷ್ಟ್ರಕೂಟರ ಅವನತಿಯೊಂದಿಗೆ ಚಾಲುಕ್ಯ ವಂಶದ ಎರಡನೆ ತೈಲಪನು ಕ್ರಿ.ಶ. ೯೭೩ರಲ್ಲಿ ಚಾಲುಕ್ಯ ರಾಜ್ಯಾಡಳಿತವನ್ನು ಮಾನ್ಯಖೇಟದಿಂದ ಪ್ರಾರಂಭಿಸಿದನು. ನಂತರ ಬಂದ ಒಂದನೇ ಸೋಮೇಶ್ವರ ಮಾನ್ಯಖೇಟದಿಂದ ತನ್ನ ರಾಜಧಾನಿಯನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿ ಅಲ್ಲಿಂದಲೇ ತನ್ನ ರಾಜ್ಯಭಾರವನ್ನು ಮುಂದುವರೆಸಿದ. ಇವರನ್ನೆ ಚರಿತ್ರೆಯಲ್ಲಿ ಕಲ್ಯಾಣದ ಚಾಲುಕ್ಯರೆಂದು ಗುರುತಿಸಲಾಯಿತು.

ಕೊಪ್ಪಳ ತಾಲೂಕಿನ ಅಳವಂಡಿ, ಮಾದಿನೂರು, ಗಂಗಾವತಿ ತಾಲೂಕಿನ ಕಿಷ್ಕಿಂದೆ, ಹಾಗೂ ಯಲಬುರ್ಗಾ ತಾಲೂಕಿನ ಮುಧೋಳದ ಶಾಸನಗಳಲ್ಲಿ ಕ್ರಿ.ಶ. ೧೦೪೫, ೧೦೫೩, ೧೦೫೯ ಹಾಗೂ ೧೦೬೧ ತ್ರೈಲೋಕ್ಯ ಮಲ್ಲನ ಉಲ್ಲೇಖಗಳಿವೆ. ಕೊಪ್ಪಳ ತಾಲೂಕಿನ ಕ್ರಿ.ಶ. ೧೦೮೮ರ ಹುಲಿಗೆಯ ಶಾಸನವು ೬ನೇ ವಿಕ್ರಮಾಧಿತ್ಯನ ಆಡಳಿತ ಕಾಲದಲ್ಲಿ ನಾರಾಯಣ ಚಟ್ಟೋಪಾಧ್ಯಾಯನ ಮಗ ಜವೇದಿಭಟ್ಟನು ಹುಲಿಗೆಯೆಂಬ ಪುರವನ್ನು ದಾನವಾಗಿ ಪಡೆದು ತುಂಗಭದ್ರೆಯಿಂದ ಸೀಳುನಾಲೆಯೊಂದರ ಮೂಲಕ ನೀರಾವರಿ ಮಾಡಿಸಿದಂತೆ, ಸೋಮನಾಥ ದೇವಾಲಯ ಕಟ್ಟಿಸಿದಂತೆ ಅದಕ್ಕೆ ಭೂಮಿದಾನ ನೀಡಿದಂತೆ ತಿಳಿಸುತ್ತದೆ. ಈ ಎಲ್ಲಾ ಮಾಹಿತಿಗಳಿಂದ ಕಲ್ಯಾಣಿ ಚಾಲುಕ್ಯರ ಆಡಳಿತ ಕೊಪ್ಪಳ ಪ್ರದೇಶದಲ್ಲಿತ್ತೆಂಬುದನ್ನು ಮನಗಾಣಬಹುದು.

ಕಲಚೂರ್ಯರಿಗೂ ಕೊಪ್ಪಳ ಪ್ರದೇಶಕ್ಕೂ ನಿಕಟ ಸಂಬಂಧವಿರುವುದು, ಯಲಬುರ್ಗಾ ಹಾಗೂ ಕೊಪ್ಪಳ ತಾಲೂಕುಗಳಲ್ಲಿ ದೊರಕಿದ ಶಾಸನಗಳ ಅಧಾರದಿಂದ ವ್ಯಕ್ತವಾಗುತ್ತದೆ. ಬಿಜ್ಜಳನಿಗೆ ಎಚಲದೇವಿ ಪತ್ನಿಯಿಂದ ವಜ್ರದೇವ ಮತ್ತು ಸಿರಿಯಾದೇವಿ ಎಂಬ ಮಕ್ಕಳಾದರು. ಸಿರಿಯಾದೇವಿಯನ್ನು ಯಲಬುರ್ಗಿಯ ಸಂದವಂಶದ ಆಚುಗಿಯ ಮಗ ಚಾವುಂಡನಿಗೆ ಮದುವೆ ಮಾಡಿಕೊಟ್ಟಿದ್ದು

ತಿಳಿದುಬಂದಿದೆ. ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಮಲ್ಲಿಬೊಮ್ಮಣ್ಣ ಮತ್ತು ಜಗದೇವರಿಂದ ಬಿಜ್ಜಳನು ಹತನಾದನು. ಈ ಮಲ್ಲಿಬೊಮ್ಮಣ್ಣ ಯಲಬುರ್ಗಿ ತಾಲೂಕಿನ ರ್‍ಯಾವಣಿಕಿಯ ಕಲ್ಲೂರು ಗ್ರಾಮದಲ್ಲಿ ಕಲ್ಲಿನಾಥ ದೇವಸ್ಥಾನದ ಮೊಡೆವಿಡಿ ಬಗೆಯ ಸಿದ್ದೇಶನ ಶಿಷ್ಯನೆಂದು ತಿಳಿದು ಬರುತ್ತದೆ. ಇದಲ್ಲದೆ ಕಲಚೂರ್ಯರ ಶಾಸನಗಳು ಕೊಪ್ಪಳ ಜಿಲ್ಲೆಯ ಕುಕನೂರು, ಹಲಗೇರಿ, ಕವಲೂರು, ಪುರ, ಇಟಗಿ, ಅಳವಂಡಿ, ಚಂಡೂರು, ಮಾದಿನೂರು ಮುಂತಾದ ಕಡೆಗೆ ದೊರಕಿದ್ದು, ಆ ಕಾಲದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಕ್ರಿ.ಶ. ೧೧೬೩ ರ ಕುಕನೂರು ಶಾಸನ, ಕುಕನೂರು ೩೦ಕ್ಕೆ ಸೇರಿದ ಯಡಹಳ್ಳಿ ಶ್ರೀಮಂತ ಗ್ರಾಮವನ್ನು ಹಂಪಿ ವಿರುಪಾಕ್ಷೇಶ್ವರ ಸನ್ನಿಧಾನದಲ್ಲಿ ಪುನಃ ದತ್ತಿಯಾಗಿ ಪಡೆದ ಗ್ರಾಮದ ದೇವರಿಗೆ ಹಾಗೂ ಊರಿನ ೧೫೦ಜನ ಬ್ರಾಹ್ಮಣರಿಗೆ ದಾನ ನೀಡಿರುತ್ತಾರೆ. ಈ ಎಲ್ಲ ಮಾಹಿತಿಗಳಿಂದ ಕಲಚೂರ್ಯರು ಕೊಪ್ಪಳ ಜಿಲ್ಲೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿದುದು ಖಚಿತವಾಗುತ್ತದೆ.

**ವಿಜಯನಗರದ ಅರಸರು:**

ಆನೆಗೊಂದಿ ಕಮ್ಮಟದುರ್ಗ, ಹಂಪಿಯಿಂದ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಕೊಪ್ಪಳ ಪ್ರದೇಶವನ್ನು ತಮ್ಮ ಆಳ್ವಿಕೆಯಲ್ಲಿ ಸೇರಿಸಿಕೊಂಡಿದ್ದುದು ಸಹಜ, ಏಕೆಂದರೆ ವಿಜಯನಗರದ ರಾಜಧಾನಿ ಹಂಪಿಗೆ ಕೊಪ್ಪಳ ಕೇವಲ ಒಂದೆರಡು ಮೈಲುಗಳ ಅಂತರದಲ್ಲಿದೆ. ಇದಕ್ಕೆ ಪೂರಕವೆಂಬಂತೆ ೧೫೧೩ರ ಗೊಂಡಬಾಳ ಶಾಸನ ೧೫೧೪ರ ಕಿಡದಾಳ ಶಾಸನ, ೧೫೨೦ರ ಆನೆಗೊಂದಿ ವಿಶ್ವಕರ್ಮ ಮಠದ ತಾಮ್ರ ಶಾಸನಗಳು ಕೊಪ್ಪಳ ಪ್ರದೇಶವು ವಿಜಯನಗರದರಸರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳುತ್ತಿವೆ.

**ದೆಹಲಿ ಸುಲ್ತಾನರು ಬಹುಮನಿ ಅರಸರು:**

ಉತ್ತರದ ಮುಸ್ಲಿಂ ಅರಸರು ಇಲ್ಲಿನ ಸಂಪತ್ತು ಮತ್ತು ಮಣ್ಣಿನ ಫಲವತ್ತತೆಯನ್ನು ನೋಡಿ ಅದನ್ನೆಲ್ಲ ದೋಚುವ ಉದ್ದೇಶದಿಂದ ಇತ್ತ ದಾಳಿ ಮಾಡಿದರು. ಈ ದಾಳಿಗಳ ಭೀಕರತೆಯಿಂದ ಸ್ಥಳೀಯ ಅರಸು ಮನೆತನಗಳ ಅಸ್ತಿತ್ವ ನುಚ್ಚುನೂರಾದವು. ಸಂಪತ್ತನ್ನು ದೋಚುವ ಉದ್ದೇಶದಿಂದ ಮೇಲಿಂದ ಮೇಲೆ ದಕ್ಷಿಣದತ್ತ ದಾಳಿಯಿಡುತ್ತಿದ್ದವರು, ಮುಂದೆ ಇಲ್ಲಿಯೇ ತಮ್ಮ ಮುಸ್ಲಿಂ ರಾಜ್ಯ ಸ್ಥಾಪನೆ ಮಾಡಿದರು. ೧೩ ನೇ ಶತಮಾನದ ಪ್ರಾರಂಭದಲ್ಲಿ ದೇಹಲಿಯ ಅಲ್ಲಾವುದ್ದೀನಖಿಲ್ಜಿ, ಮಲ್ಲಿಕಾಫರರು ಅನೇಕ ಬಾರಿ ಕನ್ನಡ ನಾಡಿಗೆ ದಾಳಿಮಾಡಿ ನಾಡನ್ನು ಕೊಳ್ಳೆ ಹೊಡೆದರು. ಇದೂ ಸಾಲದೆಂಬಂತೆ ಮಹಮ್ಮದ್-ಬಿನ್-ತುಘಲಕನು ರಾಜಧಾನಿಯಾಗಿರುವ ದೆಹಲಿಯನ್ನು ದೇವಗಿರಿಗೆ ವರ್ಗಾಯಿಸಿದನು. ಓಗೆ ಪ್ರಾರಂಭವಾದ ಮುಸ್ಲಿಂ ಅರಸರ ಕರ್ನಾಟಕದ ಪ್ರವೇಶ ಉತ್ತರ ಕರ್ನಾಟಕದ ರಾಜಕೀಯ ಅಸ್ತಿತ್ವವನ್ನೇ ಹಾಳು ಮಾಡಿತು.

ಕ್ರಿ.ಶ. ೧೩೩೬ರಲ್ಲಿ ಹುಟ್ಟಿಕೊಂಡ ವಿಜಯನಗರ ಸಾಮ್ರಾಜ್ಯವು ಕನ್ನಡವನ್ನು-ಕನ್ನಡಿಗರನ್ನು ಈ ಸಂದರ್ಭದಲ್ಲಿ ಉಳಿಸಿ ಬೆಳೆಸಿತ್ತು ಎಂಬುದು ಸತ್ಯವಾದರೂ ಅದು ತುಂಗಭದ್ರಾ ನದಿಯ ಈಚೆಗೆ ಮಾತ್ರ ಸೀಮಿತಗೊಂಡಿತು. ಒಂದೊಮ್ಮೆ ತುಂಗಭದ್ರಾ ನದಿಯ ದಡದಲ್ಲಿ ವಿಜಯನಗರದರಸರು ಅಸ್ತಿತ್ವವನ್ನು ಪಡೆಯದೇ ಹೋಗಿದ್ದರೆ, ಉತ್ತರದ ಮುಸ್ಲಿಂ ಅರಸರು ವಿಶಾಲ ಕನ್ನಡ ನಾಡಿನ ಜೊತೆಗೆ ಇಡೀ ದಕ್ಷಿಣ ಭಾರತದ ಮೂಲ ರೂಪ ರೇಷೆಗಳೇ ಇಲ್ಲದಂತೆ ಮಾಡುತ್ತಿದ್ದರೇನೋ, ಅಂತೆಯೇ ಅಲ್ಲಾವುದ್ದೀನ ಹಸನ್ ಬಹುಮನಿ ಕ್ರಿ.ಶ. ೧೩೪೭ ರಲ್ಲಿ ಬಹುಮನಿ ಸಾಮ್ರಾಜ್ಯವನ್ನು ಗುಲಬರ್ಗಾದಲ್ಲಿ ಸ್ಥಾಪಿಸಿದನು. ಈ ಬಹುಮನಿ ಮುಸ್ಲಿಂ ಅರಸರ ದಾಳಿಯನ್ನು ಸತತ ಎರಡು ಶತಮಾನಗಳಿಗೂ ಅಧಿಕ ಕಾಲ ತಡೆಹಿಡಿದ ವಿಜಯನಗರ ಸಾಮ್ರಾಜ್ಯವು ಹೆಚ್ಚು ಕಡಿಮೆ ತನ್ನ ಜೊತೆಜೊತೆಯಲ್ಲಿಯೇ ಹುಟ್ಟಿದ ಬಹುಮನಿ ಸಾಮ್ರಾಜ್ಯದ ಜೊತೆಗೆ ಕಾದಾಡುತ್ತಲೇ ತನ್ನ ಅವನತಿಯನ್ನು ಕಂಡಿತು. ವಿಜಯನಗರ ಸಾಮ್ರಾಜ್ಯವನ್ನು ಸೋಲಿಸಿದ ಸಂದರ್ಭದ ಹೊತ್ತಿಗೆ ಬಹುಮನಿ ಸಾಮ್ರಾಜ್ಯ ಐದು ಶಾಹಿ ಮನೆತನಗಳಾಗಿ ಒಡೆದು ಹೋಯಿತು. ಹೀಗೆ ಕೊಪ್ಪಳ ಪ್ರದೇಶ ಬಹುಮನಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟು ಮುಂದೆ ಹೈದರಾಬಾದ್ ನಿಜಾಂರ ಆಳ್ವಿಕೆಗೆ ಒಳಪಟ್ಟು ನಿಜಾಂರ ಆಳ್ವಿಕೆಯಲ್ಲಿ ಸೇರಿಕೊಂಡಿತು.

**ಹೈದರಾಬಾದ ನಿಜಾಂ ಅರಸರು:**

ಹೈದರಾಬಾದ ಸಂಸ್ಥಾನದಲ್ಲಿ ಮಹಾರಾಷ್ಟ್ರದ ಐದು, ಕರ್ನಾಟಕದ ಬೀದರ, ಗುಲಬರ್ಗಾ, ರಾಯಚೂರು, ಕೊಪ್ಪಳ ಮತ್ತು ಆಂಧ್ರದ ಮೆಹಬೂಬನಗರ, ವಾರಂಗಲ್, ಕರೀಂನಗರ, ಮೇದಕ್ ನಿಜಾಮಾಬಾದ, ನೆಲಗೊಂಡ, ಆದಿಲಾಬಾದ, ಅತರಾಫಬಲಾಪ ಹೀಗೆ ಮರಾಠವಾಡದ ೫, ಕರ್ನಾಟಕದ ೪, ಮತ್ತು ತೆಲಂಗಾಣದ ೮ ಒಟ್ಟು ೧೭ ಜಿಲ್ಲೆಗಳನ್ನು ಒಳಗೊಂಡಿತ್ತು. ಕ್ರಿ.ಶ. ೧೭೨೪ರಿಂದ ಕ್ರಿ.ಶ. ೧೯೪೮ರ ಸುಮಾರು ಎರಡು ಶತಮಾನಗಳ ಕಾಲ ಹೈದರಾಬಾದಿನ ನಿಜಾಂ ಸಂಸ್ಥಾನದಲ್ಲಿ ಕೊಪ್ಪಳ ಪ್ರದೇಶ ಸೇರಿಕೊಂಡಿತ್ತು.

೧) ಮೀರ್ ಕಮುರುದ್ದೀನ್ ಕಿಲ್ವಿಚ್ ಖಾನ್- ಕ್ರಿ.ಶ. ೧೭೨೪-೧೭೪೮.

೨) ನವಾಬ ನಿಜಾಂ ಅಲಿಖಾನ- ಕ್ರಿ.ಶ. ೧೭೬೧-೧೮೦೩

೩) ನವಾಬ ಸಿಕಂದರ ಬಹದ್ದೂರ - ಕ್ರಿ.ಶ. ೧೮೦೩-೧೮೨೮

೪) ನಾಜಿರುದ ದೌಲ್ ಬಹದ್ದೂರ- ಕ್ರಿ.ಶ. ೧೮೨೯-೧೮೫೭

೫) ಆಫ್ ಜಾಲುದ್ದೀನ್ ದೌಲ ಬಹದ್ದೂರ- ಕ್ರಿ.ಶ. ೧೮೫೭-೧೮೬೯.

೬) ಮೀರ್ ಮಹಬೂಬ, ಅಲಿಖಾನ್ ಬಹದ್ದೂರ ಕ್ರಿ.ಶ. ೧೮೬೯-೧೯೧೧.

೭) ನವಾಬ ಮೀರ ಉಸ್ಮಾನ ಅಲಿಖಾನ್ ಕ್ರಿ.ಶ. ೧೯೧೧-೧೯೪೮.

ಈ ಏಳು ನವಾಬರು ಹೈದ್ರಾಬಾದ ಕರ್ನಾಟಕ ಪ್ರದೇಶವನ್ನೊಳಗೊಂಡಂತೆ ಕೊಪ್ಪಳ ಪ್ರದೇಶವನ್ನು ಆಳಿದರು. ನಿಜಾಂ ಅರಸರು ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಶಿಕ್ಷಣ ರಂಗಗಳಲ್ಲಿ ತಮ್ಮದೇ ಆದ ಅಧುನಿಕ ಸ್ವತಂತ್ರ ಸೇವೆಗಳನ್ನು ಜಾರಿಯಲ್ಲಿ ತಂದರೂ ನಿಜಾಂ ಅರಸರು ಜನರಿಂದ ಧಾರ್ಮಿಕ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದರು. ಧಾರ್ಮಿಕ ದತ್ತಿಗಳನ್ನು ಅಪಾರವಾಗಿ ನೀಡಿದರು. ಅದಕ್ಕೆ ಉದಾಹರಣೆಯಾಗಿ ನೋಡುವುದಾದರೆ, ಕೊಪ್ಪಳದ ಶಿರಸಪ್ಪಯ್ಯಮಠಕ್ಕೆ ಕೊಟ್ಟ ದಾನ ದತ್ತಿಗಳನ್ನು ನೋಡಬಹುದು.

ನಿಜಾಂ ಅರಸರು ಬಹುಸಂಖ್ಯಾತ ಹಿಂದೂಗಳಿಗಲ್ಲದೇ ತಮ್ಮದೇ ಕೋಮಿನ ಜನರನ್ನು ಪೀಡಿಸಿದ್ದುದು ಇದೆ. ನಿಜಾಂ ಅರಸರ ಸ್ವಾತಂತ್ರ್ಯದ ಪರಿಕಲ್ಪನೆ ಹಾಗೂ ಜಮೀನ್ದಾರಿ ಪದ್ಧತಿಯ ದೋಷಗಳನ್ನು ಕುರಿತಾಗಿ ಅಲ್ಲದೇ ರಜಾಕಾರರ ದಬ್ಬಾಳಿಕೆ ಮತ್ತು ತೆಲಂಗಾಣದ ಸಮತಾವಾದಿಗಳ ಸಿದ್ಧಾಂತಗಳ ಬಗ್ಗೆ ಸಂಪಾದಕೀಯ ಲೇಖನಗಳನ್ನು ಇಬ್ರಾಹಿಂ ರೋಜಾ ಬರೆದರು. ಇವರು ಉರ್ದು ಪತ್ರಿಕೆಯ ಸಂಪಾದಕ ಮತ್ತು ಉತ್ಸಾಹಿ ಮುಸ್ಲಿಂ ರಾಷ್ಟ್ರೀಯವಾದಿಯಾಗಿದ್ದ ಶೋಯಬುಲ್ಲಾ ಖಾನರನ್ನು ೨೧-೦೪-೪೮ರಂದು ನಿಜಾಂ ರಜಾಕಾರರು ಗುಂಡಿಕ್ಕಿ ಕೊಂದರು. ಸಮಾನತೆ ಮತ್ತು ಸ್ವಾತಂತ್ರ್ಯತೆಯ ತತ್ವಗಳನ್ನು ಕುರಿತು ಬರೆದ ಪತ್ರಿಕೆಗಳನ್ನು ಮತೀಯ ಪತ್ರಿಕೆಗಳೆಂದು ಪರಿಗಣಿಸಿ ಅವುಗಳನ್ನು ನಿಜಾಂ ಅರಸ ಬಹಿಷ್ಕರಿಸಿದನು. ಇಲ್ಲಿ ಗಮನಿಸಬೇಕಾದದ್ದು, ನಿಜಾಂ ಅರಸ ತನ್ನ ಆಡಳಿತ ಮತ್ತು ತನ್ನ ಪ್ರಭುತ್ವವನ್ನು ಪ್ರಶ್ನಿಸುವ ಬಹುಸಂಖ್ಯಾತ ಹಿಂದೂಗಳೇ ಆಗಿರಲಿ ಅಥವಾ ಅಲ್ಪಸಂಖ್ಯಾತ ಮುಸ್ಲಿಂರೇ ಆಗಿರಲಿ ಅವರನ್ನು ಸಹಿಸುತ್ತಿರಲಿಲ್ಲ, ನಿಜಾಂ ಅರಸನಿಗೆ ಇಸ್ಲಾಂ ಧರ್ಮದ ಜೊತೆಗೆ ರಾಜಪ್ರಭುತ್ವವು ಮುಖ್ಯವಾಗಿತ್ತು ಎಂಬುದು ಗೊತ್ತಾಗುತ್ತದೆ.

ಕೊಪ್ಪಳ ಜಿಲ್ಲೆಯು ಹೈದರಾಬಾದ್-ಕರ್ನಾಟಕದ ವಿಮೋಚನೆಯಲ್ಲಿ ಮಹತ್ವದ ಪಾತ್ರವಹಿಸಿದೆ. ಇಡೀ ರಾಷ್ಟ್ರ ಒಂದು ಕಡೆ ನೇರವಾಗಿ ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯಲು ಹಾತೋರೆಯುತ್ತಿದ್ದರೆ, ಹೈದಾರಬಾದ್-ಕರ್ನಾಟಕದಲ್ಲಿನ ಜನ ಒಂದೇ ಸಂದರ್ಭದಲ್ಲಿ ಬ್ರಿಟಿಷರ ಮತ್ತು ಸಂಸ್ಥಾನಗಳ ಮಟ್ಟದಲ್ಲಿ ಆಳುತ್ತಿದ್ದ ನಿಜಾಂರ ವಿರುದ್ಧ ಹೋರಾಡುವ ಸ್ಥಿತಿಯಲ್ಲಿದ್ದರು. ಈ ಹೋರಾಟದಲ್ಲಿ ಇಲ್ಲಿಯ ಜನರು ಅನುಸರಿಸಿದ್ದು ಎರಡು ರೀತಿಯ ಮಾರ್ಗ, ಇಡೀ ರಾಷ್ಟ್ರ ಗಾಂಧೀಜಿಯ ಮಾತಿನಂತೆ ಅಹಿಂಸೆ ಶಾಂತಿಯ ಮಂದಗಾಮಿ ನೀತಿಯನ್ನು ಅನುಸರಿಸಿದರೇ, ಈ ಮಂದಗಾಮಿ ನೀತಿಗೆ ಹೈದರಾಬಾದ್-ಕರ್ನಾಟಕದ ಅದರಲ್ಲೂ ಕೊಪ್ಪಳ ಪ್ರದೇಶದ ಜನರು ನಿಜಾಂ ಅರಸನ ವಿರುದ್ಧ ತ್ರೀವ್ರಗಾಮಿ ಧೋರಣೆಯಿಂದ ಯಶಸ್ಸು ಪಡೆದುಕೊಂಡರು.

ಇಡೀ ರಾಷ್ಟ್ರವು ಶಾಂತಿ, ಅಹಿಂಸೆಯಿಂದ ಸ್ವಾತಂತ್ರ್ಯ ಪಡೆಯಲು ಮುಂದಾಗಿತ್ತು. ಇಲ್ಲಿನ ಕ್ರಾಂತಿಕಾರರು ರಕ್ತಕ್ರಾಂತಿಯ ಮಾರ್ಗ ಹಿಡಿಯಬೇಕೆಂಬ ನಿಶ್ಚಯ ಮಾಡಿದ್ದರು. ಇಲ್ಲಿ ನಿಜಾಂ ಅರಸರ

ಹಾಗೂ ರಜಾಕಾರರಿಂದ ಇಲ್ಲಿನ ಜನ ಎಷ್ಟು ರೋಸಿ ಹೋಗಿದ್ದರು ಎಂಬುದು ಮನವರಿಕೆಯಾಗುತ್ತದೆ. ಇಡೀ ರಾಷ್ಟ್ರ ಸ್ವಾತಂತ್ರ್ಯ ಪಡೆದು ಒಂದು ವರ್ಷದ ಬಳಿಕ ಕೊಪ್ಪಳ ಪ್ರದೇಶ ರಕ್ತ ಕ್ರಾಂತಿಯ ಮೂಲಕ ಸ್ವತಂತ್ರ್ಯವನ್ನು ಪಡೆದುಕೊಂಡಿತು. ಇದರ ಜೊತೆಗೆ ಕೊಪ್ಪಳ ಪ್ರದೇಶವು ಅಪಾರವಾದ ಐತಿಹಾಸಿಕ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಪ್ರದೇಶ. ಇಲ್ಲಿ ಹೆಜ್ಜೆಗೊಂದರಂತೆ ದೊರೆಯುವ ಕಲ್ಯಾಣ ಚಾಲುಕ್ಯರ, ಕಲ್ಯಾಣ ಕಲಚೂರಿಗಳ ಹೊಯ್ಸಳರ ಹಾಗೂ ಇನ್ನಿತರ ರಾಜವಂಶಗಳ ಶಿಲಾಶಾಸನಗಳು ಜಿಲ್ಲೆಯ ಗತವೈಭವವನ್ನು ಸೂಚಿಸುತ್ತವೆ. ಇತಿಹಾಸವನ್ನು ಸೇರಿಹೋದ ಅಗ್ರಹಾರಗಳ ಬಗ್ಗೆ ವಿಸ್ತಾರವಾದ ವಿವರಗಳನ್ನು ನೀಡುತ್ತವೆ. ಶಾಸನಗಳ ಆಧಾರದಿಂದಲೂ ಜಿಲ್ಲೆಯ ಕೆಲವು ಅಗ್ರಹಾರಗಳ ಸ್ಥೂಲ ಪರಿಚಯ ಮಾಡಿಕೊಳ್ಳಬಹುದು. ಕೊಪ್ಪಳ ಜಿಲ್ಲೆಯ ಪ್ರಮುಖ ಸ್ಥಳಗಳಾಗಿ ಇಟಗಿ, ಪುರ, ಕುಕನೂರು, ಅನೆಗೊಂದಿ,ಕಲ್ಲೂರು, ಕನಕಗಿರಿ, ಕೊಪ್ಪಳ ಕಿಷ್ಕಿಂದೆ, ಕವಲೂರು, ಮುದೋಳ, ಅಳವಂಡಿ ಮುಂತಾದ ಗ್ರಾಮಗಳು ಕಾಣಸಿಕ್ಕುತ್ತಿವೆ.

**೨.೪ ಸಾಹಿತ್ಯಿಕ ಅಂಶಗಳು:**

ಭಾಷೆಯ ಉಗಮದೊಂದಿಗೆ ಸಾಹಿತ್ಯವು ಉದಯವಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಹೀಗಾಗಿ ಸಾಹಿತ್ಯ ಜೀವನದ ಪ್ರತಿಬಿಂಬ ಮತ್ತು ಗತಿಬಿಂಬವಾಗಿದೆ. ಸಾಹಿತ್ಯವು ಸಾರ್ವಜನಿಕ ಹಿತಾಸಕ್ತಿಯನ್ನು ಬಯಸುವುದರ ಮೂಲಕ ತ್ಯಾಗ ಮನೋಭಾವನೆಯನ್ನು ತುಂಬುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಇದು ನಿಂತ ನೀರಾಗದೆ, ಹರಿಯುವ ಜಲಪ್ರವಾಹವಾಗಿದೆ. ಇಂತಹ ಸಾಹಿತ್ಯ ಇಂದು – ನಿನ್ನೆಯದಲ್ಲ ಸುಮಾರು ವರ್ಷಗಳ ಚರಿತ್ರೆಯನ್ನು ಹೊಂದುವುದರ ಮೂಲಕ ತನ್ನದೇ ಆದ ಶ್ರೀಮಂತಿಕೆಯನ್ನು ಪಡೆದಿದೆ. ಸಾಹಿತ್ಯ ಮಾನವೀಯ ಮೌಲ್ಯಗಳ ಜೊತೆಗೆ ಇಡಿ ಮನುಷ್ಯ ಬದುಕಿನ ಜೀವನದ ಮೈಲುಗಲ್ಲಾಗಿದೆ. ಗತಕಾಲದ ಚಾರಿತ್ರಿಕ ಅಂಶಗಳನ್ನು ತನ್ನ ಮಡಿಲಲ್ಲಿ ಇಟ್ಟುಕೊಂಡು ಆಗಿನ ಸಂಸ್ಕೃತಿ, ಪರಂಪರೆ ಮುಂತಾದವುಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಹೀಗಾಗಿ ಸಾಹಿತ್ಯ ಹೊಸಹೊಸ ವಿಚಾರಗಳನ್ನು ಹೊಸ ಹೊಸ ಸಂಸ್ಕೃತಿಯನ್ನು ತನ್ನದಾಗಿಸಿಕೊಂಡಿದೆ. ಸಾಹಿತ್ಯದಲ್ಲಿ ವಿಭಿನ್ನ ಚದುರಿದ ರೂಪಗಳನ್ನು ತನ್ನದಾಗಿಸಿಕೊಂಡು ಸಮಕಾಲಿನ ಜೀವನಕ್ಕಾಗಿ ನಿರ್ದೇಶನವಾಗುತ್ತದೆ.

ಇಡೀ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಆಯಾ ಕಾಲಗಳಲ್ಲಿದ್ದು ತನ್ನ ಅಂತರಂಗದ ವಿಷಯಗಳನ್ನು ತಿಳಿಸುತ್ತದೆ. ಹೀಗಾಗಿ ಕನ್ನಡ ಸಾಹಿತ್ಯವನ್ನು ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಮತ್ತು ಆಧುನಿಕ ಕನ್ನಡ ಎಂಬುದಾಗಿ ಆಯಾ ಕಾಲದ ಸಾಹಿತ್ಯದ ಮೌಲ್ಯ ಗೋಚರಿಸುತ್ತದೆ.

ಒಂದು ಕಡೆ ಧರ್ಮ, ಮತ್ತೊಂದು ಕಡೆ ರಾಜ ಮನೆತನ, ಇನ್ನೊಂದು ಕಡೆ ಸಾಮಾಜಿಕ ಮೌಲ್ಯಗಳು ಒಂದಲ್ಲಾ ಒಂದು ರೀತಿಯಲ್ಲಿ ಸಾಹಿತ್ಯ ಸೃಷ್ಟಿಗೆ ಭದ್ರ ಬುನಾದಿಯಾಗಿವೆ. ಹತ್ತನೇ

ಶತಮಾನದ ಸುವರ್ಣ ಯುಗದ ಸಾಹಿತ್ಯವು ಜೈನ ಧರ್ಮದ ಸಿದ್ಧಾಂತಗಳನ್ನು ಪ್ರತಿಪಾದಿಸಿದರೆ, ಹನ್ನೆರಡನೇ ಶತಮಾನದ ವಚನ ಸಾಹಿತ್ಯ ವೀರಶೈವ ಧರ್ಮದ ಸಿದ್ಧಾಂತಗಳ ತಳಹದಿಯಲ್ಲಿ ಸಾಮಾಜಿಕ ಮೌಲ್ಯಗಳನ್ನು ಪ್ರತಿಬಿಂಬಿಸುವ ಕಾಳಜಿಯನ್ನು ಎತ್ತಿಹಿಡಿದು ಭಕ್ತಿ ಪರಂಪರೆಗೆ ಕೊಂಡಿಯಾಗಿದೆ. ಇದನ್ನು ಮುಂದುವರಿಸಿದ ತತ್ವಪದಕಾರರು ತಮ್ಮ ಅನುಭವಕ್ಕೆ ಬಂದ ವಿಚಾರಗಳನ್ನು ಆಲೋಚಿಸಿ, ಅವಲೋಕಿಸಿ ತಮ್ಮಲ್ಲಿಯ ನೈತಿಕ ಮೌಲ್ಯಗಳನ್ನು ತುಂಬುವಲ್ಲಿ ಶ್ರಮಿಸಿದರು.

ತಮ್ಮ ಅನುಭವದಿಂದಲೇ ಅನುಭವವನ್ನು ತಿಳಿಸುವುದರ ಮೂಲಕ ಅನುಭಾವ ಕವಿಗಳು ಜೀವಪರ ಕಾಳಜಿಯನ್ನು ತಮ್ಮದಾಗಿಸಿಕೊಂಡರು. ಆ ಕಾಲದ ಜನರ ಜೀವನದ ವಿವಿಧ ಆಚಾರ ವಿಚಾರಗಳನ್ನು ಸಾಹಿತ್ಯದಲ್ಲಿ ತರವುದರ ಮೂಲಕ ಸಾಮಾಜಿಕ ಹಿತಕಾಳಜಿಯನ್ನು ಬಯಸುವುದರಲ್ಲಿ ಮುಂದಾದರು.

ಹದಿನೆಂಟನೇ ಶತಮಾನದ ಸೊತ್ತಿಗೆ ಸಾಹಿತ್ಯ ಮತ್ತೊಂದು ರೀತಿಯ ಹೊಸ ವಿಚಾರಗಳಿಗೆ ಎಡೆ ಮಾಡಿಕೊಟ್ಟಿತು. ಬ್ರಿಟಿಷರ ಆಗಮನ, ಕ್ರೈಸ್ತ ಮಿಷನರಿಗಳ ಸಹಾಯ ಮತ್ತು ಸಹಕಾರದಿಂದ ಸಾಹಿತ್ಯದಲ್ಲಿ ಹೊಚ್ಚ ಹೊಸ ಅಂಶಗಳು ಬೆಳಕಿಗೆ ಬಂದವು. ಇಂತಹ ಸಾಹಿತ್ಯ ಇಡೀ ಕನ್ನಡ ಸಾಹಿತ್ಯದಲ್ಲಿ ಚಿಂತನ-ಮಂಥನವಾಗುತ್ತಾ ನಡೆದು ಬಂದಿರುವುದು ಗಮನಾರ್ಹ. ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಎಂಬ ನಾಲ್ಕು ಘಟ್ಟಗಳು ಆಧುನಿಕ ಸಾಹಿತ್ಯವನ್ನು ಮತ್ತು ಅದರ ಮಹತ್ವವನ್ನು ಹಾಗೂ ಸಿದ್ಧಾಂತವನ್ನು ಪ್ರತಿಪಾದಿಸುವಲ್ಲಿ ಶ್ರೇಷ್ಟತೆಯನ್ನು ಪಡೆದುಕೊಂಡಿವೆ. ಇಂತಹ ಸಾಹಿತ್ಯವನ್ನು ಬೇರೆ ಬೇರೆ ಭಾಗದ ಬೇರೆ ಬೇರೆ ರಾಜ್ಯದ ರಾಜಮನೆತನಗಳು ಆಳಿದ್ದರಿಂದ ಕರ್ನಾಟಕವನ್ನು ನಾಲ್ಕು ಭಾಗವಾಗಿ ಕಾಣುತ್ತಿದ್ದು, ಭೌಗೋಳಿಕ ದೃಷ್ಟಿಯಿಂದ ಆಯಾ ಪ್ರದೇಶದ ಸಾಹಿತ್ಯವನ್ನು ಓರೆಗಚ್ಚಿ ನೋಡುವಲ್ಲಿ ಶ್ರೇಷ್ಠತೆ ಪಡೆದು ಕೊಂಡಿವೆ.

ಸಾಹಿತ್ಯ ಮತ್ತು ಇತಿಹಾಸ ಒಂದು ನಾಣ್ಯದ ಎರಡು ಮುಖಗಳಾಗಿ ಕಾಣಿಸಿದರೂ ಮಧ್ಯದಲ್ಲಿ ಗೋಚರಿಸುವ ವಿಚಾರಪರತೆ ವಿಭಿನ್ನವಾಗಿದೆ. ಇತಿಹಾಸವು ತನ್ನ ಗತಕಾಲದ ನೆನಪುಗಳನ್ನು ಮೆಲಕು ಹಾಕುವುದರ ಮೂಲಕ ತನ್ನ ಮಹತ್ವವನ್ನು ಸಾರಿದರೇ, ಸಾಹಿತ್ಯ ಆಯಾ ಕಾಲದ ಸಮಾಜ ಮತ್ತು ಸಾಂಸ್ಕೃತಿಕ ಸಂದರ್ಭವನ್ನು ಎತ್ತಿ ಹಿಡಿಯುತ್ತದೆ. ಈ ದೃಷ್ಟಿಯಿಂದಲೇ ಸಾಹಿತ್ಯ ಹರಿಯುವ ಜಲಪ್ರವಾಹ ಎಂಬ ಮಾತಿಗೆ ಸಾಕ್ಷಿಯಾಗಿದೆ. ನಾವು ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಗಮನಿಸಿದಾಗ ಕನ್ನಡ ಸಾಹಿತ್ಯ ಉಳಿದ ಪ್ರದೇಶಗಳಿಗಿಂತ ಇದು ಹಿಂದೆ ಬಿದ್ದಿಲ್ಲ ಎನ್ನುವುದು ಕುತೂಹಲಕರ ಹಾಗೂ ಗಮನಾರ್ಹ.

ಮರಾಠಿ, ಉರ್ದು ಮತ್ತು ಹಿಂದಿ ಭಾಷೆಯ ಪ್ರಭಾವಕ್ಕೆ ಒಳಗಾಗಿರುವ ಹೈದ್ರಾಬಾದ ಕರ್ನಾಟಕ ಪ್ರದೇಶವು ಭೌಗೋಳಿಕ ರಾಜಕೀಯ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕವಾಗಿ ಇಟ್ಟ ಹೆಜ್ಜೆ, ತೊಟ್ಟ ರೂಪ

ಮಹತ್ವದ್ದಾಗಿದೆ. ನಿಜಾಮನ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶವು ಸಾಹಿತ್ಯ ಹಾಗೂ ಸಾಂಸ್ಕೃತಿಕವಾಗಿ ಕನ್ನಡ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಅಪಾರವಾಗಿದೆ. 'ಕಾವೇರಿಯಿಂದ ಮಾ ಗೋದಾವರಿವರೆಗೆ' ಕನ್ನಡನಾಡು ಹಬ್ಬಿದೆ ಎಂಬ ಉಕ್ತಿಯನ್ನು ಒಳಗೊಂಡ ಕವಿರಾಜಮಾರ್ಗವು ಈ ಪ್ರದೇಶಕ್ಕೆ ಸೇರಲ್ಪಟ್ಟಿದೆ. ಈ ಪ್ರದೇಶ ಕನ್ನಡ ಸಾಹಿತ್ಯಕ್ಕೆ ಮೊದಲ ಲಕ್ಷಣ ಗ್ರಂಥ ಕೊಟ್ಟ ಪ್ರದೇಶ ಎಂಬ ಹೆಗ್ಗಳಿಕೆಯಾಗಿದೆ. ಹಳೆಗನ್ನಡ ಸಾಹಿತ್ಯದ ಮಹಾನ್ ಕವಿಗಳು, ಹನ್ನೆರಡನೇ ಶತಮಾನದಲ್ಲಿ ಸಾಮಾಜಿಕ ಹಾಗೂ ಧಾರ್ಮಿಕವಾಗಿ ಆಂದೋಲನ ಕೈಗೊಂಡ ವಚನಕಾರರು, ರಚನಕಾರರು ಭಕ್ತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವ ದಾಸರು ಅನುಭವಿಗಳು ಈ ಪ್ರದೇಶದಿಂದಲೇ ಬಂದವರಾಗಿದ್ದಾರೆ. ಗುಲಬರ್ಗಾ, ಬೀದರ್ ಮತ್ತು ರಾಯಚೂರ ಜಿಲ್ಲೆಯನ್ನು ಒಳಗೊಂಡ ಈ ಪ್ರದೇಶದ ಇತ್ತೀಚಿನ ಜಿಲ್ಲೆಯಾದ ಕೊಪ್ಪಳವು ಕೋಟೆಗಳ ಮೂಲಕ ಸಾಹಿತ್ಯಿಕವಾಗಿ ಗಮನಾರ್ಹವಾಗಿದೆ. ಇಂತಹ ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಕವಿಗಳು ತಮ್ಮ ಅನುಭವಗಳಿಂದ ಬಂದ ವಿಚಾರಗಳನ್ನು, ಸಾಹಿತ್ಯವನ್ನಾಗಿಸಿ ಕನ್ನಡ ಸಾಹಿತ್ಯಕ್ಕೆ ಪೂರಕ ಮತ್ತು ಪ್ರೇರಕರಾಗಿದ್ದಾರೆ.

ಕೊಪ್ಪಳವು 'ಕೊಪಣ್' ನಗರಿ ಎಂದು ಪ್ರಸಿದ್ದಿಯಾಗಿತ್ತು. ಇದಕ್ಕೆ ಒಂದು ನಿದರ್ಶನವೆಂದರೆ ಐದನೇ ಶತಮಾನದ ಚಂದ್ರವಳ್ಳಿಶಾಸನ. ಈ ಶಾಸನದ ಪ್ರಕಾರ ದಾಖಲೆಗೊಂಡ ಮೊದಲ ಬರಹಗಾರರೆಂದರೆ 'ಚಮಾ'. ಚಮನಿಂದಲೇ ಈ ಜಿಲ್ಲೆಯಲ್ಲಿ ಬರವಣಿಗೆ ಪ್ರಾರಂಭವಾಗಿದೆ ಎಂದು ಹಲವಾರು ವಿದ್ವಾಂಸರು ಊಹಿಸಿದ್ದಾರೆ. ಅಷ್ಟೆ ಅಲ್ಲದೇ ಅದಿತ್ಯದೇವ, ಗೋಮಕವಿ,`ಸಜ್ಜನ ಆಲಿಕ ಮತ್ತು ಇದೇ ಜಿಲ್ಲೆಯ ಕೂಕನೂರಿನ ಕವಿವಿಲಾಸ ಎಂಬ ಕವಿಗಳನ್ನು ಮತ್ತು ಅವರ ಕಾಲವನ್ನು ಡಾ॥ ಪಿ.ಬಿ ದೇಸಾಯಿಯವರು ಗುರುತಿಸಿರುವುದು ದಾಖಲೆಗೆ ತಳಹದಿಯಾಗಿದೆ.

ಈ ಜಿಲ್ಲೆಯ ಅನೇಕ ಬರಹಗಾರರು ಪುರಾಣ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ನಿಟ್ಟಿನಲ್ಲಿ ದುಡಿದಿದ್ದಾರೆ. ನಾವು ಮೊದಲಿಗೆ ಪುರಾಣ ಸಾಹಿತ್ಯವನ್ನು ಗಮನಿಸಿದಾಗ ಕನ್ನಡ ನಾಡಿನ ಉಳಿದ ಪ್ರದೇಶಗಳಿಗಿಂತ ಹೈದ್ರಾಬಾದ್ ಕರ್ನಾಟಕದ ಅದರಲ್ಲೂ ಕೊಪ್ಪಳ ಜಿಲ್ಲೆಯಲ್ಲಿಯು ಪುರಾಣಗಳು ಸಿಗುತ್ತವೆ. ಯಲಬುರ್ಗಾ ತಾಲೂಕಿನ ಕಲ್ಲೂರು ಗ್ರಾಮದವನಾಗಿದ್ದ ದೂಪದ ರಾಜೇಶ, ೧೭೦೦ ರಲ್ಲಿ ಬದುಕಿದ್ದನು. ಈತನು ಮ್ಲಲಿಬೊಮ್ಮಯ್ಯನ ಪುರಾಣಗಳ ಲಕ್ಷಣಗಳನ್ನು ತಿಳಿಸಿದ್ದರಿಂದಲೇ ಈ ಭಾಗದ ಮೊದಲ ಪುರಾಣ ಬರಹಗಾರರೆಂದು ತಿಳಿದು ಬಂದಿದೆ. ದ್ಯಾಂಪೂರದ ಚೆನ್ನಕವಿಯು ಈ ಜಿಲ್ಲೆಯ ಪ್ರಮುಖ ಕವಿ. ಈತನು ಅನೇಕ ಸಾಹಿತ್ಯಕ ಕವಿಗಳನ್ನು ಅಲ್ಲದೇ, ಪುರಾಣ ಪ್ರವಚನಗಳನ್ನು ಸಹ ಹೇಳುವುದರ ಮೂಲಕ ನಾಡಿನಾದ್ಯಂತ ಹೆಸರುವಾಸಿಯಾಗಿದ್ದಾನೆ. ಕರಿನಾದಶತಕ, ಅನ್ನದಾನೇಶ್ವರ ಪುರಾಣ, ಹೇಮರೆಡ್ಡಿ ಮಲ್ಲಮ್ಮ, ಇಳಕಲ್ ವಿಜಯ ಮಾಹಾಂತೇಶ ಪುರಾಣಗಳನ್ನು ರಚಿಸಿ ಪ್ರಾಮುಖ್ಯತೆಯನ್ನು ಪಡೆದಿದ್ದಾರೆ. ಇವರ ಪುರಾಣಗಳನ್ನು ಆಲಿಸಿದ ರಾಷ್ಟ್ರಕವಿ ಕುವೆಂಪುರವರು ಮೆಚ್ಚುಗೆಯನ್ನು ವ್ಯಕ್ತಪಡಿಸಿರುವುದು ಗಮರ್ನಾಹ ಸಂಗತಿ.

**ಪಂಡಿತ ಕಲ್ಲಿನಾಥ ಶಾಸ್ತ್ರಿ :**

ಪಂಡಿತ ಕಲ್ಲಿನಾಥ ಶಾಸ್ತ್ರಿ ಮೂಲತಹ ಈ ಜಿಲ್ಲೆಯ ದ್ಯಾಂಪೂರದವರು. ಕನ್ನಡ, ಮರಾಠಿ, ಸಂಸ್ಕೃತ ಮತ್ತು ಉರ್ದು ಭಾಷೆಗಳಲ್ಲಿ ಪಂಡಿತರಾದ ಇವರು ಚಿಕ್ಕಪ್ಪನಾದ ಚೆನ್ನಕವಿಗಳಲ್ಲಿ ಶಿಷ್ಯತ್ವವನ್ನು ಪಡೆದುಕೊಂಡಿದ್ದರು. ಅಷ್ಟೆ ಅಲ್ಲದೇ, ಮಹಾಸತಿ ಅನುಸೂಯೆ, ಪ್ರಪಂಚಪರೀಕ್ಷೆ, ವೈರಾಗ್ಯ ವಿಜಯ, ಅನ್ನದಾನ ಮಹತ್ವ, ಸತಿಸಾವಿತ್ರಿ, ರುಕ್ಮಂಗದ ಮತ್ತು ಸತ್ಯಹರಿಶ್ಚಂದ್ರ ಎಂಬ ನಾಟಕಗಳನ್ನು ರಚಿಸಿ ಈ ಭಾಗದ ಆರಂಭದ ನಾಟಕಕಾರರೆಂದು ಪ್ರಸಿದ್ಧಿ ಪಡೆದಿದ್ದಾರೆ. ಅಲ್ಲದೇ ಶ್ರೀ ಕಲಬುರ್ಗಿ ಶರಣಬಸವೇಶ್ವರ, ಹಿರೇಮಠದ ಚನ್ನಬಸವೇಶ್ವರ, ಇಟಗಿಯ ಭೀಮಾಭಿಂಕೆ, ಹೊಸ ರೀತಿಯ ಗುಲ್ಲೇಶ್ವರ ಹಾಗೂ ಅರವತ್ತಮೂರು ಪುರಾತನರ ಪುರಾಣಗಳನ್ನು ರಚಿಸಿದ್ದಾರೆ. ಹನ್ನೆರಡನೆ ಶತಮಾನದ ಶಿವಶರಣ ಬಸವಣ್ಣನವರ ಗುಣ ಮತ್ತು ವ್ಯಕ್ತಿತ್ವಗಳನ್ನು ಕುರಿತು ಭಜನಾಪದ, ಜೋಗುಳಪದ, ಒಗಟುಗಳು, ಮಂಗಳಾರತಿ ಪದ ಹಾಗೂ ಡೊಳ್ಳಿನ ಪದಗಳನ್ನು ರಚಿಸಿದ್ದಾರೆ. ಅಷ್ಟೆ ಅಲ್ಲದೆ ಕನ್ನಡದ ಪುನರ್ ಜೀವನಕ್ಕಾಗಿ ಇವರು ಹಗಲಿರುಳು ದುಡಿದಿದ್ದಾರೆ.

**ಪಂಡಿತ ಅಮರನಾಥ ಶಾಸ್ತ್ರಿ :**

ಇವರು ಯಲಬುರ್ಗಿ ತಾಲೂಕಿನ ಬನ್ನಿಕೊಪ್ಪದವರು. ಕವೀಂದ್ರ, ಆಶುಕವಿ ಮತ್ತು ಕವಿಭೂಷಣ ಎಂಬ ಬಿರುದುಗಳನ್ನು ಪಡೆದುಕೊಂಡ ಇವರು ಮೂಲತಃ ಅಂಧರು. ಪುರಾಣ, ಭಜನ, ಅಷ್ಟಕ, ಶತಕ, ಸ್ತುತಿ ಮತ್ತು ಚರಿತ್ರೆಗಳನ್ನು ರಚಿಸಿ ಈ ಜಿಲ್ಲೆಯಲ್ಲಿ ಹೆಸರಾಗಿದ್ದಾರೆ.

**ಪಂಡಿತ ನಾಗಭೂಷಣ ಶಾಸ್ತ್ರಿ :**

ಈ ಜಿಲ್ಲೆಯ ಯಲಬುರ್ಗಾ ತಾಲೂಕಿನ ಸಂಗನಾಳ ಗ್ರಾಮದವರು. ಇವರು ಪುರಾಣ, ಪ್ರವಚನ, ಶರಣ ಸಾಹಿತ್ಯ, ಪ್ರಚಾರ ವೀರಶೈವ ಧರ್ಮದ ಕುರಿತು ಉಪನ್ಯಾಸಗಳನ್ನು ಕನ್ನಡ ಹಾಗೂ ಹಿಂದಿ ಭಾಷೆಯಲ್ಲಿ ಹೇಳುತ್ತಿದ್ದರು. ಅಲ್ಲದೇ ತಮ್ಮ ಜೀವನವನ್ನು ಶರಣ ಸಾಹಿತ್ಯ ಪತ್ರಿಕೆಯ ಆರಂಭದೊಂದಿಗೆ ಆ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದರು. ಆ ಪತ್ರಿಕೆಯು ಇಂದಿಗೂ ಗದಗದಿಂದ ಹೊರಬರುತ್ತಿರುವುದು, ಸಂತೋಷಕರ ಸಂಗತಿಯಿದ್ದ. ಇದು ಅವರ ವಿಚಾರ ಪರತೆಯಲ್ಲಿ ಎತ್ತಿ ತೋರಿಸುತ್ತದೆ. ಅಷ್ಟವರಣ, ಜೀವನ ಚರಿತ್ರೆ ಹಾಗೂ ಪಾದುಕೆಗಳನ್ನು ಅದರ ಕುರಿತಾಗಿ ಉಪನ್ಯಾಸಗಳನ್ನು ನೀಡುತ್ತಿದ್ದರು. ಭಾರತೀಯ ದಾರ್ಶನಿಕ ಸಮೀಕ್ಷೆ ಎಂಬ ಮಹತ್ವದ ಕೃತಿಯನ್ನು ರಚಿಸಿ ಓರಿಸ್ಸಾ ರಾಜ್ಯದ ಭುವನೇಶ್ವರದಲ್ಲಿ ಹಿಂದಿ ಭಾಷೆಯಲ್ಲಿ ತಿಂಗಳಾನುಗಟ್ಟಲೇ ಪ್ರವಚನ ಮಾಡಿದಂತವರು.

**ನಾಯಕಲ್ ಹೀರೆಮಠದ ಬ್ರಹ್ಮಶ್ರೀ ಸಿದ್ಧಲಿಂಗಾಚಾರ್ಯ:**

ಇವರು ಕೊಪ್ಪಳ ತಾಲ್ಲೂಕಿನ ಕಿನ್ನಾಳ ಗ್ರಾಮದವರು. ಕವಿ ನಾಟಕಕಾರರು ಆಗಿದ್ದ ಇವರು ಪುರಾಣವನ್ನು ರಚಿಸಿದ್ದಾರೆ. ಶ್ರೀ ಬೆಣಕಲ್ ಲಿಂಗೇಶ್ವರ ಪುರಾಣವನ್ನು ೧೯೪೭ ರಲ್ಲಿ ವಾರ್ಧಕ ಷಟ್ಪದಿಯಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಅಷ್ಟೇ ಅಲ್ಲದೇ ಇದೆ ಪುರಾಣವನ್ನು ಮರಳಿ ಭಾಮಿನಿ ಷಟ್ಪದಿಯಲ್ಲಿ ರಚಿಸುವುದರ ಮೂಲಕ ಷಟ್ಪದಿ ಸಾಹಿತ್ಯಕ್ಕೆ ತಳಸ್ಪರ್ಶಿಯಾಗಿದ್ದಾರೆ. ಇಬ್ಬರ ಹೆಂಡರ ಗಂಡ, ಇವಳೆಂಥ ಸತಿ, ಮೂಕ ದಂಪತಿ ಹಾಗೂ ಭೂಲೋಕದಲ್ಲಿ ಯಮ ಎಂಬ ಸಾಮಾಜಿಕ ಪೌರಾಣಿಕ ನಾಟಕಗಳನ್ನು ಬರೆಯುವುದರ ಮೂಲಕ ಗುರುತಿಸಿಕೊಂಡಿದ್ದಾರೆ. ವೀರಶೈವ ಧರ್ಮದ ಮೂಲಕ ಪುನರುತ್ಥಾನಕ್ಕಾಗಿ ಶ್ರಮಿಸಿದವರಲ್ಲಿ ಇವರು ಒಬ್ಬರು.

**ನಾ.ಭಾ.ಶಾಸ್ತ್ರಿ:**

ಇವರು ಕೊಪ್ಪಳ ಜಿಲ್ಲೆಯ ಮೊಟ್ಟಮೊದಲ ಇತಿಹಾಸ ಸಂಶೋಧಕರೆಂದು ಪ್ರಸಿದ್ಧಿಯಾಗಿದ್ದಾರೆ. ಇಲ್ಲಿರುವ ಅಶೋಕನ ಮತ್ತು ಕನ್ನಡದ ಶಾಸನಗಳನ್ನು ಕುರಿತು ಶಾಸನ ಸಂಪುಟ ಹೊರ ಬರುವಲ್ಲಿ ಕಾರಣೀಭೂತರು. ಕೊಪ್ಪಳ, ಕೊಪಣ ಶಬ್ದಗಳ ಕುರಿತು ಸಂಶೋಧನಾ ಕಿರು ಪ್ರಬಂಧವನ್ನು ರಚಿಸಿ ೧೯೩೮ ರಲ್ಲಿಯೇ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಪ್ರಕಟಿಸಿದ್ದರು. ಅಲ್ಲದೆ ಧಾರವಾಡ ಗೆಳೆಯರ ಗುಂಪಿನ ಸದಸ್ಯರಲ್ಲಿ ಒಬ್ಬರಾದ ಇವರು ರಂಗಭೂಮಿ, ಪ್ರಬಂಧ, ನಾಟಕ ಮುಂತಾದವುಗಳಿಗೆ ಸಂಬಂಧಿಸಿದ ಕೃತಿಗಳನ್ನು ರಚಿಸಿದ ಕೀರ್ತಿ ಇವರದ್ದಾಗಿದೆ. ಕನ್ನಡ ಹಾಗೂ ಸಂಸ್ಕೃತ ಭಾಷೆಯ ಪಂಡಿತರಾಗಿದ್ದ ಇವರು ಹೈದರಾಬಾದ ಉಸ್ಮಾನೀಯಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ ನಿರ್ವಹಿಸಿದ್ದಾರೆ.

**ಡಾ.ಪಿ.ಬಿ.ದೇಸಾಯಿ:**

ಇವರ ಜನ್ಮಸ್ಥಳ ಮೂಲತ: ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಬೆಣಕಲ್ ಎನ್ನುವ ಚಿಕ್ಕಗ್ರಾಮ. ದೇಸಾಯಿಯವರು ಭಾರತ ಸರಕಾರದ ಪುರಾತತ್ವ ಇಲಾಖೆಯ ಶಾಸನ ಸಂಶೋಧನಾ ವಿಭಾಗದಲ್ಲಿ ಕೆಲಸಕ್ಕೆ ಸೇರಿ ತಮ್ಮ ಕಾರ್ಯವನ್ನು ಪ್ರಾಮಾಣಿಕತೆಯಿಂದ ನಿರ್ವಹಿಸಿದವರು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಚರಿತ್ರೆ ಮತ್ತು ಸಂಸ್ಕೃತಿಯ ವಿಭಾಗದ ಮುಖ್ಯಸ್ಥರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇವರು 'ವಿಜಯನಗರ ಸಾಮ್ರಾಜ್ಯ' ಎಂಬ ಮಹಾಪ್ರಬಂಧವನ್ನು ರಚಿಸಿದ್ದಾರೆ. ಅಲ್ಲದೇ ಕೊಪ್ಪಳ ಜಿಲ್ಲೆಯ ಶಾಸನ ಸಂಪುಟ ಹಾಗೂ ಶಾಸನ ಪರಿಚಯವನ್ನು ಸಂಪಾದಿಸಿ ಈ ಜಿಲ್ಲೆಯ ಐತಿಹಾಸಿಕ ಮಹತ್ವವನ್ನು ಗುರುತಿಸುವಲ್ಲಿ ಕಾರಣಿಭೂತರಾಗಿದ್ದಾರೆ. ಹಲವಾರು ಕಾದಂಬರಿ, ಕಥಾಸಂಕಲನಗಳನ್ನು ರಚಿಸಿ ದಕ್ಷಣಭಾರತದಲ್ಲಿ ಜೈನಧರ್ಮ ಮತ್ತು ಜೈನಶಾಸನಗಳು ಎಂಬ ಡಿ.ಲಿಟ್

ಪ್ರಬಂಧವನ್ನು ರಚಿಸಿ ಆ ಕಾಲದ ಜೈನಧರ್ಮದ ಶಾಸನಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

**ಡಾ॥ ಸಿದ್ದಯ್ಯ ಪುರಾಣಿಕ್ :**

ಕೊಪ್ಪಳ ಜಿಲ್ಲೆಯ ದ್ಯಾಂಪುರದ ಡಾ॥ ಸಿದ್ದಯ್ಯ ಪುರಾಣಿಕರವರು ಬಹುಮುಖ ಪ್ರತಿಭಾವಂತರು ಕಾವ್ಯನಂದ, ಎಂದು ಪ್ರಸಿದ್ಧಿ ಪಡೆದ ಸಿದ್ದಯ್ಯ ಪುರಾಣಿಕರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಅಲ್ಲದೆ ಇನ್ನೇನು ವಚನ ಸಾಹಿತ್ಯ ಮಸುಕಾಗುತ್ತಿದ್ದ ಸಂದರ್ಭದಲ್ಲಿ ಆಧುನಿಕ ವಚನ ಸಾಹಿತ್ಯಕ್ಕೆ ಮಾದರಿಯಾಗಿ ನಿಂತವರು. ಜಲಪಾತ, ಮಾನಸ ಸರೋವರ, ಮೊದಲು ಮಾನವನಾಗು, ಮರಳುಸಿದ್ದನ ಕಥೆ. ವಚನೋಜ್ಞಾನ, ವಚನ ವಂದನೆ, ಅಲ್ಪ ಪ್ರಮಾಣ, ಭರತವೀರ, ತುಷಾರ್, ತ್ರಿಭುವಣ ಮಲ್ಲ, ಹರಡೆಕರ್ ಮಂಜಪ್ಪ, ಮಹದೇವಿ, ಬಸವ ದರ್ಶನ, ಮಹಾತ್ಮ ಕನಕದಾಸ್ ಮುಂತಾದ ಕಥೆ – ಕವನ, ಕಾದಂಬರಿ, ಜೀವನ ಚರಿತ್ರೆ, ನಾಟಕ ಮತ್ತು ಅನುವಾದಿತ ಕೃತಿಗಳನ್ನು ರಚಿಸಿದ್ದಾರೆ. ೧೯೪೩ ರಲ್ಲಿ ತಾಲ್ಲೂಕಿನ ದಂಡಧೀಕಾರಿಯಾಗಿ ನೇಮಕಗೊಂಡು ಕಮೀಷನರ್ ಮತ್ತು ಐ.ಎ.ಎಸ್. ಅಧಿಕಾರಿಯಾಗಿ ಕಾರ್ಯವನ್ನು ನಿರ್ವಹಿಸಿದವರು. ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಬಿಲ್ಲವರ್ ಪ್ರಶಸ್ತಿ, ಮೋನ್ನಾಳ್ಳ ಮುಂತಾದ ಪ್ರಶಸ್ತಿಗಳನ್ನು ಪಡೆಯುವುದರ ಜೊತೆಗೆ ವಚನ ಬ್ರಹ್ಮ ಎಂಬ ಬಿರುದಿಗೆ ಪಾತ್ರರಾಗಿದ್ದರು. ಅಷ್ಟೆ ಅಲ್ಲದೆ ಗುಲ್ಬರ್ಗಾದಲ್ಲಿ ನಡೆದ ೫೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗುರುತಿಸಿಕೊಂಡಿರುವವರು. ಹೀಗೆ ಸಾಹಿತ್ಯ, ಆಡಳಿತ ಹಾಗೂ ಜನಪರ ಚಿಂತನೆಯನ್ನು ರಮ್ಯವಾಗಿಸಿರುವ ಡಾ॥ ಸಿದ್ದಯ್ಯ ಪುರಾಣಿಕರು ಮಹತ್ವದ ಕವಿಗಳಲ್ಲಿ ಒಬ್ಬರಾಗಿ ಈ ಜಿಲ್ಲೆಗೆ ಶ್ರೇಷ್ಠತೆಯನ್ನು ತಂದು ಕೊಟ್ಟಿರುತ್ತಾರೆ.

"ಸರಕಾರಿ ಸೇವೆಯಿಂದ ನಿವೃತ್ತರಾದ ಮೇಲೆ ಸಂಪೂರ್ಣವಾಗಿ ಸಾಹಿತ್ಯ ಚಟುವಟಿಕೆಗಳಲ್ಲಿ ನಿರತರಾದರು. ಬಸವ ಸಮಿತಿಯ ಮೂಲಕ ಬಸವ ಪಥ ಮತ್ತು ಬಸವ ಜರ್ನಲ್‌ಗಳ ಪ್ರಧಾನ ಸಂಪಾದಕರಾಗಿ, ಸಂಶೋಧನ ಪ್ರಕಟಣ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ವಿ.ಕೃ.ಗೋಕಾಕರ ಅಧ್ಯಕ್ಷತೆಯಲ್ಲಿ ವ್ಯಾಸಂಗ ಸಮಿತಿಯನ್ನು ಕಟ್ಟಿ ಪ್ರತಿ ತಿಂಗಳು ಒಬ್ಬೊಬ್ಬ ವಿದ್ವಾಂಸರಿಂದ ಉಪನ್ಯಾಸ ನಡೆಸುತ್ತಿದ್ದರು. ಲೇಖಕರ ಒಕ್ಕೂಟ, ಕರ್ನಾಟಕ ವಿಕಾಸ ವೇದಿಕೆಗಳನ್ನು ಕಟ್ಟಿ ಜಾತ್ಯಾತೀತವಾಗಿ ಕನ್ನಡದ ನೆಲೆ–ಸಾಹಿತ್ಯದ ಧ್ವನಿಯಾಗಿ ಕೆಲಸ ಮಾಡಿದರು. ಕೆ.ಮುದ್ದಣ್ಣ, ಜಯತೀರ್ಥ ರಾಜಪುರೋಹಿತ, ದೇಜಗೌ ಮೊದಲಾದವರು ಅವರೊಂದಿಗೆ ಕೈ ಜೋಡಿಸಿದರು."[೧೬]

ಕನ್ನಡ ನಿಘಂಟು ಸಮಿತಿಯ ಸದಸ್ಯರಾಗಿ, ಜ್ಞಾನಗಂಗೋತ್ರಿಯ ಸಂಪಾದಕ ಸಮಿತಿಯ ಸದಸ್ಯರಾಗಿ, ಬಸವ ಸಮಿತಿಯ ಕೋಶಾಧ್ಯಕ್ಷರಾಗಿ – ಉಪಾಧ್ಯಕ್ಷರಾಗಿ 'ಲೋಕವಾಣಿ' ಪತ್ರಿಕೆಯ

ಸಂಪಾದಕರಾಗಿ, ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿಗಳ ಸದಸ್ಯರಾಗಿ, ಪಠ್ಯಪುಸ್ತಕಗಳ ಸಮಿತಿಯ ಸದಸ್ಯರಾಗಿ ಶ್ರಮಿಸಿದ್ದಾರೆ.

ಗೋಕಾಕ ವರದಿಯ ಚಳವಳಿಯಲ್ಲಿ ತೀವ್ರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಲೋಕಸೇವಾ ಆಯೋಗದ ಪರೀಕ್ಷೆಯಲ್ಲಿ ಕನ್ನಡಕ್ಕೆ ಸ್ಥಾನ ದೊರಕಿಸಲು ದೇಜಗೌ ಅವರೊಂದಿಗೆ ಉಪವಾಸ ಸತ್ಯಾಗ್ರಹ ನಡೆಸಿದರು. ಶಂಬಾ ಜೋಶಿ ಮತ್ತು ಬಾಳಪ್ಪ ಹುಕ್ಕೇರಿ ಅವರ ಸನ್ಮಾನ ಸಮಿತಿಯ ಅಧ್ಯಕ್ಷರಾಗಿದ್ದರು.

ಸಿದ್ಧಯ್ಯ ಪುರಾಣಿಕರು ಭಾಗವಹಿಸಿದ್ದ ಸಾಹಿತ್ಯ ಗೋಷ್ಠಿಗಳಿಗೆ ಮಿತಿಯೇ ಇಲ್ಲ. ಶ್ರೇಷ್ಠವಾಗ್ಮಿಗಳಾಗಿದ್ದ ಇವರು ಅನೇಕ ಶಾಲೆ–ಕಾಲೇಜುಗಳ ಕಾರ್ಯಕ್ರಮಗಳಲ್ಲೂ ಭಾಗವಹಿಸಿದ್ದಾರೆ. ರಾಯಚೂರು ಜಿಲ್ಲಾ ಪ್ರಥಮ ಸಾಹಿತ್ಯ ಸಮ್ಮೇಳನ, ಕೊಡಗು ಜಿಲ್ಲಾ ಸಾಹಿತ್ಯ ಸಮ್ಮೇಳನ, ನವಿಲುಗುಂದ, ಎಡೆಯೂರು, ಧರ್ಮಸ್ಥಳಗಳ ಸರ್ವ ಧರ್ಮ ಸಮ್ಮೇಳನ, ಹೊಂಬಳದ ಸಾಹಿತ್ಯ ಸಮ್ಮೇಳನ, ಕಲಬುರ್ಗಿಯ ಅಖಿಲ ಭಾರತ ೫೮ನೇ ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರಾಗಿದ್ದರು

**ಶಿರೂರು ವೀರಭದ್ರಪ್ಪ :**

ಹೈದ್ರಾಬಾದ್ ಕರ್ನಾಟಕದ ವಿಮೋಚನಾ ಹೋರಾಟ, ಕರ್ನಾಟಕದ ಏಕೀಕರಣದ ಹೋರಾಟ ಮತ್ತು ಸ್ವಾತಂತ್ರ್ಯ ಹೋರಾಟ ಕುರಿತು ಕೃತಿಗಳನ್ನು ಬರೆಯುವುದರ ಮೂಲಕ ಆ ಕಾಲದ, ಆ ಸಂಧರ್ಭದ ವಾಸ್ತವಿಕ ತಲ್ಲಣಗಳನ್ನು ನೈಜತೆಯ ಸ್ವರೂಪಗಳನ್ನು ಹಾಗೂ ಜನ ಜೀವನದ ಬದುಕನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಅಪ್ಪಟ ಗಾಂಧಿವಾದಿಗಳಾದ ಇವರು ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿಗೆ ಎರಡು ಬಾರಿ ಶಾಸಕರಾಗಿ ಜನ ಮನ್ನಣೆಯನ್ನು ಗಳಿಸಿದ್ದಾರೆ. ಅಷ್ಟೆ ಅಲ್ಲದೇ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಹೋರಾಟದ ಈ ಜಿಲ್ಲೆಯ ಕಾಣಿಕೆಯನ್ನು ಗುರುತಿಸಿ ಈ ಪ್ರದೇಶದ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಪ್ರಗತಿಗಾಗಿ ಶ್ರಮಿಸಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

**ಅನ್ನದಾನಯ್ಯ ಪುರಾಣಿಕ :**

ಇವರು ಹೈಕೋರ್ಟಿನ ವಕೀಲರಾಗಿ ಸೇವೆ ಸಲ್ಲಿಸಿ ಅಂದಿನ ರಜಾಕಾರರ ವಿರುದ್ಧ ಈ ಭಾಗದ ವಿಮೋಚನೆಗೆ ಹೋರಾಡಿದವರು. ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಕೃತಿಗಳನ್ನು ಸಂಪಾದಿಸಿದರಲ್ಲದೇ ಹಲವಾರು ಸಂಘಗಳನ್ನು, ಸಾಹಿತ್ಯ ಪರಿಷತ್‌ನ್ನು ಸಂಘಟಿಸಿದ ಕೀರ್ತಿ ಇವರದಾಗಿದೆ. ಬಸವರಾಜ ಪುರಾಣಿಕ, ಎ.ಜಿ.ಶಾಸ್ತ್ರಿ ಮಠ, ಬಂ.ರಂ. ಸರಮೊಕದ್ದಮ್ ಮತ್ತು ಎಮ್. ಜೀವನ್ ಮುಂತಾದವರು ಸಹ ಈ ಭಾಗದ ಸಾಹಿತ್ಯವನ್ನು ಶ್ರೀಮಂತಗೋಳಿಸಿದ್ದಾರೆ.

**ಡಾ. ದೇವೇಂದ್ರ ಕುಮಾರ ಹಕಾರಿ :**

ಕವಿ,ಕಥೆಗಾರ, ಕಾದಂಬರಿ, ನಾಟಕ, ಜೀವನ ಚರಿತ್ರೆ, ಅನುವಾದ, ವಿಮರ್ಶಕ ಮತ್ತು ಜಾನಪದ ವಿದ್ವಾಂಸರಾದ **ಹ**ಕಾರಿ ಇವರು ವೃತ್ತಿಯಿಂದ ಉಪನ್ಯಾಸಕರು. ಕರ್ನಾಟಕದ ಹಲವಾರು ವಿಶ್ವ ವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸಿ ಜಾನಪದ ಹಾಡುಗಾರರೆಂದು ಪ್ರಸಿದ್ಧಿಯಾಗಿದ್ದಾರೆ. ಜಾನಪದ ದುರಂತ – ಲಾವಣಿಗಳು ಒಂದು ಅಧ್ಯಯನ ಎಂಬ ಮಹಾ ಪ್ರಬಂಧವನ್ನು ರಚಿಸಿ ಪಿ.ಎಚ್.ಡಿ ಪಡೆದ ಇವರು ಕಾವ್ಯಾನಂದ ಪ್ರಶಸ್ತಿ, ಜನಪದ ತಜ್ಞ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಅಲ್ಲದೇ ಹೈದ್ರಾಬಾದ ವಿಮೋಚನ ಹೋರಾಟದ ಸೇನಾನಿಯಾಗಿ ಭಾಗವಹಿಸಿದ ಇವರು ಬಸವಣ್ಣವನರ ೧೦೧ ವಚನಗಳನ್ನು ಇಂಗ್ಲೀಷಿಗೆ ಅನುವಾದಿಸಿದ್ದಾರೆ. ರಾಯಚೂರು ಜಿಲ್ಲೆಯ ಸಿಂಧನೂರಿನಲ್ಲಿ ಜರುಗಿದ ಮೂರನೇ ಕನ್ನಡ ಸಾಹಿತ್ಯ ಸಮೇಳನದ ಅಧ್ಯಕ್ಷರಾಗಿ ಆಯ್ಕೆಯಾದ ಇವರು ಸಾಹಿತ್ಯ ಕ್ಷೇತ್ರಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ.

**ವಸಂತ ಕುಷ್ಟಗಿ :**

ಹೆಸರೆ ಸೂಚಿಸುವಂತೆ ಇದೇ ಜಿಲ್ಲೆಯ ಕುಷ್ಟಗಿಯವರು. ಇವರು ಸಾಹಿತ್ಯ ಸಂಸ್ಕೃತಿ ಕುರಿತು ತಮ್ಮದೇ ಆಗಿರುವಂತಹ ಅನುಭವಗಳನ್ನು ಹೊರಹಾಕಿದ್ದಾರೆ. ನಾಲ್ಕು ಸಂಶೋಧನಾ ಕೃತಿಗಳನ್ನು ರಚಿಸಿದ ಇವರು ಗಾಂಧಾರಿಯ ಕರುಣೆ, ಬಸಯಜ್ಞೆ, ದಂತಯತಿಯ ಭಾನು ಮುಂತಾದ ಕವನ ಸಂಕಲನಗಳನ್ನು, ಜಗನ್ನಾಥ ದಾಸರ ಹಿರಿಮೆ, ಮುಂಡರಿಗಿ ಭೀಮರಾಯ, ದಾಸಸಾಹಿತ್ಯದ ಹಾದಿಯಲ್ಲಿ ಮುಂತಾದ ಅನುವಾದ ಕೃತಿಗಳು, ವಿಜಯನಗರ ಪತನ, ಹಾಗೂ ನಂತರದ ಹರಿದಾಸ ಸಾಹಿತ್ಯ ಪರಂಪರೆ, ಕನ**ಕ**ದಾಸ**ರ** ಗೀತೆಗಳು, ಪುರಂದರ್ ಜಾನಕೀ ಪದಗಳು ಇಂತಹ ಹಲವಾರು ಕೃತಿಗಳನ್ನು ರಚಿಸಿದ ವಸಂತರವರು ವಾರಂಬಳ್ಳಿ ಪ್ರಶಸ್ತಿಗೆ ಆಯ್ಕೆಯಾಗಿ ತಾಲೂಕು ಸಮ್ಮೇಳನ ಅಧ್ಯಕ್ಷರಾಗಿ, ಕನ್ನಡ ಪ್ರಾಧ್ಯಾಪಕರಾಗಿದ್ದ ಇವರಿಗೆ ಗುಲ್ಬರ್ಗಾ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ.

**ಡಾ|| ಪಂಚಾಕ್ಷರಿ ಹೀರೆಮಠ :**

ವಿಶ್ವ ಹಾಗೂ ರಾಜ್ಯದ ಎಲ್ಲಾ ಭಾಷೆಗಳಲ್ಲಿ ಅನುವಾದ ಮಾಡಿದ ಇವರು ನೂರಕ್ಕು ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. 'ಕೆಳದಿ' ಎನ್ನುವ ೫೦೫ ಮುಕ್ತಕಗಳನ್ನು ಒಳಗೊಂಡ ಸಂಕಲನ ಗಾಳಿಗಂಧ, ನೀ ರುದ್ರನಾಗು ಆರಂಭ ಮಾಡುವಿ ಮುಂತಾದ ಸಂಪುಟಗಳನ್ನು ಹೊಂದಿದೆ. ಈ ಕೆಳದಿ ಸಂಕಲನಕ್ಕೆ ಮೂರು ಸಾವಿರ ಮಟ್ಟದ ಪ್ರಶಸ್ತಿ ಕೂಡ ಬಂದಿದೆ. ಈ ಕೆಳದಿ ಸಂಕಲನದ ಜೊತೆಗೆ ಒಟ್ಟು ೧೬ ಕವನ ಸಂಕಲನಗಳನ್ನು ರಚಿಸಿದ್ದಾರೆ. ಇವರು ಹಲವಾರು ಕಥೆಗಳನ್ನು ಸಹ ರಚಿಸಿ, ಬೇರೆ ಬೇರೆ ಭಾಷೆಗೆ ಅನುವಾದ ಮಾಡಿದ್ದಾರೆ. ಮೊಗ್ಗು ಚಲ್ಲಿದ ಬೆಳಕು, ಕೆಂಪು ಹೊಲಿಗೆ, ಆರು ಅಡಿ ಭೂಮಿ, ಹೀಗೆ ಒಟ್ಟು ಎಂಟು ಕಾದಂಬರಿಗಳನ್ನು ಅನುವಾದಿಸಿದ್ದಾರೆ. ಹಾನಗಲ್ಲ ಕುಮಾರಸ್ವಾಮಿ, ವಿಜಯ

ಮಹಾಂತಸ್ವಾಮಿಗಳ ಕುರಿತು ಜೀವನ ಚರಿತ್ರೆಯನ್ನು ಬರೆದ ಇವರು ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ. ಸಮಾಜ ಬಂಧು, ಗೂರೂರು, ಸೋವಿಯತ್ ಲ್ಯಾಂಡ್ ನೆಹರೂ ಅವಾರ್ಡ್, ಕರ್ನಾಟಕ ಸಾಹಿತ್ಯ ಅಕಾಡಮಿ, ಸಾಹಿತ್ಯ ಸುಧಾಕರ್, ನವರತ್ನ ಪ್ರಶಸ್ತಿ, ಸಾರ್ವಭೌಮ ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿಗಳನ್ನು ಇವರ ಸಾಹಿತ್ಯ ಸೇವೆಯನ್ನು ಗಮನಿಸಿ ಬಂದಿರುವಲ್ಲಿ ಅವರ ವ್ಯಕ್ತಿತ್ವದ ಹಾಗೂ ಬುದ್ಧಿವಂತಿಕೆಯು ನಮಗೆ ಗೋಚರಿಸುತ್ತದೆ.

**ರಾಘವೇಂದ್ರ ಇಟಗಿ :**

ಖ್ಯಾತ ಕವಿ ಸಿದ್ದಯ್ಯ ಪುರಾಣಿಕರ ಜೊತೆಗೆ ಕಾವ್ಯ ಕೃಷಿಯನ್ನು ಮಾಡಿದ ಇವರ ಭಾವಗೀತೆ ಮತ್ತು ದೇಶಭಕ್ತಿಗೀತೆಗಳನ್ನು ಬರೆದಿರುವ ಹೆಸರಾಂತ ಕವಿ. ಸನ್ನದ್ದ ಭಾರತ, ಬಸವ ಗೀತೆ, ಬೆಳಕು ತುಂಬಿದ ಬಲ್ಪ, ಕರುಳಿನ ಕತೆ, ಆಗಸ ತೋಟದ ಹೂಗಳು, ಮುಂತಾದ ಗೀತೆಗಳನ್ನು ರಚಿಸಿ ಹೆಸರು ವಾಸಿಯಾಗಿದ್ದಾರೆ.

**ಜೈಯ ತೀರ್ಥ ರಾಜಪುರೋಹಿತ್ :**

ಕೊಪ್ಪಳ ಜಿಲ್ಲೆಯ ಕನಕಗಿರಿ ಇವರ ಜನ್ಮಸ್ಥಳ. ವೃತ್ತಿಯಿಂದ ತಹಶೀಲ್ದಾರರಾದ ಇವರು ಪ್ರಾಮಾಣಿಕ ವ್ಯಕ್ತಿಯಾಗಿದ್ದರು. ಕನ್ನಡ ತೀರ್ಪುಗಳು ಹಾಗೂ ಆಡಳಿತ ಕನ್ನಡ ಇವರ ಮಹತ್ವದ ಕೃತಿಗಳು. ಪಾರವ್ವನ ಪಂಚಾಯಿತಿ ರೋಹಿಣಿ, ಹಾಲುಜೇನು, ಜೋಹರಾ ಕಥೆ ಕಾದಂಬರಿಗಳಾಗಿವೆ. ತುಂಗೆಯ ಅಂಗಳದಲ್ಲಿ ಕುಮಾರ ವ್ಯಾಸ, ವ್ಯಾಸರಾಯರು, ಜಗನ್ನಾಥ ದಾಸರು, ಕೃಷ್ಣದೇವರಾಯ ಮುಂತಾದವುಗಳು ನಾಟಕ ಮತ್ತು ಜೀವನ ಚರಿತ್ರೆಗೆ ಸಂಬಂಧಿಸಿವೆ. ಕೇಂದ್ರ ಸಾಹಿತ್ಯದ ಅಕಾಡಮಿಯ ಸದಸ್ಯರಾಗಿ, ಕನ್ನಡದ ಕಾವಲು ಸಮಿತಿಯ ಸದಸ್ಯರಾಗಿ, ಕನ್ನಡ ಸಂಸ್ಕೃತಿ ನಿರ್ದೇಶಕರಾಗಿ ಗುಲ್ಬರ್ಗಾ ವಿಶ್ವ ವಿದ್ಯಾಲಯದ ಕುಲಸಚಿವರಾಗಿ ಸೇವೆ ಸಲ್ಲಿಸಿದವರು.

ತಹಸೀಲದಾರರಾಗಿ  ಸರಕಾರದ ಸೇವೆಗೆ ಸೇರಿದರು. ಸರಕಾರದ ಹಿರಿಯ ಅಧಿಕಾರಿಯಾಗಿ ನಿವೃತ್ತರಾದರು. ಕನ್ನಡ ತೀರ್ಪುಗಳು ಹಾಗೂ ಆಡಳಿತ ಕನ್ನೆ ಇವರ ಮಹತ್ವದ ಕೃತಿಗಳು. ಪಾರವ್ವನ ಪಂಚಾಯತಿ, ರೋಹಿಣಿ, ಮೌಲ್ಯಗಳೂ, ಶಿಥಿಲಶಿಲೆ ಇವರ ಕಥಾ ಸಂಕಲನಗಳು. ಸ್ವತಂತ್ರ ಕಾದಂಬರಿಗಳೂ ಹಾಲುಜೇನು, ಸುಳಿಗಾಳಿ, ಹೈದರಾಬಾದ ಪೋಲಿಸ ಕಾರ್ಯಾಚರಣೆಯ ಹಿನ್ನೆಲೆಯಲ್ಲಿ ರಚಿತಗೊಂಡ ಕಾದಂಬರಿಗಳಾಗಿದ್ದು 'ಸುಳಿಗಾಳಿ' ಕಾದಂಬರಿಗೆ ಸುಧಾ ವಾರಪತ್ರಿಕೆಯ ಯುಗಾದಿ ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ ಬಂದಿದೆ. ತುಂಗಾತರಂಗ, ಕಛೇರಿ ಕೈಪಿಡಿ, ಪಂಪಾ ಸಂಪದ, ಪಂಪಾ ತುಂತುರು, ಆಡಳಿತ ಭಾಷಾ ಸಮಸ್ಯೆಯ ವಿಶ್ಲೇಷಣೆ, ಸಂಪಾದಿತ ಕೃತಿಗಳಾಗಿವೆ.

ತುಂಗೆಯ ಅಂಗಳದಲ್ಲಿ, ಕುಮಾರವ್ಯಾಸ, ಜಯ ಬಾಂಗ್ಲಾ ಇವರ ನಾಟಕಗಳು. ವ್ಯಾಸರಾಯರು, ಜಗನ್ನಾಥದಾಸರು, ಸುರಪುರದ ಶೂರನಾಯಕರು, ಸ್ವಾಮಿ ರಾಮ ತೀರ್ಥರು, ಕೃಷ್ಣದೇವರಾಯ ಜೀವನ

ಚರಿತ್ರೆಗಳಾಗಿದ್ದು, 'ಕನಕಗಿರಿ' ಪರಿಚಯ ಪುಸ್ತಕ ಬಂದಿವೆ. ೧೯೬೩ ರಿಂದ ೧೯೬೯ರವರೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ, ಕನ್ನಡ ಕಾವಲು ಸಮಿತಿ ಸದಸ್ಯರಾಗಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಗುಲಬರ್ಗಾ ವಿ.ವಿ ಸ್ಥಾಪನಾಪೂರ್ವ ಅಧಿಕಾರಿಯಾಗಿ, ಕುಲ ಸಚಿವರಾಗಿ ವಿಶ್ವವಿದ್ಯಾಲಯಕ್ಕೆ ಭದ್ರ ಬುನಾದಿ ಹಾಕಿದ್ದಾರೆ. ಶ್ರೇಷ್ಠ ವಾಗ್ಮಿಯಾಗಿದ್ದ ಜಯತೀರ್ಥ ರಾಜಪುರೋಹಿತರು, ಕನ್ನಡದ ಕೆಲಸವನ್ನು ನಿಷ್ಠೆಯಿಂದ, ಶ್ರದ್ಧೆಯಿಂದ, ಮಾಡಿದ್ದಾರೆ. ರಾಯಚೂರಿನ ಮುನಿಸಿಪಲ್ ಕಮೀಶನರಾಗಿದ್ದಾಗ ಶಾಂತರಸ, ಚಂದ್ರಕಾಂತ ಕುಸನೂರು, ಡಾ.ಕೆ.ಮುದ್ದಣ್ಣ, ಚೆನ್ನಬಸವಪ್ಪ ಬೆಟ್ಟದೂರು ಇವರೊಡನೆ ಈ ಭಾಗದ ಸಾಹಿತ್ಯಿಕ ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾಗಿದ್ದಾರೆ.

ಮಲ್ಲಿಕಾರ್ಜುನ ಹಿರೇಮಠ, ಗವೀಶ ಹಿರೇಮಠ, ಅನ್ನದಾನ ಹಿರೇಮಠ, ಡಾ॥ ಶ್ರೀನಿವಾಸ ಕುಲಕರ್ಣಿ ಲಕ್ಷ್ಮಣ ಅಳವಂಡಿ, ಡಾ. ಕೆ.ವಿ.ಬ್ಯಾಳಿ, ಡಾ. ವಿ.ಬಿ.ಅಂಗಡಿ, ವಿರೂಪಾಕ್ಷಪ್ಪ ಕೋರಗಲ್ಲ, ವೆ.ವಿ.ಕಟ್ಟಿ, ನರಹರಿ ಆರ್ ದೀಕ್ಷಿತ್, ಡಾ. ಎನ್.ಕೆ. ಕಡೆತೋಟ, ಡಾ. ತೇಜಸ್ವಿ ಕಟ್ಟಿಮನೆ, ಗಂಗಾಧರ್ ಕುಷ್ಟಗಿ, ಜಿ.ಆರ್. ಹಿರೇಮಠ, ಶ್ರೀಮತಿ ಶಾಂತಾದೇವಿ ಹಿರೇಮಠ, ಸಿದ್ದರಾಮ ಹಿರೇಮಠ, ಪ್ರಹ್ಲಾದ್ ಬೆಟಗೇರಿ, ಗವಿಸಿದ್ದ ಎನ್. ಬಳ್ಳಾರಿ, ಅಲ್ಲಮಪ್ರಭು ಬೆಟ್ಟದೂರ, ಡಾ. ಬಸವರಾಜ್ ಸಬರದ್, ಡಾ. ವಿಜಯಶ್ರೀ ಸಬರದ್, ಡಾ. ಬಿ.ವಿ. ಶೀರೂರು, ಡಾ. ವೀರಣ್ಣ ರಾಜೂರ್, ವೀರಣ್ಣ ವಾಲಿ, ಶಿವಪ್ರಸಾದ ಗಾದಿಮನೆ, ಎಸ್. ವಿ. ಪಾಟೀಲ್ ಗುಂಡೂರು ಮುಂತಾದ ಪ್ರಮುಖ ಕವಿಗಳು, ಚಿಂತಕರಲ್ಲದೇ ಇನ್ನೂ ಅನೇಕ ಕವಿಗಳು ಇತ್ತೀಚಿಗೆ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**ಡಾ. ಬಸವರಾಜ ಸಬರದ್ :**

ಗುಲ್ಬರ್ಗಾ ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾದ ಇವರು ಇದೇ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕನೂರು ಗ್ರಾಮದವರು. ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ದಲಿತ ಬಂಡಾಯ ಹೋರಾಟಗಾರರಾಗಿ ಪ್ರಸಿದ್ದಿಯಾಗಿದ್ದಾರೆ. ಪುರಂದರ ದಾಸ, ಬಸವೇಶ್ವರ ಕುರಿತು ಡಾಕ್ಟರೆಟ್ ಪದವಿ ಪಡೆದು, ನೂರುಹನಿಗಳು, ಮೂಡಲಕ ಕೆಂಪು ಮುಡ್ಯಾವ, ಧ್ವನಿ ಎತ್ತಿ ಹಾಡೇನ, ಕೆಂಡ ಸಂಪಿಗೆ, ಬೆಳ್ಳಕ್ಕಿ ಸಾಲು, ಹೊಸದಿಕ್ಕು, ವಚನ ಚಳುವಳಿಗಳು, ಜಾನಪದ ದೇವತೆಗಳು, ವಿಚಾರ ಸಂಪದ ಸಮುದಾಯ ಮತ್ತು ಸಂಸ್ಕೃತಿ, ಗುಲ್ಬರ್ಗಾ ಜಿಲ್ಲೆಯ ಅನುಭಾವಿಗಳು, ರಾಯಚೂರು, ಬೀದರ್, ಕೊಪ್ಪಳ ಜಿಲ್ಲೆಯ ಅನುಭಾವಿ ಕವಿಗಳು ಹೀಗೆ ನಾಟಕ ಕವಿತೆ ವಿಮರ್ಶಿಸಿ, ವಿಚಾರ ಸಂಶೋಧನೆ ಮತ್ತು ಸಂಪಾದನಾ ಕೃತಿಗಳನ್ನು ರಚಿಸಿ ನಾಡಿನಾದ್ಯಂತ್ ಪರಿಚಯರಾಗಿದ್ದಾರೆ. ಇವರ ಸೇವೆಯನ್ನು ಗಮನಿಸಿ, ಮುದ್ದಣ ಪ್ರಶಸ್ತಿ, ರತ್ನಾಕರ ವರ್ಣಿ, ಕಾವ್ಯನಂದ ಮತ್ತು ಸಾಹಿತ್ಯಶ್ರೀ ಪ್ರಶಸ್ತಿಗಳು ಬಂದಿವೆ.

**ಡಾ. ಬಿ.ವಿ. ಶಿರೂರು :**

ಯಲಬುರ್ಗಾ ತಾಲೂಕಿನ ಆಡೂರಿನಲ್ಲಿ ಬಸವರಾಜ ಜನಿಸಿದರು. ಅಡೂರು, ಕೊಪ್ಪಳ, ಕುಕನೂರು, ಗುಲಬರ್ಗಾ ಹಾಗೂ ಧಾರವಾಡದಲ್ಲಿ ಶಿಕ್ಷಣ ಪಡೆದು, ಕರ್ನಾಟಕ ವಿಶ್ವ ವಿದ್ಯಾಲಯದಿಂದ ಎಂ.ಎ., ಪಿಎಚ್.ಡಿ., ಪದವಿ ಸಂಪಾದಿಸಿದ್ದಾರೆ. 'ಶ್ರವಣಬೆಳಗೊಳ ಒಂದು ಸಾಂಸ್ಕೃತಿಕ ಅಧ್ಯಯನ' ಜೈನೇತರ ಸಾಹಿತಿಯಾಗಿ ಕೈಗೊಂಡ ಅಧ್ಯಯನ ಇವರ ಸಾಹಿತ್ಯ ಕ್ಷೇತ್ರವನ್ನು ವಿಸ್ತರಿಸಿತು. ಹರಿಹರನ ಗಿರಿಜಾ ಕಲ್ಯಾಣ (೧೯೬೮) ವಿಮರ್ಶೆಯಿಂದ ಆರಂಭಿಸಿದ ಇವರ ಸಾಹಿತ್ಯಕೃಷಿ ಸಂಪಾದನೆ, ಸಂಶೋಧನೆಗಳಿಗೆ ಮೀಸಲಾಗಿದೆ. ಶ್ರೀ ಅನ್ನದಾನ ಮಹಾಸ್ವಾಮಿದ್ವಯರು (೧೯೭೩) 'ಶ್ರವಣಬೆಳಗೊಳ' ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ ಪಿಎಚ್.ಡಿ ಮಹಾಪ್ರಬಂಧ (೧೯೬೯) ಶ್ರವಣಬೆಳಗೊಳದ ಬಾಹುಬಲಿ ಪ್ರತಿಷ್ಠಾನದ ಬಹುಮಾನ ಪಡೆದಿದೆ. ೧೯೮೫ರಲ್ಲಿ ಕರ್ನಾಟಕ ವಿ.ವಿ. ಕನ್ನಡ ಅಧ್ಯಯನ ಪೀಠದಲ್ಲಿ ಜೈನವಿಭಾಗಕ್ಕೆ ಪ್ರವಾಚಕರಾಗಿ, ೨೦೦೧ರಲ್ಲಿ ನಿವೃತ್ತರಾದರು. "ಇವರ ಮಿತ್ರರು, ಶಿಷ್ಯರು ಹಾಗೂ ಅಭಿಮಾನಿಗಳು ೧೫-೧೨-೨೦೦೨ರಲ್ಲಿ ಧಾರವಾಡದಲ್ಲಿ ೮೫೦ ಪುಟಗಳ 'ಸಿರಿ ಸಂಪದ' ಅಭಿನಂದನಾ ಗ್ರಂಥ ಸಮರ್ಪಿಸಿದ್ದಾರೆ. ಸರಳ, ಸಂಪನ್ನ ವಿವಾದಾತೀತ ವ್ಯಕ್ತಿತ್ವದ ಕನ್ನಡ ಪ್ರಾಧ್ಯಾಪಕರು, ವಿದ್ವಾಂಸರು. ಇವರ ಮಾರ್ಗದರ್ಶನದಲ್ಲಿ ೧೨ ಪಿಎಚ್.ಡಿ ಮಹಾಪ್ರಬಂಧಗಳು ೧೦ ಎಂ.ಫಿಲ್ ಕಿರು ಸಂಪ್ರಬಂಧಗಳು ವಿಶ್ವವಿದ್ಯಾಲಯದ ಮಾನ್ಯತೆ ಪಡೆದುಕೊಂಡಿವೆ."[೧೬]

ಯಲಬುರ್ಗಿಯ ಸಿಂದರು ಪ್ರಸಾರಾಂಗ ಕ.ವಿ.ವಿ. ಧಾರವಾಡ ೧೯೭೭ ಭಿಕ್ಷಾಟನೆ ಚರಿತೆ (ಗದ್ಯಾನುವಾದ ೧೯೮೧), ನಿರಾಳ ಮಂತ್ರಗೋಪ್ಯ (ಸ.೧೯೮೨) ಹೊರ ಬಂದಿವೆ. ಅವರು ಕವಿಯಾಗಿ, ಸಂಶೋಧಕರಾಗಿ, ಸಂಪಾದಕರಾಗಿ, ಪ್ರವಚಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಶ್ರವಣ ಬೆಳಗೊಳ, ಪಂಚವಟಿ, ಬುರುಲಿಂಗ ಶೆಟ್ಟಿಯ ನೂರೊಂದು ವಚನಗಳು, ಸಿದ್ದರಾಮ ಸಂಪದ ಹೀಗೆ ೨೫ ಕೃತಿಗಳನ್ನು ಬರೆದಿದ್ದಾರೆ.

**ಡಾ. ವೀರಣ್ಣ ರಾಜೂರು :**

ಇವರು ಮೂಲತಃ ಕುಷ್ಟಗಿ ತಾಲೂಕಿನ ಬೆಣಕಲ್ ಗ್ರಾಮದವರು. ಕನ್ನಡದಲ್ಲಿ ಸಾಂಗತ್ಯ ಸಾಹಿತ್ಯ, ವಚನ ಅಧ್ಯಯನ, ವಿಚಾರ ಪತ್ನಿಯರು, ಯುಗದ ವಚನಕಾರರು, ಅವಳ ಗಂಡ ನಾನೇ ಹೆಂಡ್ತಿ, ಗೌಡ್ರ ಅಳಿಯ, ಹೆಣ್ಣು ಜನ್ಮ, ವಂಶಜ್ಯೋತಿ, ಬೆಳಕು ನೂಕಿದ ಕತ್ತಲೆ, ಕರ್ನಾಟಕ ಕೇಸರಿ ಮುಂತಾದ ನಾಟಕಗಳನ್ನು ಉರಿಲಿಂಗದೇವರ ವಚನಗಳ ಶರಣರ ನುಡಿಮುತ್ತುಗಳು, ಸಿದ್ದಲಿಂಗ ಶತಕ, ವಚನಾಮೃತಸಾರ ಮುಂತಾದ ಗ್ರಂಥ ಸಂಪಾದನೆಗಳು, ಹಸ್ತ ಪ್ರತಿ, ಜನಪದ ಸಾಹಿತ್ಯ, ಸಂಸ್ಕೃತಿ ಮತ್ತು ಅಭಿನಂದನ ಗ್ರಂಥಗಳು ಕುರಿತು ಹೀಗೆ ಹಲವಾರು ಕೃತಿಗಳನ್ನು ಬರೆದ ಸೇವೆಯನ್ನು ಗಮನಿಸಿ ಮೂರು ಸಾವಿರಮಠ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಫೀಲೋಸಫಿ, ಡಾ॥ ಜ.ಚ.ನಿ.ಪ್ರಶಸ್ತಿ ಸರ್.ಎಂ.ವಿಶ್ವೇಶ್ವರಯ್ಯ ಪ್ರಶಸ್ತಿ ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

**ಗವಿಸಿದ್ಧ ಎನ್.ಬಳ್ಳಾರಿ :**

(ಜನನ ೧೬ನೇಯ ಜೂನ್ ೧೯೫೦, ಮರಣ ೧೪ನೇಯ ಮಾರ್ಚ ೨೦೦೪). ೧೯೭೦ರ ದಶಕದಿಂದ ೨೦೦೪ರವರೆಗೆ ಮಹತ್ವದ ಕಾವ್ಯ ನೀಡಿದ್ದಾರೆ. ಬಾಲ್ಯದಿಂದಲೇ ಕವಿತೆ ಬರೆಯುವ ಹವ್ಯಾಸ. ಜಿಲ್ಲೆಯ, ನಾಡಿನ ಮಹತ್ವದ ಕವಿ. ಕತ್ತಲ ದೇಶದ ಪದ್ಯಗಳು (೧೯೭೭), 'ಕಪ್ಪು ಸೂರ್ಯ' (೧೯೮೪) 'ಈ ಮಣ್ಣು ಅಪ್ಪಿಕೊಳ್ಳುವ ಮುನ್ನ' ೧೪ನೇ ಮಾರ್ಚ್ ೨೦೦೪ ಮರಣದ ದಿನ ಬಿಡುಗಡೆಗೊಂಡಿತು. ಕಪ್ಪು ಸೂರ್ಯ ಕವನ ಸಂಕಲನಕ್ಕೆ ಗುಲಬರ್ಗಾ ವಿಶ್ವ ವಿದ್ಯಾಲಯದ ಬಹುಮಾನ, ೨೦೦೨ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಬಂದಿದೆ. ತಳಮಳ ವಾರಪತ್ರಿಕೆ ೨೦೦೦ ರಿಂದ ಹೊರತರುತ್ತಿದ್ದು ಸಾಹಿತ್ಯ ಸಂಸ್ಕೃತಿಯ ಸದಭಿರುಚಿಯ ಪತ್ರಿಕೆ ನಡೆದಿದೆ. ಬಳ್ಳಾರಿಯವರು ಕವಿತೆ ಕಟ್ಟುವ ಕಲೆ, ವರ್ತಮಾನಕ್ಕೆ ಸ್ಪಂದಿಸುವ ರೀತಿ ಇವರೆಲ್ಲರಿಗಿಂತ ಭಿನ್ನವಾಗಿದೆ. ನವ್ಯದಿಂದ ಪ್ರಭಾವಿತರಾಗಿ ಕಾವ್ಯ ಬರೆಯುವದನ್ನು ಆರಂಭಿಸಿ ದಲಿತ ಬಂಡಾಯದ ಅಲೆಯಿಂದಾಗಿ ಜನಪದ – ಜನಮುಖಿಯಾಗಿ ಕವಿತೆಗಳನ್ನು ಕಟ್ಟುವುದರಲ್ಲಿ ನಿಸ್ಸೀಮತೆ ಸಾಧಿಸಿದರು. ಅವರ ಆತ್ಮಕಥಾನಕ ಕವನಗಳು, ವ್ಯಕ್ತಿಗಳನ್ನು ಕುರಿತು ಕಟ್ಟುವ ಕವನಗಳು ವೈಶಿಷ್ಟ್ಯ ಪೂರ್ಣವಾದವುಗಳಾಗಿವೆ.

**ಅಲ್ಲಮಪ್ರಭು ಬೆಟ್ಟದೂರು :**

೧೯೫೧ರ ಜುಲೈ ೩೧ರಂದು ರಾಯಚೂರು ಜಿಲ್ಲೆಯ ಬೆಟ್ಟದೂರಿನಲ್ಲಿ ಜನನ. ತಂದೆ ಚೆನ್ನಬಸವಪ್ಪ ವಕೀಲರು. ತಾಯಿ ಅಮರಮ್ಮ. ೧೯೭೬ರಿಂದ ಕೊಪ್ಪಳ ಶ್ರೀ ಗವಿಸಿದ್ದೇಶ್ವರ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ೨೦೦೩ರ ಏಪ್ರಿಲ್ ೩೦ ರಿಂದ ಪ್ರಿನ್ಸಿಪಾಲರಾಗಿ ಸೇವೆ. ಇದು ನನ್ನ ಭಾರತ (೧೯೭೭) ಕುದರಿಮೋತಿ ಮತ್ತು ನೀಲಗಿರಿ (೧೯೮೯), ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು (೨೦೦೧) ಮಹತ್ವದ ಕವನ ಸಂಕಲನಗಳು. ಪ್ರತಿಮೆ ಪ್ರತೀಕಗಳಿಂದ ಕಾವ್ಯದ ಸಂವಹನಕ್ಕೆ ಅಡ್ಡಿಯಾಗಬಾರದೆಂಬ ಜನಪದವಾದ ಕಾಳಜಿ ಇವರ ಕಾವ್ಯದ ಮೂಲ ದ್ರವ್ಯವಾಗಿದೆ. ಬಾಲ್ಯದಿಂದಲೇ ಪ್ರಶ್ನಿಸುವದನ್ನು ಹಕ್ಕಾಗಿಸಿಕೊಂಡು, ಅಂಧಶ್ರದ್ಧೆ, ಮೌಢ್ಯತೆ, ಕರ್ಮಸಿದ್ಧಾಂತದ ವಿರುದ್ಧ ಹೋರಾಟ, ಎಲ್ಲರೊಡನೆ ಕೂಡಿ ಹೋಗುವ ಸಹನ ಗುಣ, ಅಲ್ಲದ್ದನ್ನು ಕಂಡಾಗ ಕೆಂಡವಾಗುವ, ಪ್ರತಿಭಟಿಸುವ ಮನೋಭಾವ ಇವರ ಕಾವ್ಯದಲ್ಲಿದೆ.

**ಸಿ.ಎಂ.ಚೆನ್ನಬಸಪ್ಪ :**

ಕೊಪ್ಪಳ ಜಿಲ್ಲೆಯ ಪ್ರಮುಖ ಕವಿ, ಹಾಗೂ ರಾಜ್ಯದ ಪ್ರಮುಖ ದಲಿತ ಕವಿಗಳಲ್ಲೊಬ್ಬರು. ಸಿ.ಎಂ ಚೆನ್ನಬಸಪ್ಪ ಯಲಬುರ್ಗಿ ತಾಲೂಕಿನ ಮಂಡಲಗೇರಿಯಲ್ಲಿ ಮರಿಯಪ್ಪನವರ ಮಗನಾಗಿ ೧೬-೧೦-೧೯೫೫ರಂದು ಜನನ. ಬ್ಯಾಂಕ್ ನೌಕರರು, ಗಂಗಾವತಿ ತಾಲೂಕಿನ ಕಸಾಪ ಅಧ್ಯಕ್ಷರಾಗಿ (೧೯೮೧-೮೩) ಉತ್ತಮ ಸಾಹಿತ್ಯಿಕ ಕಾರ್ಯಕ್ರಮಗಳಲ್ಲಿ ನಾಟಕ ಮನರಂಜನೆಗೆ ಗಮನಹರಿಸಿದರು. ನಾಟಕ,

ಅಭಿನಯ, ನಿರ್ದೇಶನ, ಹವ್ಯಾಸಿ - ವೃತ್ತಿರಂಗಭೂಮಿ ಎರಡರಲ್ಲೂ ಸಮಾನ ಆಸಕ್ತಿ. ಬಳ್ಳಿಮೊಗ್ಗು (೧೯೮೦), ಚೈತ್ರ ಬಂದಿದೆ ಮತ್ತೆ (೧೯೮೯) ಎರಡು ಕವನ ಸಂಕಲನಗಳು. ಹಸಿರು ಕ್ರಾಂತಿಯ ಹರಿಕಾರ ಬಾಬು ಜಗಜೀವರಾಮ, ಜಾನಪದಶ್ರೀ ಪ್ರಶಸ್ತಿ ವಿಜೇತ ಫಕೀರವ್ವ ಗುಡಿಸಾಗರ ಇಬ್ಬರ ಚರಿತ್ರೆಗಳೂ, 'ಅರಿವು', 'ಹಿಂಗಾದ್ರ ಮುಂದೆ ಹ್ಯಾಂಗ್' ಎಂಬ ಎರಡು ನಾಟಕಗಳು ಬಂದಿವೆ. ಹವ್ಯಾಸಿ ಪತ್ರಕರ್ತ, ದಲಿತ ಬಂಡಾಯದ ಸಂಘಟಕರು, ದಲಿತ ಹೋರಾಟಗಾರರು.

**ಮಹಾಂತೇಶ ಮಲ್ಲನಗೌಡರ :**

ಗದಗ ಜಿಲ್ಲೆಯ ನರೇಗಲ್ಲ ಮಲ್ಲಾಪುರದಲ್ಲಿ ೧೯೫೮ರ ಜೂನ್ ೧ ರಂದು ಜನನ. ಎಂ.ಎ ಇಂಗ್ಲೀಷ್ ಉಪನ್ಯಾಸಕರು, 'ಪರಿವರ್ತನೆ' 'ಸ್ಪಂದನ', 'ಪರಾಗ','ಹಾಡಿನ ಕೋಗಿಲೆ', ಕವನ ಸಂಕಲಗಳು. 'ಯುಟೋಪಿಯಾ' ಕಥಾ ಸಂಕಲನ, ಸಂಪಾದಿತ 'ಚಿಗುರು', ಇಂಗ್ಲೀಷಿನಲ್ಲಿ 'ಲವ್ ಸಾಂಗ್ಸ್ ಆ್ಯಂಡ್ ಅದರ್ ಪೊಯಮ್ಸ್' ತಂದಿದ್ದಾರೆ. ಅಮೇರಿಕಾದ ಇಂಟರ್‌ನ್ಯಾಷನಲ್ಲಿನ ಯುನಿವರ್ಸಿಟಿ ಡಾಕ್ಟರೇಟ್ ಪದವಿ. ಸರ್.ಎಂ. ವಿಶ್ವೇಶ್ವರಯ್ಯ ಪ್ರತಿಷ್ಠಾನ ಪ್ರಶಸ್ತಿ, ಬುದ್ಧ ಪ್ರಶಸ್ತಿ ಪಡೆದಿದ್ದಾರೆ. ಹಲವು ಆಸಕ್ತಿಗಳಲ್ಲಿ ಆಸಕ್ತರು. ಕೊಪ್ಪಳ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, ಜಿಲ್ಲಾ ಚುಟುಕು ಸಮ್ಮೇಳನಾಧ್ಯಕ್ಷರಾಗಿದ್ದರು, ಇದೀಗ ಪ್ರಾಚಾರ್ಯರಾಗಿ·ಕೊಪ್ಪಳ ಜಿಲ್ಲೆಯ ಬೇವೂರು ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ಪ್ರೊ. ಬಿ.ವಿ.ಮಲ್ಲಾಪೂರ :**

ಪ್ರೊ.ಬಿ.ವಿ.ಮಲ್ಲಾಪೂರ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಸುರ್ಧಾವಣ ಸಂಪುಟಗಳನ್ನು ಹೊರತಂದಿದ್ದಾರೆ. ಇವರು ಇಟಗಿ ಗ್ರಾಮದವರು. ಉಸ್ಮಾನಿಯಾ ವಿ.ವಿ.ಯಿಂದ ಕನ್ನಡ ಎಂ.ಎ ಪಾಸಾಗಿ ಗುಲಬರ್ಗಾ ಶರಣ ಬಸವೇಶ್ವರ ಕಾಲೇಜು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ಹಳೆಗನ್ನಡ ಹಾಗೂ ಶಬ್ದಮಣಿ ದರ್ಪಣ ಬೋಧನೆಯಲ್ಲಿ ಗಟ್ಟಿಗರು. ಇವರು ಮಹತ್ವಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಇವರ ಸೋದರ ಪ್ರೊ.ಪಿ.ವಿ ಮಲ್ಲಾಪುರ ಕಲಬುರ್ಗಿಯ ಶರಣಬಸವೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಅಕಾಲಿಕ ಮರಣವನ್ನಪ್ಪಿದರು. ಇವರಿಬ್ಬರೂ ಮೌಲಿಕ ಕೃತಿಗಳನ್ನು ನೀಡಿದ್ದಾರೆ.

**ಮಾರುತೇಶ ಮಾಂದ್ರೆ :**

ಹೊಳೆಆಲೂರಿನ ಮಾರುತೇಶ ಮಾಂದ್ರೆ ತಾಯಿಯ ತವರುಮನೆ ಅಳವಂಡಿಯಲ್ಲಿ ೧೯೨೮ರಲ್ಲಿ ಜನಿಸಿದರು. ೧೯೯೪ರಲ್ಲಿ ಅಲ್ಲಿಯೇ ಮಣ್ಣಲ್ಲಿ ಮಣ್ಣದರು. ಅವರ ಬಾಲ್ಯ, ಯೌವನದ ಉತ್ತರಾರ್ಧ ಕೊಪ್ಪಳ ತಾಲೂಕಿನ ಅಳವಂಡಿ, ಭೈರಾಪೂರದಲ್ಲಿ ಕಳೆದಿದ್ದು, ಈ ಜಿಲ್ಲೆಯವರಾಗಿದ್ದಾರೆ. ಸೌಭಾಗ್ಯಲಕ್ಷ್ಮಿ, ಸ್ತ್ರೀರತ್ನ, ಶ್ರೀ ಶರಣಬಸವೇಶ್ವರ, ಶ್ರೀ ಗವಿಸಿದ್ದೇಶ್ವರ ಮಹಾತ್ಮೆ ಹುಚ್ಚೀರಪ್ಪಜ್ಜ ಮಹಾತ್ಮೆ ಹೀಗೆ ಸುಮಾರು ೧೫೦ ಕ್ಕೂ ಹೆಚ್ಚು ನಾಟಕಗಳನ್ನು ರಂಗಭೂಮಿಗೆ ನೀಡಿ ನಾಟಕ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ.

ಹಲವಾರು ನಾಟಕ ಕಂಪನಿಗಳು, ಮಠಮಾನ್ಯಗಳು ಕವಿರತ್ನ, ಶರಣಸಾಹಿತ್ಯ ರತ್ನ, ನಾಟ್ಯಸಾಹಿತ್ಯ ಶಿರೋಮಣಿ, ರಂಗಸಾಹಿತ್ಯ ಚಕ್ರವರ್ತಿ ಇತ್ಯಾದಿ ಬಿರುದುಗಳನ್ನು ನೀಡಿವೆ. ಇವರ ನಾಟಕ ಸಾಹಿತ್ಯ ಕುರಿತ ಎಂ.ಫಿಲ್. ಹೊರಬಂದಿದೆ.

**ಪಿ.ಬಿ. ಧುತ್ತರಗಿ :**

ಹುನಗುಂದ ತಾಲೂಕಿನ ಸೂಳಿಭಾವಿ ಇವರ ಹುಟ್ಟೂರಾದರೂ ಕುಷ್ಟಗಿ ತಾಲೂಕಿನ ಹನುಮಸಾಗರದಲ್ಲಿ ವಾಸವಾಗಿದ್ದರು. ಸರೋಜಮ್ಮ ಇವರ ಪತ್ನಿ ಶ್ರೇಷ್ಠ ಅಭಿನೇತ್ರಿ, ಸಂಗೀತಗಾರ್ತಿ ಹಾಗೂ ರಂಗನಿರ್ದೇಶಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಪುಂಡಲೀಕಪ್ಪ ಧುತ್ತರಗಿ ಇವರ ಪೂರ್ಣ ಹೆಸರು, ತಾಯಿ ಸಂಗಮ್ಮ, ೧೫-೬-೧೯೨೯ರಲ್ಲಿ ಜನಿಸಿದರು. ಗುಬ್ಬಿವೀರಣ್ಣ ಪ್ರಶಸ್ತಿ ೨೦೦೦ದಲ್ಲಿ ಪಡೆದುಕೊಂಡಿದ್ದಾರೆ. ೧೯೬೦ರಲ್ಲಿ ನಾಟಕ ಸಾಹಿತ್ಯ ರತ್ನ, ೧೯೬೯ರಲ್ಲಿ ನಾಟ್ಯಕವಿ ಪ್ರಕಾಶ, ೧೯೭೧ರಲ್ಲಿ ನಾಟ್ಯಕವಿ ಪುಂಗವ, ೧೯೯೯ರಲ್ಲಿ ನಾಟಕ ಅಕಾಡೆಮಿ ಪ್ರಶಸ್ತಿ '೧೯೬೯ರಲ್ಲಿ ರಾಜ್ಯೋತ್ಸವ ಪ್ರಶಸ್ತಿ' ೧೯೯೭ರಲ್ಲಿ ಕವಿಶ್ರೇಷ್ಠ, ರವಿಕೀರ್ತಿ ಇವರಿಗೆ ಸಂದ ಗೌರವಗಳು. ಬನಶಂಕರಿ ದೇವಿ, ಸಿದ್ಧನಕೊಳ್ಳದ ಅಜ್ಜ ಇವರ ಆರಾಧ್ಯ ದೈವಗಳು. 'ಸೊಸೆ ತಂದ ಸೌಭಾಗ್ಯ' (ಮೊದಲ ಕನ್ನಡ ಸಿನೆಮಾಸ್ಕೋಪ್ ಚಲನಚಿತ್ರ). ಡಾ.ರಾಜ್ ಅಭಿನಯದ ಚಲನಚಿತ್ರ 'ಸಂಪತ್ತಿಗೆ ಸವಾಲ್' ಪ್ರಸಿದ್ಧ ಚಲನಚಿತ್ರಗಳಾಗಿವೆ. ಇಲಕಲ್ಲ ಸೀರೆ, ತಾಯಿಕರುಳು, ಮಲಮಗಳು, ಮದುಮಗಳು – ಸಾಮಾಜಿಕ ನಾಟಕಗಳು. ಐತಿಹಾಸಿಕ ಪೌರಾಣಿಕ ಹಾಗೂ ಭಕ್ತಿರಸಪ್ರಧಾನ ಒಟ್ಟು ೬೦ ನಾಟಕಗಳು ಪ್ರಕಟಗೊಂಡಿವೆ. ಇವರ ನಾಟಕಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ.

**೨.೫ ಸಾಮಾಜಿಕ ಮತ್ತು ಸಾಂಸ್ಕೃತಿಕ ಅವಲೋಕನ:**

ಸಮಾಜ ಗತಶೀಲವಾದದ್ದು. ಸಮಾಜ ಮತ್ತು ಸಂಸ್ಕೃತಿ ಒಂದು ನಾಣ್ಯದ ಎರಡು ಮುಖಗಳು ಎಂದು ಮೇಲ್ನೋಟಕ್ಕೆ ಕಾಣಿಸಿದರೂ ಇವೆರಡರ ಅಂತರಂಗದ ದೃಷ್ಟಿಯಿಂದ ಸ್ವಲ್ಪಮಟ್ಟಿಗೆ ಭಿನ್ನವೆನಿಸಿಕೊಳ್ಳುತ್ತವೆ. ಸಮಾಜ ಜೀವನವು ಒಂದು ವ್ಯವಸ್ಥೆಯಾದ ನೆಲೆಯಾಗಿದೆ. ಪ್ರತಿಯೊಂದು ಸಮಾಜವು ತನ್ನದೇ ಆದ ಒಂದು ಸಂಸ್ಕೃತಿಯನ್ನು ಹೊಂದಿರುತ್ತದೆ. ಆದುದ್ದರಿಂದಲೇ ಸಂಸ್ಕೃತಿ ಎನ್ನುವುದು ಒಂದು ಜೀವನ ವಿಧಾನ ಎನ್ನುವುದಾಗಿದೆ. ಸಂಸ್ಕೃತಿಯೆಂಬುದು ಮಾನವನ ಸೃಜನಶೀಲ ಪ್ರತಿಭೆಯಿಂದ ಹುಟ್ಟಿರುವ ಒಂದು ಮೊತ್ತವಾದರೆ, ಪ್ರತಿ ಸಮಾಜವು ಸಂಸ್ಕೃತಿಯ ಜೀವನ ವಿಧಾನಗಳನ್ನು ಅಭಿವ್ಯಕ್ತಿಸುತ್ತದೆ.

"ಯಾವುದರಿಂದ ಸಂಪ್ರದಾಯಿಕ ಸಮಾಜ ಬದುಕಿತೊ ಅಂಥ ಮೌಲ್ಯಗಳ ಪ್ರಸಾರದ ಅನುಕೂಲಕ್ಕಾಗಿ ಸಂಪ್ರದಾಯ ಬದ್ದ ಸಂಸ್ಕೃತಿ ಬದುಕಿದ್ದನ್ನು ಕಾಣುತ್ತೇವೆ. ಸಾಮಾಜಿಕ ಸಂಬಂಧಗಳು ಮಾನವನ ಒಟ್ಟಾರೆ ಜೀವನಕ್ಕೆ ಸಂಬಂಧಿಸಿದರೆ, ಜನಾಂಗದ ಮಧ್ಯೆ ಸಂಪರ್ಕಸಾಧನವಾದ ಭಾಷೆ ಆವರವರ ಸಂಸ್ಕೃತಿಯನ್ನು ತಿಳಿಸುತ್ತದೆ. ಸಮಾಜವು ಮಾನವ ಸಮುದಾಯವನ್ನು ಒಟ್ಟುಗೂಡಿಸಿ

ಸಮಾನತೆಯ ಆಧಾರದಲ್ಲಿ ನಿಲ್ಲಿಸುವ ಪ್ರಯತ್ನ ಮಾಡುತ್ತಿರುತ್ತದೆ. ಆದುದರಿಂದಲೇ ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯು ಎಚ್ಚೆತ್ತೆಂಬುದನ್ನು, ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೇ ಇತರರಿಗಾಗಿಯೂ ಬಾಳಬೇಕೆಂಬ ಅರಿವು ಅವನಿಗೆ ಸಂಪೂರ್ಣವಾಗಿ ಇದ್ದಿತ್ತೆಂಬುದನ್ನು ತೋರಿಸುವುದೇ ಆಗಿದೆ."[೧೮] ಈ ವ್ಯಾಖ್ಯೆವನ್ನು ಗಮನಿಸಿದಾಗ ಪ್ರಾಚೀನ ಕಾಲದಿಂದಲೂ ಸಮಾಜ ತನ್ನ ಆದರ್ಶವನ್ನು ಪರಿಪಾಲಿಸಿಕೊಂಡು ಬಂದ ನಿದರ್ಶನವನ್ನು ಎತ್ತಿತೋರಿಸುತ್ತದೆ.

ಸಂಸ್ಕೃತಿ ಮತ್ತು ಅದರ ವಿಕಾಸಕ್ಕೆ ಭೌತಿಕ ಹಾಗೂ ಭಾವನಾತ್ಮಕ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪಗೊಳ್ಳುವ ಸಮಾಜ ಮನುಕುಲದ ವಿಕಾಸದ ಅದರ ಏಳಿಗೆಗೆ ಅಗತ್ಯವಾದ ಭದ್ರಬುನಾದಿಯನ್ನು ಕಲ್ಪಿಸಿಕೊಡುತ್ತದೆ. ಹೀಗಾಗಿ ಒಂದು ರಾಜ್ಯವು ತನ್ನ ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಜನರ ಹಿತಾಸಕ್ತಿಯ ಮೇಲೆ ಸಂಪೂರ್ಣ ಹತೋಟಿಯನ್ನು ಹೊಂದಿರುತ್ತದೆಂಬ ಮಾತು ಸತ್ಯ ಸಂಗತಿ. "ಸಮಾಜವು ಮಾನವನ ನಿರ್ಮಿತಿಯ ಸಂಸ್ಥೆಯಾಗಿದ್ದರಿಂದಲೇ ಅದರ ವಿಧಿ-ವಿಧಾನಗಳು ಹಲವಾರು ರೀತಿಯಲ್ಲಿ ಪದರುಗಳಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಸಂದರ್ಭದಲ್ಲಿ ಸಾಮಾಜದ ಜಟಿಲವಾದ ಸಂಕೀರ್ಣ ವ್ಯವಸ್ಥೆ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಸಂಸ್ಕೃತಿಗೆ ನಾಮರೂಪಗಳಿಲ್ಲ, ಇದೊಂದು ಅನುಭವ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮನುಷ್ಯ ತನಗೆ ಸಂಬಂಧಪಡುವ ವಿಷಯಗಳೆಲ್ಲ ಇದುವರೆಗೆ ಜಗತ್ತಿನಲ್ಲಿ ನಡೆದಿರುವ ವಿಚಾರಧಾರೆಯನ್ನು ಅರಿತುಕೊಂಡು ಪೂರ್ಣತ್ವವನ್ನು ಅನುಸರಿಸುವುದೇ ಸಂಸ್ಕೃತಿ ಹಾಗೂ ವೈಯಕ್ತಿಕ ವಿಕಾಸವೇ ಸಂಸ್ಕೃತಿ."[೧೯] ಎಂಬ ಮಾತು ಸಮಾಜದ ಸಂಸ್ಕೃತಿಯ ವಾಸ್ತವಿಕತೆಯನ್ನು ಅಭಿವ್ಯಕ್ತಿಸುತ್ತದೆ. ಇದು ಒಂದು ಒಪ್ಪಿತ ಸಂಗತಿಯಾಗಿದ್ದು ಜನಜೀವನದ ಪ್ರತಿಯೊಂದು ಚಟುವಟಿಕೆಯ ಕೇಂದ್ರವೆಂದು ಹೇಳಬಹುದಾಗಿದೆ.

ಸಮಾಜ ಮನುಷ್ಯ ಮನುಷ್ಯರನ್ನು ಒಂದುಗೂಡಿಸಿ ಅವರಲ್ಲಿ ತಳವೂರಿರುವ ಮಾನವೀಯ ಮೌಲ್ಯಗಳನ್ನು ಅನುಷ್ಠಾನಗೊಳಿಸಿ, ಅವರನ್ನು ಒಟ್ಟುಗೂಡಿಸುವುದೇ ಆಗಿರುತ್ತದೆ. ಅಂದರೆ ಸಮಾಜವೆಂದಾಗ ಒಂದು ಜನಾಂಗ, ಧರ್ಮ, ಜಾತಿ, ಮತ, ಪಂಥ, ಕುಲ-ಗೋತ್ರಕ್ಕೆ ಸೀಮಿತವಾಗಿರುವುದು ಇಂದಿಗೂ ಕಾಣುತ್ತೇವೆ. ಆದರೂ ಸಮಾಜವು ತನ್ನ ಸದಸ್ಯರನ್ನೊಳಗೊಂಡಂತೆ ಅವರ ಬೇಡಿಕೆಗಳಿಗೆ ಮುಂತಾದ ಅಗತ್ಯತೆಗಳನ್ನು ಒಂದು ಕುಟುಂಬ ನೋಡಿಕೊಳ್ಳುವಂತೆ ಹಲವಾರು ಕುಟುಂಬಗಳ ಅಗತ್ಯತೆಗಳನ್ನು ಪೂರೈಸಿ ಹಾಗೂ ನಿಯಂತ್ರಿಸುವ ಶಕ್ತಿಯನ್ನು ಸಮಾಜ ಪಡೆದುಕೊಂಡಿದೆ. ಹೀಗಾಗಿ ಸಮಾಜ ಜನಜೀವನದ ಸಂಸ್ಥೆಯೆಂದು ಪ್ರಸಿದ್ಧಿಯಾಗಿದೆ.

ಸಮಾಜದಲ್ಲಿ ಹಲವಾರು ಜಾತಿ, ಧರ್ಮಗಳು, ಪಂಥಗಳು ಬದುಕಿರುತ್ತವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಧರ್ಮ, ಜಾತಿ, ಪಂಥಗಳ ರೂಢಿ, ಸಂಪ್ರದಾಯ ಮತ್ತು ಪರಂಪರೆಯಲ್ಲಿ ಸಮಾಜ ಹೊಂದಿರುವುದು ಕಾಣುತ್ತೇವೆ. ಒಂದೇ ಕಡೆ ಎಲ್ಲಾ ಬಗೆಯ ಭಿನ್ನ ಭೇಧವಿದ್ದರೆ, ದೇಶದ ಸಾಮರಸ್ಯದ ದೃಷ್ಟಿಯಿಂದ ಭಾರತೀಯ ಸಮಾಜ ಎನಿಸಿಕೊಳ್ಳುವಲ್ಲಿ ಮಹತ್ವದ ಪಾತ್ರವಹಿಸಿದೆ.

**ಜಾತಿ ವ್ಯವಸ್ಥೆ :**

ಜಾತಿ ವ್ಯವಸ್ಥೆ ಎಂಬುದು ಭಾರತೀಯ ಏಣಿ ಶ್ರೇಣಿ ಬದ್ಧತೆಯನ್ನು ನಿರೂಪಿಸುತ್ತದೆ. ಇದೊಂದು ಸಾಮಾಜಿಕ ಸ್ತರ ವಿನ್ಯಾಸದ ಒಂದು ವಿಶಿಷ್ಟ ಬಗೆಯಾದಾಗಿದೆ. ಜಾತಿ ಎಂಬ ಪೆಡಂಭೂತ ಸಾಮಾನ್ಯವಾಗಿ ಮಾನವ ಸಮಾಜದಲ್ಲಿ ಅನುವಂಶಿಯತೆಯನ್ನು ಸೂಚಿಸುತ್ತದೆ. ಹಲವಾರು ಜಾತಿಗಳು ತಮ್ಮದೇ ಆದ ಆಚಾರ – ವಿಚಾರಗಳನ್ನು ಸಂಪ್ರದಾಯತೆಯನ್ನು ಒಳಗೊಂಡು, ಆಯಾ ಜಾತಿಯ ವ್ಯವಸ್ಥೆಯಲ್ಲಿ ವ್ಯಕ್ತಿಯ ಆತನ ಸದಸ್ಯತ್ವವು ಹುಟ್ಟಿನಿಂದ ನಿರ್ಧಾರಿತವಾಗುತ್ತದೆ.

ಈ ಜಾತಿ ವ್ಯವಸ್ಥೆಯು ಸಮಾಜದಲ್ಲಿ ಬದುಕುವ ಅನೇಕ ಬಗೆಯ ಜನರನ್ನು ಪ್ರತ್ಯೇಕವಾಗಿ ಗುರುತಿಸುವ ಸಲುವಾಗಿ ಪ್ರಾಚೀನ ಕಾಲದಿಂದಲೂ ಉಳಿದು ಬೆಳೆದುಕೊಂಡು ಬಂದಿರುವುದು ಕಾಣುತ್ತೇವೆ. ಒಂದು ಕಡೆ ಇದು ಅತ್ಯಂತ ಕ್ರೂರ ವರ್ತನೆಯನ್ನು ತಂದೊಡ್ಡಿ ಜನ – ಜನರ ನಡುವೆ ವಿಷಮತೆಯನ್ನು ತುಂಬುತ್ತದೆ. ಇದೊಂದು ಕಳವಳಕಾರಿಯಾದ ವ್ಯವಸ್ಥೆ ಎಂದೇ ಹೇಳಬಹುದು. ಇದು ಭಾರತೀಯ ಸಮಾಜದಲ್ಲಿ ಬರುವ ಎಲ್ಲಾ ರಾಜ್ಯಗಳ, ಎಲ್ಲಾ ಜಿಲ್ಲೆಗಳ ಹಾಗೂ ಎಲ್ಲಾ ಗ್ರಾಮಗಳಲ್ಲಿಯು ತಳವೂರಿ ತನ್ನ ಕೆಲಸವನ್ನು ಮಾಡುತ್ತಿರುವುದು ದುರಂತವೆ ಸರಿ.

ಭಾರತೀಯ ಸಮಾಜದಲ್ಲಿ ಹಲವಾರು ಧರ್ಮ, ಜಾತಿಗಳು ಜನ್ಮತಾಳಿವೆ. ಬೌದ್ಧ, ಜೈನ, ಇಸ್ಲಾಂ, ಕ್ರೈಸ್ತ ಮುಂತಾದ ಧರ್ಮಗಳು ತಮ್ಮದೇ ಆದ ಸಿದ್ಧಾಂತಗಳಲ್ಲಿ ರಚನೆಗೊಂಡಿವೆಯಾದರೂ, ಕೋಮು ಸಾಮರಸ್ಯವನ್ನು ತುಂಬುವಲ್ಲಿ ಸಹಕಾರಿಯಾಗಿವೆ ಎಂಬುದು ಕುತೂಹಲಕರ ಸಂಗತಿ. ಹನಿ ಹನಿಗೂಡಿದರೆ ಹಳ್ಳ, ತೆ ನೆ ತೆ ನೆ ಕೂಡಿದರೆ ಬಳ್ಳವಾಗುವಂತೆ ಗ್ರಾಮ ಗ್ರಾಮಗಳ ಚರಿತ್ರೆಯಲ್ಲಿ ಸೇರಿ ನಾಡಿನ ಇತಿಹಾಸ ಸೃಷ್ಟಿಯಾಗಿ ರೂಪಗೊಳ್ಳುತ್ತದೆ. ಈ ಗ್ರಾಮಗಳ ಚರಿತ್ರೆ ಮತ್ತು ಸಮಾಜ ಹಾಗೂ ಸಂಸ್ಕೃತಿಯು ವ್ಯಕ್ತಿ – ವ್ಯಕ್ತಿಗಳ ನಡುವೆ ಇರುವ ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಕನ್ನಡ ನಾಡಿನ ಇತಿಹಾಸವನ್ನು ಒಮ್ಮೆ ಮೆಲುಕು ಹಾಕಿದಾಗ ಕೊಪ್ಪಳ ನಗರವು ಬೌದ್ಧ, ಜೈನ ಧರ್ಮಗಳ ವಾಸಸ್ಥಾನವಾಗಿದ್ದಲ್ಲದೇ, ಶೈವ, ವೀರಶೈವ ಧರ್ಮಗಳಿಗೆ ಬಲವಂತಿಕೆಯನ್ನು ತಂದು ಕೊಟ್ಟ ಕೀರ್ತಿಗೆ ಪಾತ್ರವಾಗಿದೆ.

**ವರ್ಗ – ವರ್ಣ :**

ವರ್ಗಪದ್ದತಿಯು ವೃತ್ತಿಗನುಗುಣವಾಗಿ ವರ್ಗೀಕರಣ ಆಗಿರುವುದನ್ನು ಕಾಣುತ್ತೇವೆ. ಕೊಪ್ಪಳ ಜಿಲ್ಲೆಯಲ್ಲಿರುವ ಸಮಾಜ ವ್ಯವಸ್ಥೆಯನ್ನು ಪ್ರಭುವರ್ಗ ಮತ್ತು ಶ್ರಮಿಕ ವರ್ಗಗಳಿರುವುದನ್ನು ಕಾಣುತ್ತೇವೆ. ಪ್ರಭುವರ್ಗ ಪುರೋಹಿತರಾಜ ಹಾಗೂ ವಿವಿಧ ಅಧಿಕಾರಿವರ್ಗಗಳನ್ನು ಒಳಗೊಂಡರೆ, ಶ್ರಮಿಕವರ್ಗ ವಿವಿಧ ವೃತ್ತಿಗಳನ್ನು ಕೈಗೊಂಡ ಜನಸಾಮಾನ್ಯರನ್ನು ಪ್ರತಿನಿಧಿಸುತ್ತದೆ. ಆ ಕಾಲದಲ್ಲಿ ವ್ಯಕ್ತಿಯ ವರ್ಣವನ್ನು

ನಿರ್ಣಯಿಸುತ್ತಿದ್ದುದು ಅವನ ಹುಟ್ಟು ಹೊರತು ಬೇರೆಯಾಗಿರುತ್ತಿರಲಿಲ್ಲ. ಬ್ರಾಹ್ಮಣರು ತಮ್ಮ ವೃತ್ತಿಗಳಾದ ಯಜನ, ಯಾಜನ ಅಧ್ಯಯನ, ಅಧ್ಯಪನಾದಿಗಳನ್ನು ಮಾಡಿಕೊಂಡಿದ್ದರು. ಅವರಲ್ಲಿ ಹಲವಾರು ಕ್ಷತ್ರಿಯರಂತೆ ಕತ್ತಿಯನ್ನು ಹಿಡಿದು ರಾಜ್ಯಗಳನ್ನು ಸ್ಥಾಪಿಸಿದ್ದೂ ಉಂಟು. ಕರ್ನಾಟಕದ ಬೇರೆ ಬೇರೆ ಭಾಗಗಳನ್ನಾಳುತ್ತಿದ್ದ ಹಲವು ರಾಜರು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡಿದ್ದರು. ಹಾಗೆ ಕರೆದು ಕೊಳ್ಳುವುದರಲ್ಲಿ ಅಂತಹ ಉತ್ಸಾಹ ತೋರಿಲ್ಲದಿರುವುದೇ ವಿಶೇಷ.

ಈ ರೀತಿಯಾಗಿರುವ ವರ್ಗ–ರ್ಗಣ ವ್ಯವಸ್ಥೆ ಕಂಡುಬಂದರೂ, ಈ ಜಿಲ್ಲೆಯ ಹಲವಾರು ಸ್ಥಳಗಳು ಕೋಮು ಸಾಮರಸ್ಯದ ಪ್ರತೀ ವಾಗಿ ಕಾಣಿಸಿಕೊಂಡಿರುವುದನ್ನು ಕಾಣುತ್ತೇವೆ. ಮೇಲ್ನೋಟಕ್ಕೆ ವರ್ಗ – ವರ್ಣ ವ್ಯವಸ್ಥೆ ಮನುಷ್ಯ - ಮನುಷ್ಯರಲ್ಲಿ ಭಿನ್ನ ಭೇಧವನ್ನು ಕಲ್ಪಿಸಿದರೂ ಧರ್ಮ – ಧರ್ಮಗಳ ನಡುವೆ ನಡೆಯುವ ಸಾಮ ಜಿಕ ಸಂದರ್ಭದ ಆಚರಣೆಗಳಲ್ಲಿ ಕೋಮು ಸೌಹಾರ್ದತೆಯನ್ನು ಕಾಣಬಹುದಾಗಿದೆ.

**ಧರ್ಮ :**

ಭಾರತ ಹಲವು ಧರ್ಮಗಳ ತವರೂರು. ಈ ಮಾತು ಕೊಪ್ಪಳಕ್ಕೂ ಹೊರತಾಗಿಲ್ಲ. ಈ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ಪ್ರಸ್ತುತ ದಿನಗಳವರೆಗೆ ಹಲವಾರು ಧರ್ಮಗಳ ಸಾಮರಸ್ಯತೆಯನ್ನು ಕಾಪಾಡಿಕೊಂಡು ಬಂದಿರುವುದು ಗಮನಾರ್ಹ ಸಂಗತಿ. ಧರ್ಮವೆಂದರೆ ಮಾನವನ ಸಾಂಸ್ಕೃತಿಕ ಬದುಕಿನ ಜೀವನಾಡಿ. ಭಾರತೀಯ ಸಾಂಸ್ಕೃತಿಯ ಬದುಕಿಗೆ ಬಂದಾಗ ಧರ್ಮ ಪ್ರಮುಖ ಮಾರ್ಗದರ್ಶಿ ಎಂಬುದು ಅಷ್ಟೇ ಸತ್ಯದ ಸಂಗತಿ. ಧರ್ಮದ ರೀತಿ ನೀತಿಗಳಿಂದಲೇ ಸಾಮಾಜಿಕ ವ್ಯವಸ್ಥೆ ತನ್ನ ಸ್ಥಾನ ಪಲ್ಲಟತೆಯನ್ನು ಕಾಣಬಹುದು

ಕರ್ನಾಟಕದಲ್ಲಿ ಧರ್ಮಕ್ಕೆ ಅತ್ಯಂತ ಉನ್ನತವಾದ ಸ್ಥಾನಮಾನವನ್ನು ನೀಡಿದಂತೆ ಕೊಪ್ಪಳ ಜಿಲ್ಲೆಯ ಸಾಮಾಜಿಕ ವ್ಯವಸ್ಥೆಯನ್ನು ಗಮನಿಸಿದಾಗ ಇದರಿಂದ ಹೊರತಾಗಿಲ್ಲವೆನ್ನುವುದು ವಿಶೇಷ. ಧರ್ಮಗಳು ಮಾನವನ ಪ್ರಗತಿಗೆ ಶ್ರಮಿಸುತ್ತಾ ಬೆಳೆದು ಬಂದಿವೆ. ಕರ್ನಾಟಕವನ್ನಾಳಿದ ಹಲವಾರು ಅರಸ ಮನೆತನಗಳು ಧರ್ಮಗಳ ಸಮನ್ವಯತೆಯನ್ನು ಕಾಪಾಡಿಕೊಂಡು ಬಂದಿವೆ. ಅಷ್ಟೆ ಅಲ್ಲದೇ ಇಲ್ಲಿ ಸ್ವಧರ್ಮದ ರಕ್ಷಣೆ ಇರುವುದು ಕಾಣತ್ತೇವೆ. ಹೀಗಾಗಿ ಕೊಪ್ಪಳ ಜಿಲ್ಲೆಯ ಧಾರ್ಮಿಕ ವ್ಯವಸ್ಥೆಯನ್ನು ಕುರಿತು ಹೇಳುವಾಗ ಪ್ರತ್ಯಕ್ಷ ಮತ್ತು ಪರೋಕ್ಷ ಆಧಾರಗಳನ್ನು ಗಮನಿಸಬಹುದಾಗಿದೆ.

**ಬೌದ್ಧ ಧರ್ಮ :**

ಬೌದ್ಧ ಧರ್ಮವು ಮಾನವರನ್ನು ಅಂದಿನ ಮೌರ್ಯ ಸಾಮ್ರಜ್ಯದ ದೊರೆಯಾದ ಅಶೋಕನ ಕಾಲದಲ್ಲಿ ಪುನರುಜ್ಜೀವನ ಪಡೆದು ಪ್ರಬಲವಾಗಿ ಬೆಳಗಿದೆ ಎಂದರೆ ತಪ್ಪಾಗಲಾರದು. ಈ ಮಾತನ್ನು ಉಲ್ಲೇಖಿಸುವಂತಹ ಸಂದರ್ಭದಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಾಗಿರುವುದು ಕಾಣುತ್ತೇವೆ.

ಕಾಲ ಅಶೋಕನ ಕಾಲದ ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿರುವುದರಿಂದ ಅಂದಿನಿಂದಲೇ ಈ ಜಿಲ್ಲೆಯಲ್ಲಿ ಬೌದ್ಧ ಧರ್ಮದ ನೈತಿಕ ಮೌಲ್ಯಗಳು ಸುಲಭವಾಗಿ ಗೋಚರವಾಗುತ್ತವೆ. ಈ ಮಾತಿನಿಂದ ಕೊಪ್ಪಳ ಜಿಲ್ಲೆಯು ಆರಂಭದಲ್ಲಿ ಬೌದ್ಧ ಧರ್ಮದ ನೆಲೆಯೆಂದು ಹೇಳಲೇಬೇಕು. ಈ ಧರ್ಮಕ್ಕೆ ಸಂಬಂಧಿಸಿದ ಅವಶೇಷಗಳು ಇಟ್ಟಿಗೆಯ ರಚನೆ ಮತ್ತು ಮಡಿಕೆಯ ಚೂರುಗಳನ್ನು ಹೊರತುಪಡಿಸಿದರೆ, ಉಳಿದ ಯಾವುದೇ ಆಧಾರಗಳು ಈ ಜಿಲ್ಲೆಯಲ್ಲಿ ದೊರೆಯುವುದಿಲ್ಲ. ನಂತರದಲ್ಲಿ ಶಾತವಾಹನರ ಕಾಲದಲ್ಲಿ ಜಿಲ್ಲೆಯಲ್ಲಿ ಬೌದ್ಧ ಧರ್ಮವು ಉತ್ತುಂಗಕ್ಕೆರಿತ್ತು ಎನ್ನುವ ಮಾತು ಒಪ್ಪಲೇಬೇಕು.

**ಜೈನ ಧರ್ಮ :**

ಜೈನ ಧರ್ಮವು ಕ್ರಿಪೂ ೩ ನೇ ಶತಮಾನದೊತ್ತಿಗೆ ಅಂದರೆ ಬೌದ್ಧ ಧರ್ಮದ ತರುವಾಯ ತನ್ನದೇ ಆದ ಪ್ರಾಬಲ್ಯವನ್ನು ಸಾಧಿಸಿಕೊಂಡಿತ್ತು. ಈ ಧರ್ಮದ ಹಿನ್ನೆಲೆಯಲ್ಲಿ ಸಾಹಿತ್ಯ, ಸಮಾಜ ಹಾಗೂ ಸಾಂಸ್ಕೃತಿಯನ್ನು ತಿಳಿಯುತ್ತಾ ಹೋದಾಗ ಕರ್ನಾಟಕದ ಅನೇಕ ರಾಜ ಮನೆತನಗಳು ಇದಕ್ಕೆ ಹೊಂದಿಕೊಂಡಂತೆ ವ್ಯಕ್ತವಾಗುತ್ತವೆ. ನಾವು ವಾಸ್ತವ ದೃಷ್ಟಿಯಿಂದ ಕೊಪ್ಪಳ ಜಿಲ್ಲೆಯನ್ನು ಅವಲೋಕಿಸಿದಾಗ ಇದೊಂದು ಪ್ರಸಿದ್ಧ ಜೈನ ತಾಣವೆಂಬುದು ಮರೆಯುವಂತಿಲ್ಲ, ಕ್ರಿಶ ೯ನೇ ಶತಮಾನದಿಂದಲೇ ಇದು ಜೈನ ಕೇಂದ್ರವಾಗಿ ಬೆಳೆಯಿತು ಎಂಬುದಕ್ಕೆ ಒಂದು ವ್ಯಾಖ್ಯಾನವನ್ನು ನಿದರ್ಶಿಸಿಬಹುದು. "ಕೊಪ್ಪಳವು ತೀರ್ಥ ಕ್ಷೇತ್ರ, ಆದಿ ತೀರ್ಥ, ಮಹಾ ತೀರ್ಥ ಎಂದೆನಿಸಿದಂತೆಯೇ ಬಸದಿಗಳ ಬೀಡು ಎಂದು ಹೆಸರುವಾಸಿಯಾಗಿದೆ. ಸ್ಥಳೀಯ ಐತಿಹ್ಯಗಳು ಲಭ್ಯ ಪೂರಕ ಐತಿಹಾಸಿಕ ಆಕಾರಗಳು ಈ ಸಂಗತಿಯ ಸತ್ಯಕ್ಕೆ ಕನ್ನಡಿ ಹಿಡಿದಿವೆ."[೨೦]



ಕವಿರಾಜಮಾರ್ಗ, ಅಜೀತನಾಥ ಪುರಾಣ ಮತ್ತು ಚಾವುಂಡರಾಯನ ಪುರಾಣದಲ್ಲಿ ಉಲ್ಲೇಖವಾದಂತೆ ಇದೊಂದು ಜೈನ ಧರ್ಮದ ಪವಿತ್ರ ಕೇಂದ್ರಸ್ಥಾನವೆಂಬುದು ಗಮನಾರ್ಹ. ಗಣ, ಗಚ್ಚ, ಸಂಘ, ಅನ್ವಯಗಳು ಶಾಖೆಗಳು ಜೈನ ಮುನಿಗಳಲ್ಲಿ ಕಂಡು ಬರುತ್ತಿದ್ದವು. ಅಲ್ಲದೇ, ಗೋಲಾಚಾರ್ಯನ ಶಿಷ್ಪ ತ್ರಿಕಾಲ ಯೋಗಿಯು ತನ್ನ ಅಂತ್ಯಕಾಲದ ಸಮಯದಲ್ಲಿ ಕೊಪ್ಪಳದ ಜೈನ ಪಾದಗಳ ಬಳಿ ಕುಳಿತು ತಪಸ್ಸು ಮಾಡಿ ಮುಕ್ತಿಯನ್ನು ಪಡೆಯುವುದು ತ್ರಿಭುವನಚಂದ್ರ ಮುನೀಂದ್ರನು ಮುಕ್ತಿಯನ್ನು ಸಾಧಿಸುವುದಾಗಲೀ, ಇನ್ನು ಹಲವಾರು ಉದಾಹರಣೆಗಳು ಜೈನ ಧರ್ಮದ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ. ಈ ಧರ್ಮದ ಪ್ರಮುಖ ಸ್ಥಾನವಾದ ದೀಕ್ಷೆಗೆ ಕ್ರಿ.ಶ.೯೭೩ರ ಕೊಪ್ಪಳದ ಶಾಸನವು ಹೀಗೆ ಹೇಳುತ್ತದೆ. ಭೂತಗನ ಪತ್ನಿ ಪರ್ಮಬ್ಬೆಯು ಎಲ್ಲವನ್ನು ತ್ಯಜಿಸಿ ಕೊಪಣಕ್ಕೆ ಬಂದು ದೀಕ್ಷೆಯನ್ನು ಪಡೆದಿದ್ದಳು. ಗಂಗ ವಂಶದ ರಾಣಿಯರೂ ಕೊಪ್ಪಳಕ್ಕೆ ಬಂದು ಧಾರ್ಮಿಕ ಮರಣವನ್ನು ಹೊಂದಿರುವುದು ಕೆಲವೊಂದು ಶಾಸನಗಳಿಂದ ತಿಳಿದು ಬರುತ್ತದೆ. ಈ ನಗರದಲ್ಲಿ ೭೭೭ ಬಸದಿಗಳಿದ್ದವೆಂದು ಇತಿಹಾಸ ಹೇಳುತ್ತಿದೆ.

**ವೈಷ್ಣವ ಧರ್ಮ :**

ಜೈನ ಹಾಗೂ ಶೈವ ಧರ್ಮಗಳ ನಡುವೆಯೇ ವೈಷ್ಣವ ಧರ್ಮ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿತು. ಹಾಗೆಯೇ ಜನಪ್ರಿಯ ಧರ್ಮವಾಗಿ ಬೆಳೆಯಿತು. ಈ ಧರ್ಮ ಅಲ್ಲಿನ ಆಡಳಿತ ವ್ಯವಸ್ಥೆಯನ್ನು ತಿಳಿಸುವ ಆಧಾರಗಳು ಕೊಪ್ಪಳದ ಶಾಸನಗಳಲ್ಲಿವೆ. ಈ ಶಾಸನಗಳು ಹೇಳುವಂತೆ ಮಹಾಜನರು ಅಗ್ರಹಾರಗಳಲ್ಲಿ ವಾಸಿಸುತ್ತಿದ್ದರು ಹಾಗೂ ವ್ಯಾಕರಣ, ಸ್ಮೃತಿ, ಕಾವ್ಯ, ವಾತ್ಸಾಯನ ಮತ್ತು ವೇದಾಧ್ಯಯನ ವಿಷಯಗಳಲ್ಲಿ ಪರಿಣಿತರಾಗಿದ್ದರು. ಅಲ್ಲದೇ ಪುರಾಣ, ತರ್ಕ ಹಾಗೂ ನಾಟಕ ಬಗೆಗೆ ತಿಳಿದಿದ್ದರು. ಅಷ್ಟೆ ಅಲ್ಲದೇ ಇದೇ ಜಿಲ್ಲೆಯ ಅಳವಂಡಿಯಲ್ಲಿ ಈ ಧರ್ಮಗಳಿಗೆ ಸಂಬಂಧಿಸಿದ ೪೦೦ ಮಹಾಜನರು ನೆಲಸಿರುವುದು ತಿಳಿಯುತ್ತದೆ. ಹೀಗೆ ಈ ಜಿಲ್ಲೆಯ ಅನೇಕ ಅಗ್ರಹಾರಗಳು, ಬ್ರಹ್ಮಪುರಿಗಳು ಮತ್ತು ಘಟಿಕಾಲಯಗಳು, ನಿದರ್ಶನಗಳು ದೊರೆಯುವುದರಿಂದ ಈ ಜಿಲ್ಲೆಯಲ್ಲಿ ವೈಷ್ಣವ ಧರ್ಮ ತನ್ನದೇ ಆದ ಸ್ಥಾನಮಾನ ಪಡೆದಿತ್ತೆನ್ನಬಹುದು.

**ಶೈವ ಧರ್ಮ :**

ಶೈವ ಧರ್ಮವು ಪ್ರಮುಖ ಧರ್ಮವಾಗಿದ್ದು, ಅತೀ ಪುರಾತನವಾದ ಚಾರಿತ್ರಿಕ ಪರಂಪರೆಯನ್ನು ಹೊಂದಿದೆ. ಹೊಯ್ಸಳ, ರಾಷ್ಟ್ರಕೂಟ ಹಾಗೂ ಚಾಲುಕ್ಯ ದೊರೆಗಳು ಈ ಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕಲ್ಪಿಸಿದ್ದರು. ಈ ಜಿಲ್ಲೆಯಲ್ಲಿ ಶೈವ ಧರ್ಮವನ್ನು ಕುರಿತು ಹೇಳುವಾಗ, ಶೈವ ದೇವಾಲಯಗಳ ಜವಬ್ದಾರಿಯನ್ನು ಸೈನಿಕರು ನೋಡಿಕೊಳ್ಳಬೇಕಾಗಿತ್ತು. ಇವರ ಮುಖ್ಯ ಕರ್ತವ್ಯ ಎಂದರೆ ಮಠಗಳ ನಿರ್ವಹಣೆ, ಮತ್ತು ವಿದ್ಯಾದಾನ ನೀಡುವುದು. ಪಾಶುಪಥ, ಕಾಪಾಲಿಕ, ಕಾಳಮುಖ ಎಂಬ ಪಂಥಗಳಾಗಿ ಕರೆದದ್ದುಂಟು. ಈ ಧರ್ಮಕ್ಕೆ ಸಂಬಂಧಿಸಿದ ಹಲವಾರು ದೇವಾಲಯಗಳು ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವುದರ ಮೂಲಕ ಶೈವ ಧರ್ಮದ ಸ್ಥಾನಮಾನವನ್ನು, ಅದರ ನೈತಿಕ ಮೌಲ್ಯಗಳನ್ನು ಪ್ರತಿಬಿಂಬಿಸಿರುವುದು ಕಾಣುತ್ತೇವೆ.

**ವೀರಶೈವ ಧರ್ಮ :**

ಈ ಧರ್ಮವು ತನ್ನ ವಿಶ್ವ ಮಾನ್ಯ ಮೌಲ್ಯಗಳಿಂದ ಒಂದು ಹೊಸ ದಿಗಂತವನ್ನು ಹುಟ್ಟುಹಾಕಿತು. ೧೨ನೇ ಶತಮಾನದೊತ್ತಿಗೆ ತನ್ನ ಸ್ವರೂಪವನ್ನು ವ್ಯಕ್ತಪಡಿಸಿತು. ಅಲ್ಲದೇ, ಧರ್ಮ ಮತ್ತು ಸಾಮಾಜಿಕವಾಗಿ ಸಮನ್ವಯ ಚಿಂತನೆಯನ್ನು ಮುಂದಿಟ್ಟುಕೊಂಡು, ವೈಚಾರಿಕತೆಗೆ ತಳಹದಿಯಾಯಿತು. ಈ ಧರ್ಮಕ್ಕೆ ಸಂಬಂಧಿಸಿದ ಈ ಜಿಲ್ಲೆಯ ಕೆಲವು ಶಾಸನಗಳನ್ನು ಅಧ್ಯಯನ ಮಾಡಿದಾಗ ಮೊಲ್ಲೆಯ ಬೊಮ್ಮಯ್ಯ, ವೀರ ಬಿಜ್ಜಳ ದೇವರಸ ಮುಂತಾದ ವ್ಯಕ್ತಿಗಳ ಹೆಸರುಗಳ ಉಲ್ಲೇಖವಿದೆ. ವೀರಶೈವ ಧರ್ಮ ತನ್ನದೇ ಆದ ಪ್ರಾಬಲ್ಯವನ್ನು ಸ್ಥಾಪಿಸಿರುವದನ್ನು ಮನಗಾಣುತ್ತೇವೆ.

**ಇಸ್ಲಾಂ ಧರ್ಮ :**

ಭಾರತಕ್ಕೆ ಬಂದ ಧರ್ಮಗಳಲ್ಲಿ ಇದು ಒಂದಾಗಿದೆ. ಇದು ಮೂಲತಃ ಅರಬ್ ದೇಶದಲ್ಲಿ ೭ನೇ ಶತಮಾನದಲ್ಲಿ ಪ್ರಚಾರ ಪಡೆದಿತ್ತು. ಕ್ರಿ.ಶ. ಸುಮಾರು ೧೪ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಕರ್ನಾಟಕವನ್ನು ಪ್ರವೇಶಿಸಿತು. ಈ ಜಿಲ್ಲೆಯಲ್ಲಿ ಈ ಧರ್ಮವನ್ನು ಕುರಿತಂತೆ ಯಾವುದೇ ಆಧಾರ ದೊರೆಯದಿದ್ದರೂ, ಕೆಲವೊಂದು ಆಧಾರಗಳ ಮೂಲಕ ಮಸೀದಿಗಳನ್ನು ಅವಲೋಕಿಸಿದಾಗ, ಈ ಧರ್ಮದ ಅಸ್ತಿತ್ವ ಕಂಡುಬರುತ್ತದೆ. "ಕೊಪ್ಪಳದಲ್ಲಿ ದೊರೆತ ಕ್ರಿ.ಶ ೧೬೦೯ ರ ಶಾಸನದಲ್ಲಿ ಇಬ್ರಾಹಿಂ ಆದಿಲ್‌ಷಾನ ಅವಧಿಯಲ್ಲಿ ಈತನ ನೆಚ್ಚಿನ ಗುಲಾಮರಾದ ಯಕ್ಕೂತ್‌ಖಾನ್ ಮತ್ತು ಫಾಜೀಖಾನ್ ಇಬ್ಬರೂ ಕೊಪ್ಪಳದ ಕೋಟೆ ಅಧಿಕಾರಿಗಳಾಗಿ ಮಸೀದಿಯನ್ನು ನಿರ್ಮಿಸಿದ್ದನ್ನು ತಿಳಿಸುತ್ತದೆ."[೨೧]

**೨.೬ ಶಾಸನ ಆಧಾರಗಳು :**

ಪ್ರಾಚೀನ ಕಾಲದ ಇತಿಹಾಸವನ್ನು ತಿಳಿಯುವಲ್ಲಿ ಶಾಸನಗಳ ಪಾತ್ರ ಬಹಳ ಮುಖ್ಯವಾಗುತ್ತದೆ. ಈ ಶಾಸನಗಳು ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಶಾಸನಗಳಲ್ಲಿ ಕೆತ್ತಿದ ಅಥವಾ ಹೇಳುವ ವಿಚಾರಗಳು ಹೆಚ್ಚಾನು ಹೆಚ್ಚು ವಾಸ್ತವ ಸಂಗತಿಗಳಿಂದ ಕೂಡಿರುತ್ತದೆ. ಆದ್ದರಿಂದಲೇ ಇತಿಹಾಸವನ್ನು ಅಧ್ಯಯನ ಮಾಡುವಲ್ಲಿ ದೊರೆತ ಆಕಾರಗಳಲ್ಲಿ ಶಾಸನ ಆಕಾರಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗುತ್ತದೆ. ಉಳಿದ ಆಕಾರಗಳಿಗೆ ಆದ್ಯತೆ ಕೊಟ್ಟರೂ ಅವುಗಳಿಗೆ ಎರಡನೇ ಸ್ಥಾನವನ್ನು ಕೊಡಲಾಗುತ್ತದೆ. ಆದ್ದರಿಂದಲೇ ಶಾಸನಗಳನ್ನು "ಭಾರತದೇಶದ ಜೀವನಾಡಿ"ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಶಾಸನಗಳು ಒಂದು ನಿರ್ಧಿಷ್ಟ ವಿಷಯವನ್ನು ಕುರಿತು ಹೇಳುವಲ್ಲಿ ಖಚಿತತೆ ಮತ್ತು ನಿರ್ಧಿಷ್ಟತೆಯಿಂದ ಕೂಡಿರುತ್ತದೆ. ಬಹುಕಾಲ ಬಾಳುವಂತಹ ಸಾಮಗ್ರಿಗಳ ಮೇಲೆ ಕೆತ್ತಿದ ಬರಹಗಳೇ ಶಾಸನಗಳು. ಶಾಸನ ಎಂಬ ಪದ "ಶಾಸ್" ಎನ್ನುವ ಧಾತುವಿನಿಂದ ಬಂದಿದೆ. "ಶಾಸ್" ಎಂದರೆ 'ಆಜ್ಞೆಮಾಡು', 'ಶಿಕ್ಷಿಸು' ಎಂಬ ಅರ್ಥವನ್ನು ಕೊಡುತ್ತದೆ. ಪ್ರಾಚೀನ ಕಾಲದ ಶಾಸನಗಳಲ್ಲಿ ಅರಸರ ಆಜ್ಞೆಗಳಾಗಿದ್ದು, ತಪ್ಪಿದವರಿಗೆ ಶಿಕ್ಷಿಸುವ ಅಧಿಕಾರ ಹೊಂದಿರುತ್ತಿದ್ದರು. ಆದ್ದರಿಂದಲೇ ಅವುಗಳಿಗೆ ಶಾಸನಗಳೆಂದು ಕರೆದಿರಬೇಕು. ಇಂದಿನ ಕಾನೂನುಗಳೇ ಹಿಂದಿನ ಕಾಲದಲ್ಲಿ 'ಶಾಸನ'ಗಳಾಗಿರುತ್ತಿದ್ದವು.

ಕರ್ನಾಟಕದಲ್ಲಿ ಶಾಸನ ಸಂಪತ್ತು ಸಂಪತ್ಭರಿತವಾಗಿದೆ. ಕರ್ನಾಟಕದ ಇತಿಹಾಸವನ್ನು ಅಧ್ಯಯನ ಕೈಗೊಳ್ಳುವಲ್ಲಿ ಶಾಸನ ಆಕಾರಗಳು ಬಹಳ ಪ್ರಾಮುಖ್ಯ ಆಕಾರದಲ್ಲಿ ನಿಂತಿವೆ ಎಂದರೆ ತಪ್ಪಾಗಲಾರದು. ಇಲ್ಲಿ ಅನೇಕ ರಾಜ–ಮಹರಾಜರು, ಮನೆತನಗಳು, ವಂಶಗಳು ನಡೆಸಿದ ಆಳ್ವಿಕೆಯನ್ನು ಮತ್ತು ಅವರು ಮೆರೆದ ಸಂಸ್ಕೃತಿಯನ್ನು ಅರಿಯುವಲ್ಲಿ ಶಾಸನಗಳು ಪ್ರಮುಖಪಾತ್ರ ನಿರ್ವಹಿಸುತ್ತವೆ. ಇನ್ನು ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಶಾಸನಗಳಿಗೆ ಹೆಚ್ಚಿನ ಆದ್ಯತೆ ಸಿಗುತ್ತದೆ. ಅನಾದಿಕಾಲದಿಂದಲೂ ಕೊಪ್ಪಳ ನಾಡು ಕನ್ನಡ ನಾಡಿಗೆ ತನ್ನದೆ ಆದ ಕೊಡುಗೆಯನ್ನು

ನೀಡಿದೆ. ಕೊಪ್ಪಳ ನಾಡು ತಿರುಳ್ಗನ್ನಡನಾಡು ಆಗಿತ್ತು. ಬೌದ್ಧ, ವೀರಶೈವ, ವೈಷ್ಣವ ಧರ್ಮಗಳ ತಾಣವಾಗಿ; ಪ್ರಮುಖವಾಗಿ ಜೈನಧರ್ಮದ ಆಡಂಬೊಲವಾಗಿತ್ತು ಎನ್ನುವುದಕ್ಕೆ ಇಲ್ಲಿ ದೊರೆತ ಅಪಾರ ಶಾಸನಗಳೇ ಸಾಕ್ಷಿ. ಇಲ್ಲಿ ಆದಿಯಾಗಿ ಅಶೋಕನ ಶಾಸನಗಳು ದೊರಕಿರುವದರಿಂದ ಈ ನಾಡಿನ ಹಿರಿಮೆ ಹೆಚ್ಚಿದೆ ಎಂದು ಹೇಳಬಹುದು. ಕ್ರಿಪೂ. ೩ನೇ ಶತಮಾನದಿಂದ ಸುಮಾರು ೧೭ನೇ ಶತಮಾನದವರೆಗೆ ಜಿಲ್ಲೆಯಲ್ಲಿ ನಾಲ್ಕು ನೂರಕ್ಕೂ ಹೆಚ್ಚಿನ ಶಾಸನಗಳು ಲಭ್ಯವಾಗಿರುವುದರಿಂದ ಇಲ್ಲಿನ ಉಜ್ವಲ ಇತಿಹಾಸ ದೊರಕುತ್ತದೆ. ಜಿಲ್ಲೆಯಲ್ಲಿ ಕನ್ನಡ ನಾಡಿಗೆ ನೀಡಿದ ಕೊಡುಗೆಯನ್ನು ತಿಳಿಯುವಲ್ಲಿ ಜಿಲ್ಲೆಯಲ್ಲಿ ದೊರೆತ ಸುಮಾರು ನಾಲ್ಕು ನೂರಕ್ಕೂ (ಪ್ರಕಟಿತ ಮತ್ತು ಅಪ್ರಕಟಿತ) ಹೆಚ್ಚಿನ ಶಾಸನಗಳ ಆಧಾರವು ಮುಖ್ಯವಾಗುತ್ತದೆ."[೨೨]

**ತಾಲೂಕುವಾರು ಶಾಸನಗಳು**

| ಕ್ರಮ.ಸಂಖ್ಯೆ | ತಾಲೂಕು | ಶಾಸನಗಳ ಸಂಖ್ಯೆ : (ಪ್ರಕಟಿತ ಮತ್ತು ಅಪ್ರಕಟಿತ) |
|---|---|---|
| ೦೧ | ಕೊಪ್ಪಳ | ೧೭೬ |
| ೦೨ | ಯಲಬುರ್ಗಾ | ೨೪ |
| ೦೩ | ಕುಷ್ಟಗಿ | ೩೬ |
| ೦೪ | ಗಂಗಾವತಿ | ೧೧೬ |
| | **ಒಟ್ಟು** | **೪೦೨** |

ಹೀಗೆ ಜಿಲ್ಲೆಯಲ್ಲಿ ೪೦೦ ಕ್ಕೂ ಅಧಿಕ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳು ಈಗಾಗಲೇ ಲಭ್ಯವಾಗಿವೆ. ಜಿಲ್ಲೆಯಲ್ಲಿ ಕನ್ನಡ ಭಾಷೆಯ ಶಾಸನಗಳಷ್ಟೆ ಅಲ್ಲ; ಜೊತೆಗೆ ಸಂಸ್ಕೃತ, ಪರ್ಷಿಯಾ, ಪ್ರಾಕೃತ, ತೆಲುಗು,ಸಸ್ತಲಿಟ್, ಹೀಗೆ ಬೇರೆ ಬೇರೆ ಅನ್ಯಭಾಷೆಯ ಶಾಸನಗಳು ಜಿಲ್ಲೆಯಲ್ಲಿ ದೊರಕಿರುವುದು ಈ ನೆಲದ ವಿಶೇಷತೆ ಎನ್ನಬಹುದು. ಇಲ್ಲಿ ಶಿಲಾಶಾಸನಗಳ (ಕಲ್ಲಿನ) ಜೊತೆಗೆ ತಾಮ್ರ, ಹಿತ್ತಾಳೆ ಹಾಗೂ ಬೆಳ್ಳಿಯ ಶಾಸನಗಳು ಪತ್ತೆಯಾಗಿರುವುದರಿಂದ ಈ ನಾಡಿನ ಹಿರಿಮೆಯನ್ನು ತಿಳಿಯಬಹುದು.

ಜಿಲ್ಲೆಯಲ್ಲಿ ಅನೇಕ ರೀತಿಯ ಶಾಸನಗಳು ಲಭ್ಯವಾಗಿ ಇಲ್ಲಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಅನಾವರಣ ಮಾಡುತ್ತವೆ. ತನ್ನ ಒಡಲೊಳಗೆ ಇಟ್ಟುಕೊಂಡಿರುವ ಕಹಿ–ಸತ್ಯವನ್ನು ಸೂಸುತ್ತವೆ. ಇವೆಲ್ಲವುಗಳನ್ನು ಹೆಚ್ಚು ಹೆಚ್ಚು ಅಧ್ಯಯನಕ್ಕೆ ಒಳಪಡಿಸಿದಾಗ ಅವುಗಳಲ್ಲಿ ಅಡಗಿರುವ ಸತ್ಯ ನಾಡಿಗೆ ತಿಳಿಯುತ್ತದೆ. ಬಹಳ ಪ್ರಮುಖವಾಗಿ ನನ್ನ ಅಧ್ಯಯನದ ಇತಿ–ಮಿತಿಗಳಗೆ ಅನುಗುಣವಾಗಿ ಮತ್ತು ನನ್ನ ಸಂಶೋಧನೆ ಪೂರಕವೆಂಬಂತೆ ಇಲ್ಲಿ ವಿಭಾಗಿಸಿ ಚರ್ಚಿಸಿದ್ದೇನೆ.

ಕನ್ನಡ ಶಾಸನಗಳನ್ನು ಅನೇಕ ವಿದ್ವಾಂಸರು, ಅನೇಕ ಮೊಗ್ಗಲುಗಳಿಂದ ಈಗಾಗಲೇ ಅಧ್ಯಯನ ಮಾಡಿದ್ದಾರೆ. ಇನ್ನು ಅಧ್ಯಯನಗಳು ನಡೆಯುತ್ತಿವೆ. ಅನೇಕ ವಿದ್ವಾಂಸರು ಅನೇಕ ರೀತಿಯಿಂದ ಅಧ್ಯಯನ ಕೈಗೊಂಡರು ನನ್ನ ಅಧ್ಯಯನ ಮಿತಿಯಲ್ಲಿ ದಾನ ಶಾಸನ, ವೀರಗಲ್ಲು ಶಾಸನ, ಮಾಸ್ತಿಗಲ್ಲು ಶಾಸನ, ನಿಷೇಧಿಗಲ್ಲು ಶಾಸನ ಎಂಬ ಪ್ರಕಾರಗಳಲ್ಲಿ ಚರ್ಚಿಸಿದ್ದೇನೆ. ಜಿಲ್ಲೆಯಲ್ಲಿ ದೊರೆತ ಒಟ್ಟು ಶಾಸನಗಳಿಂದ ವಿಷಯಾನು ಕ್ರಮೆ ಣಿಕೆಯಿಂದ ವಿಭಾಗಿಸಿ ಇಲ್ಲಿ ಚರ್ಚಿಸಿದ್ದೇನೆ.

**ದಾನ ಶಾಸನಗಳು :**

ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ದಾನ ಶಾಸನಗಳ ಸಂಖ್ಯೆಗೆ ಹೆಚ್ಚಿನ ಪಾಲು ದೊರೆಯುತ್ತದೆ. ಪ್ರಾಚೀನ ಕಾಲದಲ್ಲಿ ಅರಸರು, ಜನಸಾಮಾನ್ಯರು ದಾನವನ್ನು ಒಂದು ಸಂಸ್ಕೃತಿಯನ್ನಾಗಿ ಬೆಳೆಸಿಕೊಂಡಿರುವುದರಿಂದಲೇ ಜಿಲ್ಲೆಯಲ್ಲಿ ಅಧಿಕ ದಾನ ಶಾಸನಗಳು ಸಾಕ್ಷಿಯಾಗಿರುತ್ತವೆ. ಅರಸರಿಂದ ಹಿಡಿದು ಜನ ಸಾಮಾನ್ಯರವರೆಗೂ ದೇವರಿಗೆ, ದೇವಸ್ಥಾನಗಳಿಗೆ, ಪಂಡಿತರಿಗೂ, ಜನಸಾಮಾನ್ಯರಿಗೂ, ಕೆರೆ–ಕಟ್ಟೆಗಳಿಗೆ, ಜೀರ್ಣೋದ್ದಾರಕ್ಕಾಗಿ ಇತ್ಯಾದಿ ಹತ್ತಾರು ಪುಣ್ಯದ ಕೆಲಸ – ಕಾರ್ಯಗಳಿಗೆ ದಾನ – ಧರ್ಮಗಳನ್ನು ನೀಡಿ ತಮ್ಮ ಸಂಸ್ಕೃತಿಯನ್ನು ಮೆರೆಯುತ್ತಿದ್ದರು. ಅರಸರಿಗೆ, ತಮಗೆ ಪುಣ್ಯವಾಗಲೆಂದು ದಾನ ನೀಡುತ್ತಿದ್ದರೆಂದು ಕೆಲಶಾಸನಗಳಲ್ಲಿ ಉಲ್ಲೇಖಿತ ಗೊಂಡಿವೆ. ಭೂದಾನ, ಗ್ರಾಮದಾನ, ತೋಟದಾನ ಹಾಗೂ ನಿವೇಷನಗಳನ್ನು ದಾನದ ರೂಪದಲ್ಲಿ ನೀಡುತ್ತಿದ್ದರು. ದಾನಕ್ಕೆ ಸಂಭಂಧಿಸಿದ ನೂರಾರು ಶಾಸನಗಳು ಜಿಲ್ಲೆಯಲ್ಲಿ ಲಭ್ಯವಾಗಿರುವದರಿಂದ ಕೊಪ್ಪಳವು ದಾನ – ಧರ್ಮದ ಬೀಡು ಎನ್ನಬಹುದು.

**ವೀರಗಲ್ಲು ಶಾಸನ:**

ಇಯುವುದು (ದಾನಕೊಡುವುದು) ಅಥವಾ ಹಿರಿಯುವುದು (ಯುದ್ಧಮಾಡುವುದು) ಅರಸರ ಬಹುಮುಖ್ಯ ಲಕ್ಷಣವಾಗಿರುತ್ತಿತ್ತು. ಯುದ್ಧ ಮತ್ತು ರಕ್ಷಣೆಯ ಸಂಧರ್ಭಗಳಲ್ಲಿ ಮಡಿದ ವ್ಯಕ್ತಿ(ವೀರ ಸೈನಿಕ)ಯ ಸ್ಮರಣೆಗಾಗಿ ಅವನ ಹೆಸರಿನಲ್ಲಿ ಒಂದು ವೀರಗಲ್ಲು ಸ್ಥಾಪಿಸಿ, ಶಾಸನ ಕೆತ್ತಿಸುತ್ತಿದ್ದರು. ವೀರತ್ವವು ಅಂದು ಪ್ರಾಮುಖವಾಗಿತ್ತು. ಯುದ್ಧದ ಸಂದರ್ಭವಷ್ಟೆ ಅಲ್ಲದೇ ಊರಿನ ರಕ್ಷಣೆ, ಗೋವುಗಳ ರಕ್ಷಣೆ, ಸ್ತ್ರೀಯರ ಮಾನ – ಪ್ರಾಣ ರಕ್ಷಣೆಗಾಗಿ ಒಬ್ಬ ವ್ಯಕ್ತಿ ಹೋರಾಟ ಮಾಡಿ ಸತ್ತರೆ, ಅವನ ಸ್ಮರಣಾರ್ಥವಾಗಿ ಒಂದು ಕಲ್ಲನ್ನು ನಿಲ್ಲಿಸುತ್ತಿದ್ದರು. ಅವರ ವಿವರ ಮತ್ತು ಮತ್ತು ಉದ್ದೇಶಗಳನ್ನು ಶಾಸನದಲ್ಲಿ ಬರೆಯಿಸುತ್ತಿದ್ದರು.

ಹೀಗಿರುವ ವೀರಗಲ್ಲುಗಳು ಜಿಲ್ಲೆಯಲ್ಲಿ ಅನೇಕ ದೊರೆಯುತ್ತವೆ. ಅವುಗಳಲ್ಲಿ ಹೆಚ್ಚಿನವು ಲಿಪಿರಹಿತ ವೀರಗಲ್ಲುಗಳ ಜೊತೆಗೆ ಲಿಪಿಸಹಿತ ವೀರಗಲ್ಲುಗಳು ದೊರಕಿರುವುದು ಈ ಜಿಲ್ಲೆಯ ವಿಶೇಷವಾಗಿದೆ. ಒಟ್ಟಾರೆಯಾಗಿ ವೀರಗಲ್ಲುಗಳು ಅರಸರ ಕಾಲದ ಪರಾಕ್ರಮದ ಸಂಕೇತಗಳಾಗಿ ಕಂಡುಬರುತ್ತವೆ.

**ನಿಷಿಧಿಗಲ್ಲು ಶಾಸನಗಳು :**

ಕೊಪ್ಪಳ ನಾಡು ಜೈನ ಧರ್ಮದ ಬೀಡಾಗಿತ್ತು ಎಂದು ಈಗಾಗಲೇ ಚರ್ಚಿಸಲಾಗಿದೆ. ಜೈನಧರ್ಮದಲ್ಲಿ ನಿಷಿಧಿ ಯಾಗುವುದು ಒಂದು ಪ್ರಮುಖ ಧಾರ್ಮಿಕ ವಿಧಾನವಾಗಿತ್ತು. ಗೃಹಸ್ತರು, ಜೈನ ಸನ್ಯಾಸಿಗಳು ಸಲ್ಲೇಖನ ವೃತದಿಂದ ಮರಣ ಹೊಂದಿದಾಗ ಅವರ ಸ್ಮರಣಾರ್ಥವಾಗಿ ಕಲ್ಲುಗಳನ್ನು ನಿಲ್ಲಿಸುತ್ತಿದ್ದರು, ಅಥವಾ ಬಸದಿಗಳನ್ನು ಕಟ್ಟಿಸುತ್ತಿದ್ದರು ಎಂಬುದಕ್ಕೆ ಆಧಾರಗಳು ಜಿಲ್ಲೆಯಲ್ಲಿ ಅನೇಕ ದೊರಕುತ್ತವೆ. ಪರಿಹಾರವಾಗದ ರೋಗಕ್ಕೆ ತುತ್ತಾದಾಗ ಅಥವಾ ವೃದ್ಧಾಪ್ಯಕ್ಕೆ ಒಳಗಾದಾಗ ಸಲ್ಲೇಖ ವೃತದಿಂದ ಮಡಿದಾಗ, ಅವನ ಹೆಸರಲ್ಲಿ ನಿಷೆಧಿಗಲ್ಲು ಸ್ಥಾಪಿಸುತ್ತಿದ್ದರು. ಇಂತಹ ಕೆಲ ನಿಷೆಧಿಗಲ್ಲು ಮಾತ್ರ ಜಿಲ್ಲೆಯಲ್ಲಿ ದೊರೆಯುತ್ತವೆ.

**ಮಾಸ್ತಿಗಲ್ಲುಗಳು :**

ಪತಿಯು ಸತ್ತಾಗ ಅವನ ಪತ್ನಿ ಚಿತೆಯೇರಿ ಮರಣವಪ್ಪುವುದೇ ಸಹಗಮನ ಪದ್ದತಿ, ಆ ಸತಿಯ ಸ್ಮರಣೆಗಾಗಿ ನೆಟ್ಟಗಲ್ಲುಗಳೇ ಮಾಸ್ತಿ (ಮಹಾಸತಿ)ಗಲ್ಲುಗಳು. ಮಹಾಭಾರತ ಮಾದ್ರಿಯೊಂದಿಗೆ ಪ್ರಾರಂಭವಾದ ಈ ಸಂಪ್ರದಾಯವು ಕೊಪ್ಪಳದ ಜಿಲ್ಲೆಯ ಶಾಸನಗಳವರೆಗೂ ವ್ಯಾಪಿಸಿಕೊಂಡಿದೆ.

**೨.೭ ಐತಿಹಾಸಿಕ ಸ್ಥಳಗಳು:**

ಕೊಪ್ಪಳ ಜಿಲ್ಲೆಯ ಪ್ರಾಚೀನತೆ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಳೆಯದಾಗಿದೆ. ಹಳೆಯ ಶಿಲಾಯುಗದ ಸಂಸ್ಕೃತಿಯಿಂದ ಪ್ರಾರಂಭವಾಗಿ ಕರ್ನಾಟಕದ ಎಲ್ಲಾ ಪ್ರಮುಖ ಅರಸು ಮನೆತನಗಳವರು ಇಲ್ಲಿ ಆಳ್ವಿಕೆ ನಡೆಸಿದ್ದಾರೆ. ಇದಕ್ಕಿಂತ ಪೂರ್ವದಲ್ಲಿಯೇ ನಾವು ಪೌರಾಣಿಕ ಹಿನ್ನೆಲೆಗೆ ಹೋದಾಗ ಇಲ್ಲಿಯ ಪೌರಾಣಿಕ ಅವಶೇಷಗಳು ಸಾಕಷ್ಟು ತಮ್ಮ ಕಥೆಯನ್ನು ತೆರೆದಿಡುತ್ತವೆ. (ಬೌದ್ಧ ಧರ್ಮಕ್ಕೆ ಕೊಪ್ಪಳ ಪ್ರಮುಖ ಸ್ಥಾನವನ್ನು ಒಂದೊಮ್ಮೆ ನೀಡಿದ್ದುದು ಇಲ್ಲಿ ಸಿಕ್ಕ ಅಶೋಕನ ಶಾಸನಗಳಿಂದ ಖಚಿತವಾಗುತ್ತದೆ. ಅಶೋಕನ ರಾಜಧಾನಿಗಳಲ್ಲೊಂದಾದ ಸುವರ್ಣಗಿರಿ ಇದೇ ಕೊಪ್ಪಳ ಜಿಲ್ಲೆಯ ಕನಕಗಿರಿ ಆಗಿರಲಿಕ್ಕೆಬೇಕು ಎಂಬ ಮಾಹಿತಿಯಿದೆ) ಮಹಾಭಾರತದಲ್ಲಿ ಬರುವ ಚಂದ್ರಹಾಸನ ರಾಜಧಾನಿ ಕುಂತಲನಾಡು ಇಂದಿನ ಕುಕನೂರು ಎಂಬ ಉಲ್ಲೇಖಗಳಿವೆ.

ಕಿಷ್ಕಿಂದೆ ಎಂಬುದು ಆನೆಗೊಂದಿ ಹಾಗೂ ಹಂಪಿಯ ಸ್ಥಳವೆಂದು ಸಂಶೋಧಕರು ಗುರುತಿಸಿದ್ದಾರೆ. ಈ ಕಿಷ್ಕಿಂದೆಯಲ್ಲಿ ಕಂಡು ಬರುವ ಸೀತೆಯ ಸೆರಗು, ಪಂಪಾಸರೋವರ, ತುಂಗಾಭದ್ರೆಯನ್ನು ರಾಮಾಯಣದ ಅನೇಕ ಘಟನೆಗಳೊಂದಿಗೆ ತಳಕು ಹಾಕಲಾಗಿದೆ. ಮಹಾಭಾರತದಲ್ಲಿ ಅರ್ಜುನನು ತಪಸ್ಸು ಮಾಡಿದನೆನ್ನಲಾದ ಇಂದ್ರಕೀಲ ಪರ್ವತ ಕೊಪ್ಪಳದ ಮಳೆಮಲ್ಲೇಶ್ವರ ಬೆಟ್ಟವೆಂದು ಊಹಿಸಲಾಗಿದೆ. ಅರ್ಜುನನು ಇಲ್ಲಿಯೆ ಮಳಲಿಂಗವನ್ನು ಪೂಜಿಸಿದ್ದನು. ಅರ್ಜುನ ಇಂದ್ರಕೀಲ ಪರ್ವತದ ಒಂದು ಗುಂಡಿನ ಮೇಲೆ ತನ್ನ ಹೆಬ್ಬರಳನ್ನು ಊರಿ ತಪಸ್ಸು ಮಾಡಿದ

ಆ ಗುಂಡಿಗೆ ಅರ್ಜುನನ ಗುಂಡು ಎಂದು ಕರೆಯಲಾಗಿದೆ. ಶಿವ ಮತ್ತು ಅರ್ಜುನ ವರಹವನ್ನು ಕಂಡು ಕೊಲ್ಲಲು ಅಟ್ಟಿಸಿಕೊಂಡು ಬಂದರು. ವರಹ ಓಡುತ್ತಾ ಬಂದು ಕಲ್ಲುಗುಂಡಿಗೆ ಡಿಕ್ಕಿಹೊಡೆದು ಅದು ಅಲ್ಲಿಯೇ ಅಸುನೀಗಿತ್ತು. ಅಂದಿನಿಂದ ಈ ಕಲ್ಲುಗುಂಡಿಗೆ ಹಂದಿಗುಂಡು ಎಂದೂ ಉಲ್ಲೇಖಿಸಲಾಗಿದೆ.

ಪೌರಾಣಿಕ ಮಾನ್ಯತೆ ಪಡೆದ ಕೊಪ್ಪಳ ಜಿಲ್ಲೆಯಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಆನೆಗೊಂದಿ ಹತ್ತಿರದ ಋಷ್ಯಮೂಕಪರ್ವತ, ಕಿಷ್ಕಿಂದೆ, ಶಬರಿಆಶ್ರಮ, ಅಂಜನಾದ್ರಿಬೆಟ್ಟ, ವಾಲಿಭಂಡಾರ ಮುಂತಾದವುಗಳನ್ನು ಇನ್ನಷ್ಟು ಶೋಧನೆಗೆ ಒಳಪಡಸಬೇಕಾಗಿದೆ. ತುಂಗಾಭದ್ರಾ ನದಿಯ ಆಚೇಯ ದಡದ ಪಂಪಾಕ್ಷೇತ್ರವಂತೂ ಪುರಾಣಗಳ ಕಾಲದಿಂದಲೂ ಪ್ರಖ್ಯಾತಿಯನ್ನು, ಮಹತ್ವವನ್ನು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಮೊದಲು ಪಡೆದುಕೊಂಡಿವೆ.

ಇದೇ ರೀತಿ ಯಲಬುರ್ಗಾ ತಾಲೂಕಿನ ಕುಕನೂರು ಕುಂತಲಪುರವೆಂತಲೂ, ಚಂದ್ರಹಾಸನ ಪಟ್ಟಣವೆಂತಲೂ ಹೇಳಲಾಗುತ್ತಿದೆ. ಗಂಗಾವತಿ ತಾಲೂಕಿನ ಆನೆಗೊಂದಿಯನ್ನು ಪೌರಾಣಿಕದಲ್ಲಿ ಹಸ್ತಿನಾವತಿ, ಕರಿಪುರ, ಕುಂಜರಕೊನ ಎಂದು ಗುರುತಿಸಲಾಗಿದೆ. ಪಾರ್ವತಿಯ ದೀರ್ಘ ತಪಸ್ಸಿನ ನಂತರ ಗಿರಿಜಾ ಕಲ್ಯಾಣ ನಡೆದಿದ್ದು, ಪಂಪಾ ಸರೋವರದಲ್ಲಿ ಕನಕಗಿರಿ ಹಿಂದಿನ ಸುವರ್ಣಗಿರಿಯಾಗಿದ್ದು, ನಂತರ ಕನಕಮುನಿ ಹೆಸರಿನಿಂದ ಕನಕಗಿರಿಯಾಯಿತು. ಈ ಕನಕಮುನಿ ೨೪ ಬುದ್ಧರಲ್ಲಿ ಒಬ್ಬನೆಂದು ತಿಳಿಯಲಾಗಿದೆ. ಇದೇ ರೀತಿ ಕೊಪ್ಪಳ ಪ್ರದೇಶದಲ್ಲಿ ಅನೇಕಾನೇಕ ಸಾಂಸ್ಕೃತಿಕ ಸಂಸ್ಕೃತಿಯನ್ನು ಹೊಂದಿದ ಸ್ಥಳಗಳು ಇಂದಿಗೂ ಕಂಡು ಬರುತ್ತವೆ.

**೧.ಇಟಗಿಯ ಮಹಾದೇವ ದೇವಾಲಯ:**

ಭಾರತದ ಸುಪ್ರಸಿದ್ದ ದೇವಾಲಯಗಳಲ್ಲಿ ಇಟಗಿಯ ಮಹಾದೇವ ದೇವಾಲಯವು ಒಂದು. "ಇಟ್ಟಿಗೆ" ಅಥವಾ ಈಗಿನ "ಇಟಗಿ" ಯಲಬುರ್ಗಾ ತಾಲೂಕಿಗೆ ಸೇರಿದ ಐತಿಹಾಸಿಕ ಸಾಂಸ್ಕೃತಿಕ ಸ್ಥಳ. ಪ್ರಾಚೀನದಲ್ಲಿ ಇದು ಬಹು "ಧರ್ಮಧೇನು ನಿಹವಕಾಡುಂಬೊಲಂ" ಆಗಿದೆ. ಬೆಳವಲ ನಾಡಿನ ನರೆಯಂಗಲ್ಪನ್ನೆರಡು ವಿಭಾಗಕ್ಕೆ ಸೇರಿದ್ದ ಒಂದು ಪ್ರಮುಖವಾದ ಅಗ್ರಹಾರ. ಇದು ಕಲ್ಯಾಣಿ ಚಾಲುಕ್ಯರ ವಾಸ್ತುರಚನೆ ಮತ್ತು ಕಲಾಕುಸುರಿನ ಉತ್ಕೃಷ್ಟ ನಿರ್ಮಾಣವಾಗಿದೆ. ಕಲ್ಯಾಣಿ ಚಾಲುಕ್ಯರ ಆರನೇಯ ವಿಕ್ರಮಾದಿತ್ಯನ ದಂಡನಾಯಕರಲ್ಲೊಬ್ಬನಾದ ಮಹಾದೇವ ದಂಡನಾಯಕನು ಬರೆಯಿಸಿದ ಶಿಲಾಶಾಸನವು ಈ ದೇವಾಲಯದ ಮಾಹಿತಿ ಒದಗಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೧೧೨. ಈ ಶಾಸನದಲ್ಲಿ ಈ ದೇವಾಲಯವನ್ನು ದೇವಾಲಯಗಳ ಚಕ್ರವರ್ತಿ ಎಂದು ಕರೆಯಲಾಗಿದೆ. ಹೀಗಾಗಿ ಇಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಮಹಾಮಂಟಪ, ನವರಂಗ, ಗರ್ಭಗುಡಿ ಮತ್ತು ಅದಕ್ಕೆ ಸೇರಿದ ಒಳಕೋಣೆಯಿಂದ ಕೂಡಿದೆ. ಸುಮಾರು ಮೂರು ಅಡಿ ಎತ್ತರದ ಜಗಲಿಯ ಈ ಗುಡಿಯ ಮಹಾಮಂಟಪವು ೬೮ ಕಂಬಗಳ

ಮೇಲೆನಿಂತಿದೆ. ಮಹಾಮಂಟಪದ ಕಂಬಗಳು ದೇವಾಲಯದ ಬಹುಸುಂದರವಾದ ರಚನೆಗಳಾಗಿವೆ. ಕೆಲವು ಕಂಬಗಳು ಚೌಕಾಕಾರದಲ್ಲಿದ್ದರೆ ಮತ್ತೆ ಕೆಲವು ದುಂಡಾಗಿವೆ. ನುಣುಪಾದ ಹಸಿರು ಕಲ್ಲಿನಿಂದಾಗಿ ರೂಪಕ್ಕೆ ಹೊಳಪು ಬಂದಿದೆ. ಕೆಲವಂತೂ ಕನ್ನಡಿಯಂತೆ ಹೊಳೆಯುತ್ತವೆ. ಕಂಬದ ಕಾಂಡ ಭಾಗದ ಚಚ್ಚೌಕವಾಗಿರುವ ನಾಲ್ಕು ಪಾರ್ಶ್ವಗಳಲ್ಲಿ ಸುಂದರವಾದ ಶಿಲ್ಪಗಳಿವೆ.

**೨. ಕನಕಗಿರಿಯ ಲಕ್ಷ್ಮೀ ನರಸಿಂಹ ದೇವಾಲಯ/ಕನಕರಾಯನ ದೇವಾಲಯ:-**

ಕನಕರಾಯನ ದೇವಾಲಯವು ೫೪ ಅಡಿ ಉದ್ದ ಮತ್ತು ೩೬ ಅಡಿ ಅಗಲವಾಗಿದೆ. ಈ ದೇವಾಲಯದ ಸುತ್ತಲಿನ ಪ್ರಾಕಾರವು ೨೦೮ ಅಡಿ ಉದ್ದ ಹಾಗೂ ೯೦ ಅಡಿ ಅಗಲವಿದೆ. ಇಷ್ಟು ವಿಶಾಲವಾದ ಪ್ರಾಕಾರದ ಮಧ್ಯದಲ್ಲಿರುವ ಈ ಗುಡಿಯ ನಾಟ್ಯಶಾಲೆ ಅಥವಾ ಮಹಾಮಂಟಪವು ೩೪ ಕಂಬಗಳ ಮೇಲೆ ನಿಂತಿದೆ. ಮಹಾಮಂಟಪದ ಕಂಬಗಳ ಮೇಲ್ಭಾಗದಲ್ಲಿ ಸಾಲಾಗಿ ಗೊಂಬೆಗಳಿವೆ. ಅವುಗಳನ್ನು ನವಾಬ ಉಡಿಚನಾಯಕನ ಮಗನಾದ ಕೆಲವಡಿ ಉಡಿಚನಾಯಕನು ಮಾಡಿಸಿದ್ದಾನೆ. ಅಲ್ಲಿ ಗಿರಿಜಾಕಲ್ಯಾಣ, ಸೀತಾಕಲ್ಯಾಣ, ರುಕ್ಮಿಣೀ ಸ್ವಯಂವರ, ಅನಂತಶಯನ, ನರಸಿಂಹ ಮುಂತಾದ ಪೌರಾಣಿಕ ಸನ್ನಿವೇಶಗಳಿವೆ. ಅಲ್ಲದೆ ಉಡಿಚನಾಯಕನ ದರ್ಬಾರು, ಅದನ್ನು ರಾಣಿಯರು ಮರೆಯಿಂದ ನೋಡುತ್ತಿರುವುದು ತೂಗುಯ್ಯಾಲೆಯಾಟ ಮುಂತಾದ ಸನ್ನವೇಶಗಳನ್ನು ಕೊರೆಯಲಾಗಿದೆ.

ಕನಕನರಾಯನ ಗುಡಿಯ ಸುತ್ತಲೂ ಇರುವ ಮಂಟಪದಲ್ಲಿ ಬಾಲಕೃಷ್ಣ ಚತುರ್ಮುಖ ಬ್ರಹ್ಮ ಪದ್ಮಾಸನದಲ್ಲಿ ಕುಳಿತ ಶಿವನ ಶಿಲ್ಪಗಳಿವೆ. ಶಿವನ ಜಡೆಯಲ್ಲಿ ಗಂಗೆಯಿದ್ದಾಳೆ. ಈ ಮಂಟಪಗಳ ಮೇಲೆ ಇಟ್ಟಿಗೆಯಿಂದ ಕಟ್ಟಿದ ಗೋಪುರಗಳಿವೆ. ಅವುಗಳಲ್ಲಿ ಭಾಗವತ, ಮಹಾಭಾರತ, ರಾಮಾಯಣದ ವಿವಿಧ ದೃಶ್ಯಗಳು ತ್ರಿಮೂರ್ತಿಗಳ ಬೇರೆ ಬೇರೆ ಚಿತ್ರಗಳನ್ನು ಕೊರೆದಿದ್ದಾರೆ. ಪೂರ್ವಾಭಿಮುಖವಾಗಿರುವ ಈ ದೇವಾಲಯಕ್ಕೆ ಉತ್ತರ ದಕ್ಷಿಣಗಳಿಂದಲೂ ಪ್ರವೇಶಿಸುವ ದ್ವಾರಗಳಿವೆ. ಈ ದ್ವಾರಗಳ ಮೇಲೆ ಎತ್ತರವಾದ ಗೋಪುರಗಳನ್ನು ಕಟ್ಟಿದ್ದಾರೆ. ಈ ದೇವಾಲಯದ ಹೊರಭಾಗದಲ್ಲಿ ಉಡಿಚನಾಯಕ, ವೆಂಕಟಪ್ಪನಾಯಕ, ಕನಕಪ್ಪ ನಾಯಕ ಹಾಗೂ ಇಬ್ಬರು ರಾಣಿಯರ ಸುಂದರವಾದ ಶಿಲ್ಪಗಳಿವೆ. ಕರಿಯ ಕಲ್ಲಿನಲ್ಲಿರುವ ಈ ಮೂರ್ತಿಗಳು ಕೈಮುಗಿದು ನಿಂತಿರುವ ರೀತಿ, ರಾಜ ವೇಷ, ನಿಲುವಂಗಿಯನ್ನು ಧರಿಸಿರುವ ಬಗೆ ಸಹೃದಯರ ಮನವನ್ನು ಆಕರ್ಷಿಸುತ್ತವೆ.

**೩.ಆನೆಗೊಂದಿ ದೇವಾಲಯಗಳು:**

**ಗಣೇಶನ ಗುಡಿ:**

ಈ ದೇವಾಲಯ ಬಹುತೇಕ ಹಾಳು ಬಿದ್ದಿದ್ದು ಗರ್ಭಗುಡಿ ಮಾತ್ರ ಉಳಿದಿದೆ. ಇದರ ಬಾಗಿಲು ಅತ್ಯಂತ ಕಲಾತ್ಮಕತೆಯಿಂದ ಕೂಡಿದ್ದು ಒಂದೊಂದು ಪಾರ್ಶ್ವಗಳ ಚೌಕಟ್ಟು ಲತಾ ಬಳ್ಳಿಗಳಿಂದ ಕೂಡಿದೆ. ಮಧ್ಯದಲ್ಲಿ ಪುರುಷರ ಚಿಕ್ಕ ಚಿಕ್ಕ ಶಿಲ್ಪಗಳಿವೆ. ಅವರು ಧ್ಯಾನಾಸಕ್ತ, ಕುಳಿತ, ನಿಂತ, ನಾಟ್ಯ

ಭಂಗಿಯಲ್ಲಿದ್ದಾರೆ. ಎರಡನೇ ಸಾಲಿನಲ್ಲಿ ಕೊಳಲು, ಮೃದಂಗ ಮುಂತಾದ ವಾದ್ಯಗಳನ್ನು ನುಡಿಸುತ್ತಿದ್ದಾರೆ. ಕೆಳಭಾಗದಲ್ಲಿ ಒಬ್ಬ ಸ್ತ್ರೀ ಹಾಗೂ ಇಬ್ಬರು ಪುರುಷರಿರುವ ದ್ವಾರಪಾಲಕರಿದ್ದಾರೆ. ಅವರು ತ್ರಿಶೂಲ, ಡಮರು, ಬಿಲ್ಲು-ಬಾಣ, ಗದೆ, ಮತ್ತು ಕಮಲಗಳನ್ನು ಹಿಡಿದಿದ್ದಾರೆ. ಅವರ ಮೇಲೆ ಬಳ್ಳಿಗಳ ತೋರಣವನ್ನು ಕೆತ್ತಲಾಗಿದೆ.

**ರಂಗನಾಥ ದೇವಾಲಯ:**

ವಿಜಯನಗರ ಶೈಲಿಯ ಈ ದೇವಾಲಯವು ಗರ್ಭಗುಡಿ, ಶುಕನಾಸಿ,ನವರಂಗಗಳನ್ನು ಹಾಗೂ ಹೊರಗೆ ಪ್ರಾಂಗಣ ಹೊಂದಿದೆ. ಸುಮಾರು ೩ ಅಡಿ ಎತ್ತರದ ಜಗಲಿಯ ಮೇಲಿರುವ ಈ ದೇವಾಲಯದ ಗರ್ಭಗುಡಿಯಲ್ಲಿ ಶೇಷಶಾಯಿಯಾದ ವಿಷ್ಣುವಿನ ಶಿಲ್ಪವಿದೆ. ಮೂಲ ವಿಗ್ರಹ ಹಾಳಾಗಿದ್ದರಿಂದ ಈಗ ಅದರ ಸ್ಥಳದಲ್ಲಿ ಹೊಸ ವಿಗ್ರಹವನ್ನು ಸ್ಥಾಪಿಸಲಾಗಿದೆ. ಇದೇ ದೇವಾಲಯದಲ್ಲಿ ನಿಂತ ಭಂಗಿಯಲ್ಲಿರುವ ಲಕ್ಷ್ಮಿಯ ಎರಡು ಮೂರ್ತಿಗಳಿವೆ. ಕರಿಶಿಲೆಯ ಲಕ್ಷ್ಮಿಯ ವಿಗ್ರಹವು ೩ ಅಡಿ ಎತ್ತರ ಮತ್ತು ೨೪ ಅಡಿ ಅಗಲವಿದೆ. ರಂಗನಾಥ ದೇವಾಲಯದಲ್ಲಿಯೇ ಆಳ್ವಾರರ, ಕೇಶವನ ಮೂರ್ತಿಗಳಿವೆ.

**ಕುಕನೂರು:**

'ಚಂದ್ರಹಾಸಪುರ' 'ಕುಂತಲಪುರ' ವೆಂದು ದಂತಕತೆಗಳಲ್ಲಿ ಕರೆಯಿಸಿಕೊಂಡ ಈ ಸ್ಥಳ 'ಶ್ರೀಮನ್ಮಹಾಗ್ರಹಾರ ಕುಕನೂರು' 'ಕುಕ್ಕನೂರು ೩೦' 'ತ್ರಿಂಶದ್ಗ್ರಾಮಾಧಿಪತಿ' ಮುಂತಾದ ಬೇರೆ ಬೇರೆ ಹೆಸರುಗಳು ಕೂಡಾ ಇದ್ದವೆಂದು ಇಲ್ಲಿರುವ ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಶಾಸನಗಳು ಕುಕನೂರನ್ನು ಸಹಾಸ್ರ ಮಹಾಜನಗಳ ಬೀಡಾಗಿದ್ದ 'ಮಹಾಗ್ರಹಾರ' ವೆಂದು ಉಲ್ಲೇಖಿಸುತ್ತವೆ. ಕ್ರಿ.ಶ. ೧೧೨೪ಕ್ಕೆ ಸೇರಿದ, ಕಲ್ಯಾಣಿ ಚಾಲುಕ್ಯ ಅರಸು ಭೂಲೋಕಮಲ್ಲನ ಶಾಸನ ಈ ಮಹಾಜನರನ್ನು ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಸಮಾಧಿ ಶೀಲಸಂಪನ್ನ ರೆಂದು ಬಣ್ಣಿಸುತ್ತದೆ. ಈ ಮಹಾಗ್ರಹಾರದಲ್ಲಿ ವೈದಿಕ ವಿದ್ಯೆಯೊಂದಿಗೆ ಶಾಸ್ತ್ರ, ಪುರಾಣ, ತರ್ಕ, ವ್ಯಾಕರಣ, ರಾಮಾಯಣ, ಮಹಾಭಾರತ ಮುಂತಾದವುಗಳ ವ್ಯಾಸಂಗಕ್ಕೆ ಅವಕಾಶವಿದ್ದಿತು. ಇಲ್ಲಿಯ ಶಾಸನಗಳು ಕುಕನೂರು ಅಗ್ರಹಾರವನ್ನು ಮುಕ್ತಕಂಠದಿಂದ ಹೊಗಳುವುದರ ಜೊತೆಗೆ ಇಲ್ಲಿ ಜೀವಿಸಿದ ಪಂಡಿತರ ಬಗ್ಗೆ ಅಧ್ಯಯನದ ವಿಷಯಗಳನ್ನು ಕುರಿತು ವಿಶೇಷ ವಿವರಗಳನ್ನು ಕೂಡ ಒದಗಿಸುತ್ತವೆ. "ಕ್ರಿ.ಶ. ೧೧೭೮ರ ಕಲಚೂರಿ ಸಂಕಮದೇವನ ಶಾಸನದ ಪ್ರಕಾರ ಕುಕ್ಕನೂರು ಬ್ರಾಹ್ಮಣ ಶಾಲೆಯಿಂ ಬ್ರಹ್ಮ ಕುಂಡದಿ ನಿವರ್ಬ್ಬಹ್ಮರೆನಿಪ್ಪ ದ್ವಿಜರಿಂದಂ ಬ್ರಹ್ಮಲೋಕಕ್ಕೆ ದೊರೆಯಾಯ್ತು."[೨೨]

ಕಲ್ಯಾಣಿ ಚಾಲುಕ್ಯ ಅರಸು ಜಗದೇಕಮಲ್ಲನ ಶಾಸನ "ಸಲೆ ವೇದಪುರಾಣದಿಂದಂ" ಶೋಭಿಸುತ್ತಿತ್ತೆಂದು ಬಣ್ಣಿಸುತ್ತದೆ. ಕುಕನೂರು ಪ್ರಸಿದ್ಧ ಶಿಕ್ಷಣಕೇಂದ್ರವಾಗಿರುವುದರೊಂದಿಗೆ ಇದೊಂದು

ಧಾರ್ಮಿಕ ಕೇಂದ್ರಕೂಡ ಆಗಿದ್ದಿತು. ಉತ್ತರ ಭಾರತದಲ್ಲಿ ಉದಯವಾದ ಶಾಕ್ತಪಂಥದ ಅಂಗವಾಗಿ ಕ್ರಿ.ಶ. ೧೦ರಿಂದ ಕ್ರಿ.ಶ. ೧೩ನೇಯ ಶತಮಾನಗಳ ನಡುವಣ ಅವಧಿಯಲ್ಲಿ ದಕ್ಷಿಣ ಭಾರತದಲ್ಲಿ ಸ್ಥಾಪನೆಗೊಂಡ ಕೆಲವೇ 'ಶಕ್ತಿಪೀಠ' ಗಳಲ್ಲಿ ಕುಕನೂರು ಕೂಡ ಒಂದೆಂದು ತಿಳಿದು ಬರುತ್ತದೆ.

ಈ ಪ್ರಮುಖ ಸ್ಥಳಗಳಲ್ಲದೇ ಯಲಬುರ್ಗಾ ತಾಲೂಕಿನ ಮುಧೋಳ, ಕೊಪ್ಪಳ ತಾಲೂಕಿನ ಅಳವಂಡಿ, ಕವಲೂರು ಮಾದಿನೂರುಗಳು ಪ್ರಮುಖ ವಿದ್ಯಾಕೇಂದ್ರಗಳಾಗಿರುವುದರ ಜೊತೆಗೆ ಸಾಂಸ್ಕೃತಿಕ, ಧಾರ್ಮಿಕ ಮಹತ್ವವನ್ನು ಪಡೆದಿದ್ದವು. ಮುಧೋಳ ಗ್ರಾಮವು ಹಿಂದೆ ಮುದವೊಳಲು ಎಂಬ ಹೆಸರನ್ನು ಪಡೆದಿತ್ತು. ಅಳವಂಡಿ ಹಿಂದಿನ ದಿನಗಳಲ್ಲಿ ಅಳವಿಂಡಿ ಎಂಬ ಹೆಸರಿನಲ್ಲಿ ಸುಪ್ರಸಿದ್ದವಾಗಿದ್ದ ಒಂದು ಅಗ್ರಹಾರವಾಗಿದ್ದಿತು. ಕವಲೂರು ಗ್ರಾಮಕ್ಕೆ ಹಿಂದೆ ಕೌರವಪುರ, ಕೌರೂರುಗಳೆಂದು ಶಾಸನಗಳಲ್ಲಿ ಗುರುತಿಸಲಾಗಿದೆ.

## ಅಡಿ ಟಿಪ್ಪಣಿ

೧. ಟಿ.ಆರ್ ಚಂದ್ರಶೇಖರ (ಸಂ): ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ ಪುಟ – ೨೬

೨. ಟಿ.ಆರ್ ಚಂದ್ರಶೇಖರ (ಸಂ): ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ ಪುಟ – ೮೬

೩. ಟಿ.ಆರ್ ಚಂದ್ರಶೇಖರ (ಸಂ): ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ ಪುಟ – ೩೧ – ೩೨

೪. ಅಲ್ಲಮಪ್ರಭು ಬೆಟ್ಟದೂರು / ಎಚ್.ಎಸ್. ಪಾಟೀಲ್, (ಸಂ) ಕೊಪ್ಪಳ ಜಿಲ್ಲಾ ದರ್ಶನ ಪುಟ – ೧೫–೧೬

೫. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ – ೧೫೮

೬. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ – ೧೯೯

೭. ಅಲ್ಲಮಪ್ರಭು ಬೆಟ್ಟದೂರು / ಎಚ್.ಎಸ್. ಪಾಟೀಲ್,(ಸಂ) ಕೊಪ್ಪಳ ಜಿಲ್ಲಾ ದರ್ಶನ – ಪುಟ – ೧೭

೮. ಕೆ.ಎಮ್. ಸುರೇಶ, (ಸಂ) ಕರ್ನಾಟಕ ದೇವಾಲಯ ಕೋಶ : ಪುಟ – xx

೯. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ –೩೧–೩೨

೧೦. ಕೆ.ಎಮ್. ಸುರೇಶ, (ಸಂ) ಕರ್ನಾಟಕ ದೇವಾಲಯ ಕೋಶ : ಪುಟ – xx

೧೧. ಕೆ.ಎಮ್. ಸುರೇಶ, (ಸಂ) ಕರ್ನಾಟಕ ದೇವಾಲಯ ಕೋಶ : ಪುಟ – xx

೧೨. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ –೩೮೫

೧೩. ಕೆ.ಎಮ್. ಸುರೇಶ, (ಸಂ) ಕರ್ನಾಟಕ ದೇವಾಲಯ ಕೋಶ : ಪುಟ– xx

೧೪. ಸಮಗ್ರ ಕರ್ನಾಟಕ ಚರಿತ್ರೆ– ೧೯೯೫, ಪುಟ – ೧೮

೧೫. ಕೆ.ಎಮ್. ಸುರೇಶ, (ಸಂ)ಕರ್ನಾಟಕ ದೇವಾಲಯ ಕೋಶ : ಪುಟ – XXI

೧೬. ಚನ್ನಬಸವ ಹಿರೇಮಠ, ಕಾವ್ಯಾನಂದ ಬೆಳ್ಳಿಬೆಳಕು ಮಾಲೆ –ಪುಟ – ೩೨

೧೭. ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ – ೭೭

೧೮. ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ – ೨೧೧

೧೯. ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ – ೧೯

೨೦. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ – ೧೩೯

೨೧. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ.– ೧೫೩

೨೨. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ – ೫೫

೨೩. ಎಚ್. ಎಸ್. ಪಾಟೀಲ್ / ಅಲ್ಲಮ ಪ್ರಭು ಬೆಟ್ಟದೂರು – ತಿರುಳ್ಗನ್ನಡ ಪುಟ – ೩೨

# ಅಧ್ಯಾಯ ೩

## ಕೋಮು ಸೌಹಾರ್ದತೆಯ ಪರಿಕಲ್ಪನೆ

# ಅಧ್ಯಾಯ : ೩

# ಕೋಮು ಸೌಹಾರ್ದತೆಯ ಪರಿಕಲ್ಪನೆ



## ೩.೧.ಕೋಮುವಾದ ತಾತ್ವಿಕ ಮಹಾವಲೋಕನ

ಕೋಮು ಸೌಹಾರ್ದತೆಯ ಪರಿಕಲ್ಪನೆಯನ್ನು ಕುರಿತು ನೋಡುವ ಮುಂಚೆ ಅಧ್ಯಯನದ ದೃಷ್ಟಿಯಿಂದ ಕೋಮುವಾದದ ಬಗ್ಗೆ ತಿಳಿದುಕೊಳ್ಳುವದು ಸೂಕ್ತವೆನಿಸುತ್ತದೆ. ಕೋಮುವಾದವೆನ್ನುವುದು ಇಂದು ನಿನ್ನೆಯದಲ್ಲ. ಇದು ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡು ಬಂದು, ಇಂದು ಎಲ್ಲೆಡೆ ಆತಂಕಕಾರಿ ಸ್ಥಿತಿಯನ್ನು ತಲುಪಿದೆ. ಕೋಮುವಾದಕ್ಕೆ ಸಂವಾದಿಯಾಗಿ ಮತೀಯವಾದ, ಮತೀಯತೆ, ಮೂಲಭೂತವಾದ, ಧರ್ಮಾಂಧತೆ ಎಂಬ ಪದಗಳು ಸಾಮಾನ್ಯವಾಗಿ ನಮ್ಮಲ್ಲಿ ಬಳಕೆಯಲ್ಲಿವೆ. ಮಾನವ ಕಾಡಿನ ಜೀವನದಿಂದ ನಾಗರಿಕ ಜೀವನವನ್ನು ಬದುಕಲು ಆರಂಭ ಮಾಡಿದಾಗ ಅವನು ರೀತಿ ನೀತಿ, ಕ್ರಮ ಕಟ್ಟಳೆಗಳಿಗೆ ಒಳಗಾದ. ಇವು ಆಯಾ ದೇಶ, ಭಾಷೆ, ಕಾಲಕ್ಕೆ ತಕ್ಕಂತೆ ಭಿನ್ನತೆಯನ್ನು ಪಡೆದುಕೊಂಡವು. ಒಂದು ಪ್ರದೇಶದ ಜನರ ಆಚಾರ-ವಿಚಾರ, ಇನ್ನೊಂದು ಪ್ರದೇಶದ ಜನರ ಆಚಾರ-ವಿಚಾರಗಳು ವ್ಯತ್ಯಾಸಗೊಂಡು ಧರ್ಮವೆನ್ನುವುದು, ಜಾತಿಯ ರೂಪ ಪಡೆದುಕೊಂಡಿತು. ಬದುಕಿನ ಚಿತ್ರಕ್ಕೆ ರೀತಿನೀತಿಗಳ ಕಟ್ಟುಹಾಕಿ ಸುಂದರಗೊಳಿಸಿಕೊಳ್ಳಲು ಪ್ರಯತ್ನ ಮಾಡಿದಾಗ ಧರ್ಮ ಎಂಬ ಹೊಸ ಸಾಮಾಜಿಕ ಸಂಸ್ಥೆ ರೂಪ ಪಡೆಯಿತು. ಅವರವರೇ ಅನುಸರಿಸುವ ಧರ್ಮ ಅವರದೇ ಶ್ರೇಷ್ಠವೆಂದು ಭಾವಿಸತೊಡಗಿದಾಗ ಧರ್ಮವಾದದ, ಕೋಮುವಾದದ ಜನನವಾಯಿತು ಎಂದು ಹೇಳಬಹುದು.

"ಕೋಮುವಾದ ಯಾವುದೇ ಒಂದು ಸಮುದಾಯಕ್ಕೆ ಸಿಕ್ಕ ಬಳುವಳಿಯಲ್ಲ. ಎಲ್ಲ ಸಣ್ಣ, ದೊಡ್ಡ ಕಾರ್ಮಿಕ ಹಾಗೂ ಸಣ್ಣಸಮುದಾಯಗಳೂ ಇದರಿಂದ ಘಾಸಿಗೊಳ್ಳುತ್ತಲಿವೆ. ಭಾರತದ ಸಂದರ್ಭದಲ್ಲಿ ಕೋಮುವಾದದ ಅಧ್ಯಯನಕ್ಕಾಗಿ ಈ ಭೂಖಂಡದ ಎರಡು ಅತಿ ದೊಡ್ಡ ಧಾರ್ಮಿಕ ಸಮುದಾಯಗಳಾದ - ಹಿಂದೂ ಹಾಗೂ ಮುಸಲ್ಮಾನರ - ಸಂಬಂಧಗಳ ಅಧ್ಯಯನ ಅತ್ಯಂತ

ಮಹತ್ವಪೂರ್ಣವಾದ ಮಾದರಿಯಾಗುತ್ತದೆ. ಇದರರ್ಥ ಸ್ವಾಭಾವಿಕವಾಗಿ ಎಲ್ಲಿಯ ಹಿಂದೂ ಅಥವಾ ಮುಸಲ್ಮಾನರಲ್ಲಿ ಬಹುಸಂಖ್ಯಾತರು ಕೋಮುವಾದಿಗಳಾಗಿದ್ದಾರೆ ಎಂದೇನಲ್ಲ. ಒಬ್ಬರು ಇನ್ನೊಬ್ಬರ ಕುರಿತು ಯೋಚಿಸುವ ಸಂದರ್ಭದಲ್ಲಿ ಅಥವಾ ಇನ್ನೊಂದು ಸಮುದಾಯಕ್ಕೆ ಸಂಬಂಧಿಸಿದಂತೆ ಯಾವುದೇ ಅಭಿಪ್ರಾಯ ರೂಪಿಸುವ ಸಂದರ್ಭದಲ್ಲಿ ಹಿಂದೂ ಅಥವಾ ಮುಸ್ಲಿಂ ಮನಸ್ಸಿನ ಮೇಲೆ ಕೋಮುವಾದಿ ಪೂರ್ವಾಗ್ರಹಗಳ ಬಲವಾದ ಪ್ರಭಾವ ಕಂಡುಬರುವುದೂ ಒಂದು ಕಟು ಸತ್ಯವಾಗಿದೆ."[1]

ಯಾವುದೇ ಎರಡು ಧರ್ಮಗಳ ನಡುವೆ ನಡೆಯುವಂತಹ ಧರ್ಮಾಧಾರಿತ ಘರ್ಷಣೆಗೆ ಕೋಮುವಾದವೆನ್ನಬಹುದು. ನಾವು ಭಾರತೀಯ ಸಂದರ್ಭವನ್ನು ಗಮನಿಸಿದಾಗ ಹಿಂದೂ ರಾಷ್ಟ್ರಕ್ಕೆ ಐದು ಸಾವಿರ ವರ್ಷಗಳ ಸುಧೀರ್ಘ ಇತಿಹಾಸವಿದೆ ಎಂಬ ಮಾತನ್ನು ಗಮನಿಸಿದಾಗ ರಾಷ್ಟ್ರಗಳ ಪರಿಕಲ್ಪನೆ ಆಧುನಿಕ ಜಗತ್ತಿನ ಆವಿಷ್ಕಾರ ಎಂದು ಹೇಳಬೇಕಾಗಿಲ್ಲ. ಮನುಕುಲದ ಪ್ರಾರಂಭದಿಂದ ಹಿಡಿದು ಮಧ್ಯಕಾಲೀನವರೆಗೂ ರಾಜಪ್ರಭುತ್ವ ಆಡಳಿತ ನಡೆಸುತ್ತಿತ್ತು ಎಂಬ ಮಾತು ಒಪ್ಪಿತ ಸಂಗತಿಯಾಗಿದೆ. ನಾಲ್ಕು ಶತಮಾನಗಳ ಹಿಂದೆ ಯುರೋಪ ದೇಶದಲ್ಲಿ ರಾಜರ ಆಳ್ವಿಕೆಯ ವಿರುದ್ಧ ರಾಷ್ಟ್ರಗಳು ಹುಟ್ಟಿಕೊಂಡವು. ಏಕೆಂದರೆ ಉಳಿಗಮಾನ್ಯ ವ್ಯವಸ್ಥೆ ಅಂದಿನ ಕಾಲದಲ್ಲಿ ಒಂದು ಪ್ರಮುಖ ಉದ್ಯಮವಾಗಿ ಬೆಳೆದಿತ್ತು. ಈ ದೃಷ್ಟಿಯಿಂದ ವೃತ್ತಿಗಳಾಗಿ, ರಾಷ್ಟ್ರಗಳಾಗಿ, ತಮ್ಮ ಸ್ವಾತಂತ್ರ್ಯ ಮತ್ತು ಸಮಾನತೆಗೆ ಹಾತೊರೆದವು.

ಇಂತಹ ರಾಷ್ಟ್ರಗಳು ಇತರ ರಾಷ್ಟ್ರಗಳನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಪ್ರಯತ್ನ ಮಾಡಿದವು. ಆ ಸಂದರ್ಭದಲ್ಲಿ ಯಾವುದೇ ರಾಷ್ಟ್ರ ತನ್ನತನವನ್ನು ಬಿಟ್ಟು ಕೊಡಲು ಮುಂದಾಗಲಿಲ್ಲ. ಇದಕ್ಕೆ ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕವಾಗಿ ಸಂಘಟನೆಗಳನ್ನು ಹುಟ್ಟು ಹಾಕುವಂತ ಸಂದರ್ಭ ಒದಗಿಬಂತು. ಮೊದಲಿಗೆ ಇವೆರೆಡು "ವಾಸ್ತವವಾಗಿ ವಿಮರ್ಶೆಮಾಡಿ ನೋಡಿದಲ್ಲಿ ಧರ್ಮಿಷ್ಟ ಮುಸಲ್ಮಾನ ರಾಜರುಗಳೂ, ಅವರ ಸರ್ಕಾರವೂ ಅನ್ಯಮತಗಳಿಗೂ, ಅನ್ಯಧರ್ಮಗಳಿಗೂ ಅವಕಾಶವನ್ನು ಕೊಟ್ಟಿರುವುದು ಗಮನಾರ್ಹವಾದ ವಿಷಯ. ಹದಿನಾರು–ಹದಿನೇಳನೆಯ ಶತಮಾನಗಳಲ್ಲಿ ಯೂರೋಪ ಖಂಡದಲ್ಲಿ ಈ ಸಾಯಿಗಳೇ ಒಬ್ಬರನ್ನೊಬ್ಬರು ಅಗ್ನಿಗೆ ಆಹುತಿಯಾಗಿ ಕೊಡುತ್ತಿದ್ದರು. ಅದೇ ಕಾಲದಲ್ಲಿ ಭಾರತೀಯ ಮುಸಲ್ಮಾನರಾಜರು ಅನ್ಯಮತಗಳಿಗೆ ಅನನ್ಯ ಸಹಾನುಭೂತಿ ತೋರಿಸಿದ ವಿಷಯವು ಅತಿ ಪ್ರಶಂಸನೀಯವಾದ ಘಟನೆ. ಪಿನೆಲೆ ಎಂಬ ಚರಿತ್ರೆಕಾರನು "ಪರಮತ ಸಹಿಷ್ಣುತೆ ಇಸ್ಲಾಮಿಯರಲ್ಲಲ್ಲದೆ ಮತ್ತೆಲ್ಲಿಯೂ ಕಾಣುವುದಿಲ್ಲ."[2] ಎಂಬುದು ಕಾಲ ಕ್ರಮೇಣವಾಗಿರುವ ಪರಿಸ್ಥಿತಿಯನ್ನು ಕುರಿತು ತಿಳಿಸುತ್ತದೆ. ಆಧುನಿಕ ಶಿಕ್ಷಣವನ್ನು ಪಡೆದ ಅನೇಕರು ವೈಚಾರಿಕತೆಯನ್ನು ಮೈಗೂಡಿಸಿಕೊಂಡರು. ದೇಶಿಯ ಚಿಂತನೆ ಹಾಗೂ ಪ್ರಯತ್ನ ಇಲ್ಲಿ ಹಿಂದು ಮತ್ತು ಮುಸ್ಲಿಂ ಧರ್ಮಗಳ ನಡುವೆ ಕೋಮುವಾದವನ್ನು ಗಮನಿಸಿದರೆ ಒಂದಲ್ಲ ಒಂದು ರೀತಿಯಿಂದ ದೇಶ – ದೇಶಗಳ ನಡುವೆ ಕೋಮು ಸೌಹಾರ್ದತೆಯ ಬದಲಾಗಿ ಕೋಮುದಳ್ಳುರಿಗೆ ದಾರಿ ಮಾಡಿಕೊಟ್ಟಿದ್ದನ್ನು ಕಾಣುತ್ತೇವೆ.

ಕೋಮುವಾದದ ಉಗಮ ಮತ್ತು ಬೆಳವಣಿಗೆ ಒಂದು ಸಂಕೀರ್ಣ ಪ್ರಕ್ರಿಯೆ. ಏಕೆಂದರೆ ಇದು ವಸಾಹತು ಶಾಹೀ ನೀತಿಗಳ ಪರಿಣಾಮದಿಂದ ಹುಟ್ಟಿಕೊಂಡಿತು. ೧೮೫೭ ರ ದಂಗೆಯ ನಂತರ ಮತ್ತೊಂದು ರೀತಿಯ ಕರಾಳ ಮುಖ ಗೋಚರಿಸಿತು. ಭಾರತದಲ್ಲಿ ಕೋಮುವಾದಕ್ಕೆ ಮುಸ್ಲಿಂರಲ್ಲಿಯ ವಿಶ್ವಾಸ ಘಾತಕವೇ ಕಾರಣ ಎಂಬುದು ಹಲವರ ಅಭಿಪ್ರಾಯ. ಏಕೆಂದರೆ ಬೇರೊಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಬಂದು ನೆಲೆಸುವಂತಹ ಸಂದರ್ಭದಲ್ಲಿ ತಮ್ಮ ಸ್ಥಾನಮಾನಕ್ಕಾಗಿ ಪ್ರತಿಯೊಬ್ಬರು ಹಾತೊರೆಯುತ್ತಾರೆ. ಇಂತಹ ಸಂದರ್ಭದಲ್ಲಿ ಇವರಿಬ್ಬರ ಮಧ್ಯ ನಡೆಯುವ ಸಂಘರ್ಷವನ್ನು ಕಂಡು ಬ್ರಿಟಿಷರು ಭಾರತವನ್ನು ಆಳಬೇಕೆಂಬ ಉದ್ದೇಶದಿಂದಲೇ ಭಾರತದಲ್ಲಿ ನೆಲೆ ನಿಂತು ಮುಸ್ಲಿಂರನ್ನು ಕಡೆಗಣಿಸುವ ಪ್ರಯತ್ನ ಮಾಡಿದರು. ಹಿಂದುಗಳಲ್ಲಿ ಬ್ರಾಹ್ಮಣ, ಮುಸ್ಲಿಂ ಮತ್ತು ಹಿಂದು ಎಂಬುದಾಗಿ ವರ್ಗೀಕರಣ ಮಾಡಿದರು. ಇದನ್ನರಿತ ಭಾರತೀಯರು ಬ್ರಾಹ್ಮಣರನ್ನು ಹಿಂದೂ ಧರ್ಮಕ್ಕೆ ಒಳಗೆ ಮಾಡಿಕೊಂಡು ಹಿಂದೂ ಮತ್ತು ಮುಸ್ಲಿಂ ಎಂಬ ಎರಡು ವರ್ಗಗಳನ್ನು ಸೃಷ್ಟಿಸಿದರು.

ಆಗ ಭಾರತೀಯರು ಆಧುನಿಕ ರಾಷ್ಟ್ರೀಯ ಪ್ರಜ್ಞೆ ಮತ್ತು ಧಾರ್ಮಿಕ ಪ್ರಜ್ಞೆಯನ್ನು ರೂಡಿಸಿಕೊಂಡರು. ಯಾವಾಗ ರಾಷ್ಟ್ರ ಮತ್ತು ಧರ್ಮ ಪ್ರಜ್ಞೆ ಮೂಡಿತೋ ಅಂತಹ ಸಂದರ್ಭದಲ್ಲಿ ರಾಮ ಮತ್ತು ರಹೀಮ ಎಂಬ ಪರಿಕಲ್ಪನೆ ಮೂಡಿತು. ಇದರಿಂದಾಗಿಯೇ ಕೋಮುವಾದ ತಲೆ ಎತ್ತಿತು. ಬ್ರಿಟಿಷರ ಮತ್ತು ಹಿಂದೂಗಳ ನಡುವೆ ನಡೆದಿರುವ ಹೊಡೆದಾಡುವ ನೀತಿ ಇದಕ್ಕೆ ಪ್ರೇರಕ ಶಕ್ತಿಯಾಯಿತು ಇದರಿಂದಾಗಿ ದೇಶದ ವಿಭಜನೆ ದುರಂತವಾಗಿ ಮಾರ್ಪಟ್ಟಿತು. ಮುಸ್ಲಿಂ ಕೋಮುವಾದದ ರಾಜಕಾರಣ ಹಿಂದೂ ಕೋಮುವಾದ ಇದಕ್ಕೆ ಪ್ರಮುಖ ಪಾತ್ರವಹಿಸಿದ್ದವು. ಇತಂಹ ಸಂದರ್ಭದಲ್ಲಿ ಮುಸ್ಲಿಂ ಲೀಗ ಭಾರತದಲ್ಲಿರುವ ಮುಸ್ಲಿಂರಿಗೆ ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಲು ಆರಂಭಿಸಿತು. ಹಿಂದೂ ಕೋಮುವಾದಿಗಳಾದ ಹಿಂದೂ ಮಹಾಸಭಾ, ಆರ್.ಎಸ್.ಎಸ್, ಮುಸ್ಲಿಂ ಕೋಮುವಾದಿಗಳಾದ ಮುಸ್ಲಿಂ ಲೀಗ್ ಮತ್ತು ಚೌದ್ರಿಅಲಿ, ರಹೆಮತ ಅಲಿ, ಎಂಬ ಎರಡು ರಾಷ್ಟ್ರಗಳ ಪರಿಕಲ್ಪನೆ ಒಪ್ಪಿಕೊಂಡವು. ಆಗ ಕಾಂಗ್ರೇಸ್‌ನ ಉದಯವಾಯಿತು. ಇಂತಹ ಸೆಕ್ಯೂಲರ್ ತತ್ವಗಳಿಂದ ಇವೆರಡು ಪರಸ್ಪರ ವಿರೋಧವಿದ್ದರೂ, ಸೆಕ್ಯೂಲರ ತತ್ವಗಳಿಗೆ ವಿರೋಧಿಯಾದವು.

ಕೋಮುವಾದವು ಭಾರತದ ಉದಯೋನ್ಮುಖ ವರ್ಗಗಳಿಗೆ ಪ್ರತಿನಿಧಿಸುವ ಕೆಲಸಗಳನ್ನು ಕೈಗೊಂಡಿತು. ಅಲ್ಲದೇ ಬ್ರಿಟಿಷರ ಆಡಳಿತಕ್ಕೆ ನಿಷ್ಠೆಯನ್ನು ತೋರುವ ಹಿಂದೂ ಕೋಮುವಾದದ ಭಾವನೆಗಳನ್ನು ಅರಿತ ಮುಸ್ಲಿಂ ನಾಯಕರು ತಟಸ್ಥರಾಗಿ ಸುಮ್ಮನಿರದೆ ಮುಸ್ಲಿಂ ಜಾಗಿರಿದಾರರನ್ನು, ಅನುಯಾಯಿಗಳನ್ನು ಸಂಘಟಿಸಿ ಕಾಂಗ್ರೇಸ್ ಸರಕಾರವು ಹಿಂದೂಗಳಿಗೆ ಮಾತ್ರ ಸೀಮಿತವಾಗಿದೆ ಎಂದು ಪ್ರಚಾರ ಮಾಡಿದರು. ಹೀಗೆ ಒಂದಲ್ಲ ಒಂದು ರೀತಿಯಿಂದ ಗಮನಿಸಿದ ಬ್ರಿಟಿಷರು ಭಾರತದಲ್ಲಿ ಹೊಡೆದಾಳುವ ನೀತಿಯನ್ನು ಜಾರಿಗೆ ತಂದರು. ಬ್ರಿಟಿಷ ಸರ್ಕಾರವು ಅಷ್ಟಕ್ಕೆ ಸುಮ್ಮನಿರದೆ ಹಿಂದು ಸಿದ್ಧಾಂತಗಳನ್ನು ಪ್ರೋತ್ಸಾಹಿಸಿ ದೇಶದ ವಿಭಜನೆಗೆ ಕಾರಣವಾಯಿತು.

ಈ ಕೋಮುವಾದವು ಬ್ರಿಟಿಷರ ವಸಹಾತು ಷಾಯಿಯಿಂದಾಗಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕವಾಗಿ ಮುಸ್ಲಿಂರ ಸಂಖ್ಯೆ ಇಳಿಮುಖವಾಗತೊಡಗಿತು. ೧೯೩೭ ರ ಸಂದರ್ಭದಲ್ಲಿ ನಡೆದ ಚುನಾವಣೆಯಲ್ಲಿ ಬಹುಮತಗಳಿಸಿದ ಕಾಂಗ್ರೇಸ್ ಸರ್ಕಾರವು ಮಂತ್ರಿಮಂಡಲದಲ್ಲಿ ಮುಸ್ಲಿಂರಿಗೆ ಪ್ರಾತಿನಿಧ್ಯ ನೀಡಲಾರದೇ ಈ ದೇಶದಲ್ಲಿ ಮುಸ್ಲಿಂ ಮತ್ತು ಹಿಂದೂ ಎಂಬ ರಾಷ್ಟ್ರಗಳು ಎರಡು ಇವೆ ಎಂದು ತಿಳಿಸಿತ್ತು. ಹೀಗೆ ಈ ಮಂತ್ರಿ ಮಂಡಲದಲ್ಲಿ ತಿರಸ್ಕೃತವಾದ ಮುಸ್ಲಿಂ ಜನಾಂಗವು ಪಾಕಿಸ್ತಾನದ ಸ್ಥಾಪನೆಗಾಗಿ ಹೋರಾಟ ನಡೆಸುತಿತ್ತು. ಏಕೆಂದರೆ ಪಾಕಿಸ್ತಾನವು ಒಂದು ವೇಳೆ ಪ್ರತ್ಯೇಕ ರಾಷ್ಟ್ರವಾದರೆ ಮುಸ್ಲಿಂರಿಗೆ ಎಲ್ಲಾ ರೀತಿಯಿಂದಲೂ ಪ್ರಾತಿನಿಧ್ಯ ದೊರೆಯುತ್ತದೆ ಎಂಬ ಕಲ್ಪನೆ ಮುಸ್ಲಿಂ ಲೀಗ್‌ಗೆ ಇತ್ತು ಎಂಬುವುದು ವಿಚಾರವಂತರ ಬುದ್ದಿಯಿಂದ ತಿಳಿದುಬರುತ್ತವೆ. ಹೀಗೆ ಮುಸ್ಲಿಂ ಲೀಗ್ ಕೇವಲ ಮುಸ್ಲಿಂ ಗೆದ್ದ ಸಮುದಾಯದ ಪ್ರತಿನಿಧಿಯಾಗಿದ್ದರಿಂದ ಉಳಿದಂತಹ ಮುಸ್ಲಿಂ ಸಾಮಾನ್ಯ ಜನರು ಮುಸ್ಲಿಂಲೀಗ್‌ನ ವಿರೋಧಕ್ಕೆ ಸಿಡಿದೆದ್ದರು. ಹೀಗೆ ಉಳಿದಂತಹ ಜನ ಭಾರತದಲ್ಲಿ ನೆಲೆ ನಿಂತುಕೊಂಡು ತಮ್ಮ ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕವಾದ ತಮ್ಮ ಸ್ಥಾನಮಾನವನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಯಿತು.

ಕೋಮುವಾದದಲ್ಲಿ ಮೂರು ರೀತಿಯ ಹಂತಗಳನ್ನು ನಾವು ಗುರುತಿಸುತ್ತೇವೆ. ಒಂದನೆಯದಾಗಿ ಸೌಮ್ಯ ಕೋಮುವಾದ. ಇದು ಒಂದೇ ಧರ್ಮಕ್ಕೆ ಸೇರಿದ ಒಂದೆ ಆಸಕ್ತಿಯನ್ನು ಹೊಂದಿದ ಒಂದೇ ವಿಚಾರಗಳನ್ನು ಹೊಂದಿದ ಸೌಮ್ಯ ಜನರ ಗುಂಪು. ಎರಡನೆಯದಾಗಿ ಮಂಕು – ಕೋಮುವಾದ. ಇದು ವಿವಿಧ ಧರ್ಮಿಯರ ಆಸಕ್ತಿಗಳಲ್ಲಿನ ಭಿನ್ನತೆಗಳ ಬಗ್ಗೆ ನಂಬಿಕೆಯಿರುವ ಗುಂಪು. ಇನ್ನೂ ವಿವಿಧ ಧರ್ಮಿಯರ ಆಸಕ್ತಿಗಳು ಮತ್ತು ಭಾವನೆಗಳು ಪರಸ್ಪರ ವಿರೋಧವಾಗಿದ್ದು ಇತರ ಧರ್ಮಗಳ ದೇಶ ಮತ್ತು ಭೀತಿ– ಭೀತಿಯ ಗುಂಪೇ ತೀವ್ರ ಗಾಂಧೀ ಕೋಮುವಾದ. ಹೀಗೆ ರಾಜ ಪ್ರಭುತ್ವ ಮತ್ತು ವಸುಹಾತುಷಾಹಿಗಳ ಮಧ್ಯ ನಡೆದಿರುವ ವಿವಿಧ ರೀತಿಯ ಭಿನ್ನತೆಯ ಅಂಶಗಳು ಕೋಮುವಾದಕ್ಕೆ ಕಾರಣವಾಗಿದ್ದವು.

ಹಿಂದೂಗಳು ಈ ಭೂಮಿಯ ಮೂಲನಿವಾಸಿಗಳು. ಇಲ್ಲಿನ ಸಂಸ್ಕೃತಿ ಮತ್ತು ಸಮಾಜದ ನಿರ್ಮಾತೃಗಳು ಹಾಗಾಗಿ ಈ ರಾಷ್ಟ್ರ ಹಿಂದೂಗಳಿಗೆ ಸೇರಬೇಕು. ಇತರ ಎಲ್ಲಾ ಮತ ಧರ್ಮಗಳಿಗಿಂತಲೂ ಉನ್ನತ ಮೌಲ್ಯಗಳನ್ನು ಹೊಂದಿರುವ ಸಹನಶೀಲ ಹಿಂದೂಧರ್ಮದ ಸಹನೆಯನ್ನು ಅದರ ನ್ಯೂನ್ಯತೆ ಎಂದು ಪರಿಗಣಿಸಲಾಗುತ್ತದೆ. ಹೀಗಾಗಿಯೇ ಪರಕೀಯರು ಹಿಂದೂ ರಾಷ್ಟ್ರದ ಮೇಲೆ ಆಗಿಂದಾಗ್ಗೆ ಆಕ್ರಮಣ ಮಾಡುತ್ತಿದ್ದರು. ವಿಶೇಷವಾಗಿ ಮುಸ್ಲಿಂರ ನಂತರ ಬ್ರಿಟಿಷ್‌ರು, ಕ್ರಿಸ್ತರು ನಮ್ಮನ್ನು ಆಕ್ರಮಿಸಿಕೊಂಡಿದ್ದಾರೆ. ರಾಷ್ಟ್ರ ಎದುರಿಸುತ್ತಿರುವ ಪ್ರಸ್ತುತ ಹಾಗೂ ಭವಿಷ್ಯದ ಎಲ್ಲಾ ಅಪಾಯಗಳನ್ನು ಎದುರಿಸಿ ಹೋರಾಡುವ ಸಾಮರ್ಥ್ಯವನ್ನು ಹಿಂದೂಗಳು ತಡೆಯಬೇಕು.

ಪರಕೀಯರ ಆಕ್ರಮಣದ ಪರಿಣಾಮವಾಗಿ ಭಾರತ ವಿವಿಧ ಸಂಸ್ಕೃತಿಗಳ ದೇಶ ಎಂಬ ಭ್ರಮೆಯನ್ನು ಸೃಷ್ಟಿಸಲಾಗುತ್ತದೆ. "ಹಿಟ್ಲರ್ ಮತ್ತು ಅವನ ನೌಕಾ ಪಡೆಗಳೇ ಆರ್.ಎಸ್.ಎಸ್ ಸ್ಥಾಪನೆಗೆ ಪ್ರೇರಣೆಯಾಗಿತ್ತು. ಪ್ರಾರಂಭದಲ್ಲಿ ಭೂಮಾಲಿಕರು, ವರ್ತಕರು ಮತ್ತು ಅಧಿಕಾರಿಶಾಹಿಗಳೇ (ಬ್ರಾಹ್ಮಣರು ಮತ್ತು ಬನಿಯಾಗಳು) ಬೆಂಬಲ ನೀಡಿದ್ದರು. ಆರ್.ಎಸ್.ಎಸ್ ಸಿದ್ಧಾಂತ ಮುಸ್ಲಿಂರನ್ನು ಹಿಂದೂಗಳ ಪ್ರಥಮ ಶತ್ರು ಎಂದೇ ಬಿಂಬಿಸುತ್ತದೆ. ಗಾಂಧೀಜಿಯವರ ಸಂಯುಕ್ತ ರಾಷ್ಟ್ರೀಯತೆಯನ್ನು ಆರ್.ಎಸ್.ಎಸ್ ಒಪ್ಪಲಿಲ್ಲ. ಇದರ ಸಿದ್ದಾಂತವು ರಾಜ ಮಹಾರಾಜರುಗಳ ಕಾಲವನ್ನೇ ವೈಭವಿಕರಿಸುತ್ತದೆ. ಪುರಾಣಗಳಿಗೆ ಐತಿಹಾಸಿಕ ಲೇಪನ ನೀಡುವುದರ ಮೂಲಕ ಸಮಾಜವನ್ನು ಕೋಮುಭಾವನೆಗಳಿಗೆ ಒಳಪಡಿಸುತ್ತದೆ."[3]

ಈ ಎರಡು ಅಂಶಗಳನ್ನು ಗಮನಿಸಲಾಗಿ ಕೋಮುವಾದದ ಬಗೆಗೆ ಬೇರೂರಿದ್ದ ಅಂಶಗಳನ್ನು ತಿಳಿಯಬಹುದು. ಗಾಂಧೀಜಿಯವರು ಕೋಮುವಾದಿ ಶಕ್ತಿಗಳ ವಿರುದ್ಧ ಸಿಡಿದೆದ್ದು ಕೊನೆಗೆ ಹತ್ಯೆಯಾದರು. ಏನೇ ಇರಲಿ ಭಾರತದಲ್ಲಿ ನೆಯೂರಿರುವ ಧರ್ಮಗಳು ಕೋಮು ಸೌಹಾರ್ದತೆಯ ಭಾವನೆಗಳನ್ನು ಬೆಳೆಸಿಕೊಂಡು ಬಂದಿರುವದರಿಂದಲೇ ಕೋಮು ಸೌಹಾರ್ದತೆ ಎಂಬ ಚಿಂತನೆಗಳು ಮಂಥನಗಳಾಗಿ ರೂಪಗೊಳ್ಳುತ್ತವೆ.

**೩.೨ ಕೋಮು ಸೌಹಾರ್ದತೆಯ ಅರ್ಥ ಮತ್ತು ವ್ಯಾಖ್ಯಾನ :**

ಕೋಮು ಸೌಹಾರ್ದತೆ ಎಂದರೆ ಯಾವುದೇ ಎರಡು ಧರ್ಮಗಳ ಅಥವಾ ಪ್ರಮುಖ ಕೋಮುಗಳ ನಡುವೆ ಇರುವ ನಂಬಿಕೆ. ವಿಶ್ವಾಸ ಹಾಗೂ ವಾಸ್ತವಿಕ ಚಿಂತನೆಗಳ ಬಗೆಗೆ ಆಸಕ್ತಿ ಮೂಡಿಸುವುದು. ಪ್ರತಿಯೊಂದು ಕೋಮುವಿನಲ್ಲಿರುವ ಪ್ರತ್ಯೇಕವಾದ ಸಮುದಾಯ ಪ್ರಜ್ಞೆಯನ್ನು ಹೋಗಲಾಡಿಸುವುದು. ಜಾತಿ, ಮತ, ಪಂಥ ಹಾಗೂ ಧರ್ಮಗಳನ್ನು ಮೀರಿ ನಿಂತು ಸರ್ವರಲ್ಲಿ ಸಹಕಾರ, ಸೌಹಾರ್ದತೆಯನ್ನು ಬೆಳೆಸುವುದೇ ಕೋಮುಸೌಹಾರ್ದತೆ.

ಅರಬಸ್ತಾನದ ಸಂಸ್ಕೃತಿಯೊಂದು ಹಿಂದುಸ್ತಾನದ ಸಂಸ್ಕೃತಿಯ ಜೊತೆ ಇಂದು ಬೆರೆತು ಒಂದಾಗಿದೆ. ದೇಶದ ಪ್ರಜೆಗಳಾಗಿ, ಸಹೋದರರಾಗಿ ಒಬ್ಬರಿಗೊಬ್ಬರು ಅರಿತು ಹಿತದಿಂದ ಬಾಳುತ್ತಿದ್ದಾರೆ. ರಾಮ – ರಹೀಂ, ಅಲ್ಲಾ–ಶಿವ ಎನ್ನುತ್ತ ಹಿಂದೂ–ಮುಸ್ಲಿಂರಿಬ್ಬರೂ ಹಳ್ಳಿಗಳಲ್ಲಿ ಒಂದೇ ಮನೆಯವರಂತೆ ಬದುಕುತ್ತಿದ್ದಾರೆ. ಮೊಹರಂ ಆಚರಣೆಯಂತಹ ಕಾಲದಲ್ಲಿ ಕೋಮು ಸೌಹಾರ್ದತೆಯನ್ನು ಮನಗಾಣಬಹುದು. ಹಿಂದೂಗಳು ಇದರಲ್ಲಿ ಜಾತಿಭೇದವನ್ನು ಮರೆತು ಒಂದಾಗಿ ಉತ್ಸಾಹದಿಂದ ಆಚರಿಸುವಲ್ಲಿ ಇದು ಸ್ಪಷ್ಟವಾಗುತ್ತದೆ. ದಿನವಿಡಿ ಅಲಾವಿ ನೃತ್ಯ, ಮೊಹರಂ ಹಾಡುಗಳನ್ನು ಹೇಳುತ್ತಾ ಭೇದಭಾವವನ್ನು ಮರೆತು ಒಂದಾಗುವರು. ಪರಕೀಯ ಸಂಸ್ಕೃತಿಯೆನ್ನುವ ಕಲ್ಪನೆ ಯಾರ ಮನಸ್ಸಿನಲ್ಲೂ

ಆಗ ಮೂಡುವುದೇ ಇಲ್ಲ. ಪಂಜಾ ಹಿಡಿದ ವ್ಯಕ್ತಿ ಮುಸ್ಲಿಂನಾದರೆ, ಆತನ ಟೊಂಕ ಹಿಡಿಯುವ ವ್ಯಕ್ತಿ ಹಿಂದೂ ಆಗಿರುತ್ತಾನೆ.

"ಇದು ಅವರಿಬ್ಬರ ನಡುವೆ ಎದ್ದು ಕಾಣುವ ಸೌಹಾರ್ದತೆಯ ಸಂಕೇತ. ಕೆಲವು ಹಳ್ಳಿಗಳಲ್ಲಿ ಮುಸ್ಲಿಂರು ಇಲ್ಲವಾದರೂ ಈ ಆಚರಣೆಯನ್ನು ಹಿಂದೂಗಳು ಚಾಚೂ ತಪ್ಪದೆ ಆಚರಿಸಿಕೊಂಡು ಬರುತ್ತಿರುವ ನಿದರ್ಶನಗಳುಂಟು. ಪೀರಗಳಿಗೆ ದಿನವಿಡೀ ನೈವೇದ್ಯ ಸಮರ್ಪಣೆ ನಡೆಯುತ್ತದೆ. ಮನೆ ಮನೆಗೆ ಪಂಜಾಗಳ ಮೆರವಣಿಗೆ ಬಂದಾಗ ನೀರು ನೀಡಿ ತಮ್ಮ ಮನೆಗೆ ಬರಮಾಡಿಕೊಳ್ಳುತ್ತಾರೆ. ಆ ಪೀರಗಳಲ್ಲಿ ಹರಕೆ ಹೊರುತ್ತಾರೆ. ಈಡೇರಿದರೆ ಅವುಗಳಿಗೆ ಛತ್ರಿ – ಚಾಮರ, ದೀಪಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ರಂಜಾನ್ ಹಬ್ಬದಂದು 'ಈದ್/ಮುಬಾರಕ್' ಹೇಳುವ, ಅವರ ಮನೆಗೆ ಹೋಗಿ ಸುರಕುಂಭ ಕುಡಿಯುವ ಪರಂಪರೆ ಈಗಲೂ ಬಳಕೆಯಲ್ಲಿದ್ದು ಇಬ್ಬರ ನಡುವಿನ ಬಾಂಧವ್ಯಗಳನ್ನು ಹೆಚ್ಚಿಸಿವೆ."

೧. ಸೌಹಾರ್ದತೆ ಎಂದರೆ ಬಹುಮುಖಿಯತೆಯನ್ನು ಹೊಂದಿರುವುದಾಗಿದೆ.
೨. ಇದು ಭಾರತದಂಥ ಸಮಾಜದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ತರುವುದಾಗಿದೆ.
೩. ಭಾರತದಲ್ಲಿರುವ ಭಾಷೆ, ಊಟ ಉಡುಗೆ, ಚಿಂತನೆಗಳ ವೈವಿಧ್ಯತೆಯನ್ನು ಎತ್ತಿತೋರಿಸುವುದರ ಮೂಲಕ ಪ್ರಾದೇಶಿಕ ಅಸಮತೋಲನವನ್ನು ತೊಲಗಿಸುವುದಾಗಿದೆ.
೪. ಧರ್ಮ – ಧರ್ಮಗಳ ನಡುವೆ ಇರುವ ಕಂದಕವನ್ನು ಹೋಗಲಾಡಿಸುವುದು.
೫. ತಮ್ಮ ಧರ್ಮ ಶ್ರೇಷ್ಠ, ಅನ್ಯ ಧರ್ಮ ಕನಿಷ್ಠ ಎಂಬ ಭಾವನೆಯನ್ನು ಬುಡಸಹಿತ ಕಿತ್ತಿ ಹಾಕುವುದು.
೬. ಸರ್ವಧರ್ಮೀಯರು ಒಂದೇ ಎಂಬ ಭಾವನೆಯನ್ನು ತರುವುದಾಗಿದೆ.
೭. ಹಿಂದೂ, ಮುಸಲ್ಮಾನ್ ಹಾಗೂ ಕ್ರಿಶ್ಚಿಯನ್ ಧರ್ಮಗಳಲ್ಲಿ ಹಾಗೂ ಅದರ ಗ್ರಂಥಗಳಲ್ಲಿರುವ ಮಾನವೀಯ ಮೌಲ್ಯಗಳನ್ನು ಸಮಾಜದ ಜನತೆಯಲ್ಲಿ ತರುವುದು.
೮. ದೇಶ, ಭಾಷೆ, ಜನಾಂಗ, ನಾಡು– ನುಡಿಯನ್ನು ಒಂದಾಗಿಸುವುದು.
೯. ಕೋಮುವಾದಗಳನ್ನು ಬದಿಗೊತ್ತಿ ಸೌಹಾರ್ದತೆಯ ಮನೋಭಾವನೆಯನ್ನು ತುಂಬುವುದು.
೧೦. ರಾಮ – ರಹೀಮ್ ಎಂಬ ದೇವರುಗಳನ್ನು ಒಂದಾಗಿ ಕಾಣುವುದು.

ಹೈದ್ರಾಬಾದ್ ಕರ್ನಾಟಕವು, ಕರ್ನಾಟಕದ ಉಳಿದ ಪ್ರದೇಶಗಳಿಗಿಂತ ಸಾಹಿತ್ಯ, ಧರ್ಮ, ಸಮಾಜ, ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಬಹುಮುಖಿ ಚಿಂತನೆಯನ್ನು ಒಳಗೊಂಡಿದೆ. ಸಾಹಿತ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಭದ್ರ ಬುನಾದಿಯಾದರೆ, ಧರ್ಮದ ದೃಷ್ಟಿಯಿಂದ ಮಾನವ ಪರ,

ಜೀವಪರ ಕಾಳಜಿಗಳನ್ನು ಒಂದೆಡೆ ತಂದಂತಹ ಕೀರ್ತಿ ಈ ಪ್ರದೇಶಕ್ಕೆ ಸಲ್ಲುತ್ತದೆ. ಸಮಾಜ ಮತ್ತು ಸಾಂಸ್ಕೃತಿಕವಾಗಿ ಈ ಪ್ರದೇಶವು ಕನ್ನಡ ನಾಡಿಗೆ ಕೊಟ್ಟ ಕೊಡುಗೆ ಅಮೂಲ್ಯವಾದದ್ದಾಗಿದೆ. ಆದರೆ ದುರಂತವೆಂದರೆ ಆರ್ಥಿಕ ಮತ್ತು ಶೈಕ್ಷಣಿಕವಾಗಿ ತೀರಾ ಹಿಂದುಳಿದ ಪ್ರದೇಶವೆಂಬ ಹಣೆ ಪಟ್ಟಿಯನ್ನು ಕಟ್ಟಿಕೊಂಡು ತೀರಾ ಹಿಂದುಳಿದಿರುವುದನ್ನು ಇಂದಿಗೂ ಕಾಣುತ್ತೇವೆ. ಈ ಪ್ರದೇಶವು ವಿಭಿನ್ನ ಧರ್ಮ, ವಿಭಿನ್ನ ಸಂಸ್ಕೃತಿ ಸಂಪ್ರದಾಯದ ಆಚರಣೆಗಳನ್ನು ಆಚರಿಸುವಂತ ಸಂಧರ್ಭದಲ್ಲಿ ಏಕತೆಯನ್ನು ಮೆರೆದಿದೆ.

ಈ ದೃಷ್ಟಿಯಿಂದಲೇ ಈ ಭಾಗವು ಹಲವಾರು ಸಮಾಜ ಚಿಂತಕರಿಂದ, ವಿಚಾರವಂತರಿಂದ ಬಹುಮುಖಿ ವೈಚಾರಿಕತೆಯನ್ನು ರೂಢಿಸಿಕೊಂಡು ಕೋಮು ಸೌಹಾರ್ದತೆಗೆ ಹೆಸರು ವಾಸಿಯಾಗಿದೆ. ಕೋಮು ಎಂದರೆ ಒಂದು ಸಮುದಾಯ. ಸೌಹಾರ್ದತೆಯೆಂದರೆ ಸಹಕಾರ. ಹೀಗೆ ಹಲವಾರು ಅರ್ಥಗಳನ್ನು ಪಡೆದುಕೊಂಡು ಈ ಎರಡು ಪದಗಳು ಸಮಾಜಿಕ ಹಾಗೂ ಧಾರ್ಮಿಕ ದೃಷ್ಟಿಯಿಂದ ಮಹತ್ವದವುಗಳಾಗಿವೆ. ಈ ಎರಡು ಪದಗಳನ್ನು ಕೂಡಿಸಿ ಹೇಳುವಂತ ಸಂಧರ್ಭದಲ್ಲಿ ಹೇಳುಗರ ಮತ್ತು ಕೇಳುಗರ ನಡುವೆ ಮಾನವೀಯ ಸಂಭಂಧಗಳು ಬೆಸೆದು, ಅವರವರ ನಡುವೆ ಪ್ರೀತಿ ಮತ್ತು ಸಹಕಾರವನ್ನುಂಟು ಮಾಡುತ್ತವೆ. ಅಷ್ಟೇ ಅಲ್ಲದೇ ವರ್ಗ, ವರ್ಣ, ಜಾತಿ ಮತ್ತು ಪಂಥಗಳನ್ನು ಮೀರಿ ಜನರ ನ್ನು ಒಂದೆಡೆ ಕಲೆಹಾಕುವ, ಅವರವರ ಭಾವನೆಗಳನ್ನು ಹಂಚಿಕೊಳ್ಳುವ, ವಿಚಾರಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಹೀಗೆ ಹತ್ತೆಂಟು ಭಾವನೆಗಳನ್ನು ಒಂದು ಗೂಡಿಸುವ ಪ್ರಯತ್ನವನ್ನು ಮಾಡುವುದೇ ಕೋಮು ಸೌಹಾರ್ದತೆಯ ಪರಿಕಲ್ಪನೆಯಾಗಿದೆ.

ಬೇರೆ ಬೇರೆ ಜಾತಿಯ ಮಹಿಮಾ ಪುರುಷರ ಸಮಾನ ಗುಣಗಳನ್ನು ಪಟ್ಟಿಮಾಡುವದು. ಭಿನ್ನ ವಿಭಿನ್ನ ಧರ್ಮ ಗ್ರಂಥಗಳಲ್ಲಿಯೂ ಸಮೀಕರಿಸುವದು ಎಂದು ಅರ್ಥ ಹಚ್ಚಲಾಗುತ್ತದೆ. ಇದರ ವಿಶ್ಲೇಷಣೆ ಕಾರ್ಯದಿಂದ ಯಾವ ನಾಡು ಉದ್ದಾರವಾಗುವದಿಲ್ಲ ಮನುಷ್ಯರನ್ನು ಮನುಷ್ಯರೇ ಅರ್ಥ ಮಾಡಿಕೊಳ್ಳುವಂತಾಗಬೇಕು. ಮಾನವೀಯತೆ ಅಂತಃಕರಣ ಪ್ರೀತಿ, ವಿಶ್ವಾಸಗಳಾಗಿ ಪುಟಿಯಬೇಕು. ಸಂಪೂರ್ಣತೆ, ಸಹನೆ ಸಹಕಾರ ಹೊಂದಿ ಆತ್ಮೀಯತೆಯಿಂದ ಒಗ್ಗೂಡಿ ಜೀವನ ನಿರ್ವಹಿಸಬೇಕು ಇದು ನಿಜವಾದ ಅರ್ಥದಲ್ಲಿ ಕೋಮು ಸೌಹಾರ್ಧತೆಯಾಗಿದೆ.

ಭಾರತವು ವಿವಿಧ ರಾಜ್ಯ, ಗ್ರಾಮ ಹಾಗೂ ವಿವಿಧ ಭಾಷೆ ಧರ್ಮಗಳ ಸಂಗಮವಾಗಿದೆ. ಹೀಗಾಗಿ ಈ ದೇಶವನ್ನು ಗ್ರಾಮಗಳ ದೇಶ ಎಂದು ಕರೆಯುತ್ತಾರೆ. ಈ ದೇಶದ ಉಳಿದ ರಾಜ್ಯಗಳಿಗಿಂತ ಹೈದ್ರಾಬಾದ್ ಕರ್ನಾಟಕ ಪ್ರದೇಶವು ಎಲ್ಲ ದೃಷ್ಟಿಯಿಂದಲೂ ವಿಭಿನ್ನವಾಗಿದೆ. ಗುಲ್ಬರ್ಗಾ, ಬೀದರ, ರಾಯಚೂರು ಹಾಗೂ ಭೌಗೋಳಿಕವಾಗಿ ಬಳ್ಳಾರಿಯನ್ನು ಹೊರತು ಪಡಿಸಿದರೆ ಕೊಪ್ಪಳ ಜಿಲ್ಲೆಯು ಕೋಮು ಸೌಹಾರ್ದತೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿರುವುದನ್ನು ಕಾಣುತ್ತೇವೆ. ಇಲ್ಲಿನ ಕೋಮು

ಸೌಹಾರ್ದತೆ ಇಂದು ನಿನ್ನೆಯದಲ್ಲ, ಬೌದ್ಧ ಧರ್ಮದ ಉಗಮದಿಂದ ಹಿಡಿದು ನಂತರ ಬಂದ ಎಲ್ಲ ಧರ್ಮಗಳ ಸಾಂಸ್ಕೃತಿಕ ಹಾಗೂ ಧಾರ್ಮಿಕ ಅನನ್ಯತೆಯನ್ನು ಕಂಡುಕೊಂಡು ಬಂದಿರುವದು ಗಮನಿಸುವ ಅಂಶ. ಏಕೆಂದರೆ ನಾವು ಹೀಗಾಗಲೇ ಹೇಳಿರುವಂತೆ ಭಾರತವು ಹಲವು ಧರ್ಮಗಳ ತವರೂರು, ಆದ್ದರಿಂದಲೇ ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ, ಕ್ರೈಸ್ತ ಹಾಗೂ ಇಸ್ಲಾಂ ಧರ್ಮಗಳು ತಮ್ಮ – ತಮ್ಮ ಧರ್ಮಗಳಲ್ಲಿರುವ ಮಾನವೀಯ ಮೌಲ್ಯಗಳನ್ನು ಕ್ರೋಢೀಕರಿಸಿ ಮನುಷ್ಯ–ಮನುಷ್ಯರ ವರ್ಗ ಭೇದ, ವರ್ಣಭೇದವನ್ನು ಮರೆತು ಸೌಹಾರ್ದತೆಯಿಂದ ಕೂಡಿ ಬಾಳಲು ಸಹಕರಿಸಿದವು.

ಅಷ್ಟೇ ಅಲ್ಲದೇ ಒಂದೊಂದು ಧರ್ಮಗಳು ತಮ್ಮ ಧರ್ಮಗ್ರಂಥವನ್ನು ರಚಿಸುವದರ ಮೂಲಕ ಆ ಗ್ರಂಥದಲ್ಲಿ ಸರ್ವರು ಸಮಾನತೆಯನ್ನು ಕಾಪಾಡುವಂತಹ ಅಂಶಗಳನ್ನು ಪ್ರತಿಪಾದಿಸಿದವು. ಹೀಗಾಗಿ ಒಂದೊಂದು ಧರ್ಮಗಳು ಸಾಂಸ್ಕೃತಿಕ ಕಾಳಜಿಗಳನ್ನು ಪ್ರಮುಖವಾಗಿಟ್ಟುಕೊಂಡು ಸೌಹಾರ್ದ ಭಾವನೆಯನ್ನು ಬೆಳಸಿದವು ಹಾಗೂ ಹಿತವನ್ನು ಬಯಸಿದವು. ಹೀಗಾಗಿ ರಾಜ್ಯದ ಪ್ರತಿಯೊಂದು ಭಾಗದ ಹಳ್ಳಿಗಳಲ್ಲಿ ನಡೆಯುವ ಹಬ್ಬ, ಆಚರಣೆ, ಸಂಪ್ರದಾಯ, ಜಾತ್ರೆಗಳು, ಉತ್ಸವ ಮುಂತಾದವುಗಳು ಎಲ್ಲ ಜನರನ್ನು ಒಂದೂಗೂಡಿಸುವ ನಿಟ್ಟಿನಲ್ಲಿ ಕೆಲಸವನ್ನು ಮಾಡುತ್ತಾ ಸಾಗಿವೆ. ಕಾರಣಗಳು ಹಲವಾರು ಹಿಂದೂ ಧರ್ಮದ ಅನಿಷ್ಟ ಪದ್ಧತಿಗಳ ವಿರುದ್ಧ ಸಿಡಿದೆದ್ದ ಬೌದ್ಧ ಧರ್ಮ, ಭಗವಾನ ಬುದ್ಧನಿಂದ ಪ್ರಾರಂಭಗೊಂಡು ಜನರಲ್ಲಿ ಶಾಂತಿ, ಕರುಣೆ ಮತ್ತು ಪ್ರಜ್ಞೆಯನ್ನು ಮೂಡಿಸಿದರೆ ಅದೇ ಕಾಲಕ್ಕೆ ಮಹಾವೀರನಿಂದ ಪುನಃ ಜೀವನ ಕಂಡ ಜೈನಧರ್ಮವು ಜನರ ಅಹಿಂಸೆ ಹಾಗೂ ತ್ಯಾಗ ಮನೋಭಾವನೆಯನ್ನು ತುಂಬಿತು.

೧೨ನೇ ಶತಮಾನದ ಸಂಧರ್ಭದಲ್ಲಿ ಕೋಮು ಸೌಹಾರ್ದತೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ ಧರ್ಮವೆಂದರೆ ವೀರಶೈವ ಧರ್ಮ. ಇದು ಸಮಾಜಿಕ ಮತ್ತು ಧಾರ್ಮಿಕವಾಗಿ ಆಂದೋಲನವನ್ನು ಕೈಗೊಳ್ಳುವದರ ಮೂಲಕ ಮಾನವರೆಲ್ಲರೂ ಒಂದೇ ಎಂಬ ಸಿದ್ಧಾಂತವನ್ನು ಮಂಡಿಸಿತು. ಅಷ್ಟೇ ಅಲ್ಲದೇ ಯಾವುದೇ ಧರ್ಮ ಜಾತಿ, ಪಂಥ ಎಂಬುದನ್ನು ಮರೆತು ಜೀವಪರ ಚಿಂತನೆಗೆ ದಾರಿ ಮಾಡಿ ಕೊಟ್ಟಿತು. ಹೀಗಾಗಿ ೧೨ನೇ ಶತಮಾನವು ಸಾಮಾನ್ಯ ಜನರ ಸುವರ್ಣಯುಗವೆಂದೇ ಕರೆಯಿಸಿಕೊಂಡಿತು. ಅದೇ ಕಾಲದಲ್ಲಿ ಶೈವ ಧರ್ಮ ಸಾಂಸ್ಕೃತಿಕ ಕಾಳಜಿಗೆ ಹೆಚ್ಚು ಹೊತ್ತು ಕೊಟ್ಟು ಈ ನಾಡಿನ ಸೌಹಾರ್ದತೆಯನ್ನು ಹೆಚ್ಚಿಸುವಲ್ಲಿ ಶ್ರಮಿಸಿತು. ಹೀಗಾಗಿ ಕೋಮು ಸೌಹಾರ್ದತೆ ಎಂಬ ಪದವು ನಾನು ಎಂಬ ಅಹಂಕಾರವನ್ನು ತ್ಯಜಿಸಿ ನಾವು ಎಂಬ ಚಿಂತನೆಯನ್ನು ಮುಂದಿಡುವುದರ ಮೂಲಕ ಜನರಲ್ಲಿ ತಳಪಾಯವಾಗಿದ್ದ ಅಂಧ ನೀತಿ ಕರುಣೆಯನ್ನು ಹೊಡೆದೋಡಿಸಿ ಸಹಕಾರ ಭಾವನೆಗಳನ್ನು ತುಂಬುವ ಪ್ರಯತ್ನ ನಿಜಕ್ಕೂ ಶ್ಲಾಘನೀಯವಾಗಿದೆ.

ಕೋಮು ಸೌಹಾರ್ದತೆ ನಡೆದುಬಂದ ಅಥವಾ ಬೆಳೆದುಬಂದ ಹಾದಿ, ಎಂಬ ಶಿರ್ಷಿಕೆಯನ್ನೇ ಗಮನಿಸಿದಾಗ ನಮಗೆ ಮುಖ್ಯವಾಗಿ ತಂಡ ಹಾಗೂ ತಾಣಗಳ ಪರಿಕಲ್ಪನೆ ಅತ್ಯವಶ್ಯಕವಾಗಲಿದೆ. ಹೈದ್ರಾಬಾದ ಕರ್ನಾಟಕದ ವಿವಿಧ ಜಿಲ್ಲೆಯ, ವಿವಿಧ ತಾಲೂಕುಗಳ, ವಿವಿಧ ಸ್ಥಳಗಳನ್ನು ಅಧ್ಯಯನ ಮಾಡಿದಾಗ ಸರ್ವ ಸಮಾನತೆಯ ಹಾಗೂ ಸೌಹಾರ್ದತೆಯ ಭಾವನೆಯನ್ನು ಬೆಳೆಸುವಲ್ಲಿ ಅನೇಕ ಸಾಧು – ಸಂತ ಶಿವಶರಣರು ಹಾಗೂ ಸೂಫಿ ಸಂತರು ತಮ್ಮದೇ ಆದ ಪ್ರಯತ್ನವನ್ನು ಮಾಡಿ ನಮ್ಮಿಂದ ಕಣ್ಮರೆಯಾಗಿದ್ದಾರೆ. ಅಷ್ಟೆ ಅಲ್ಲದೇ ಕೋಮು ಸೌಹಾರ್ದತೆಗೆ ನಾಂದಿಯಾಡಿದ್ದಾರೆ. ನಾವು ಅಧ್ಯಯನದ ದೃಷ್ಟಿಯಿಂದ ಕೋಮು ಸೌಹಾರ್ದತೆಯ ತಂಡಗಳನ್ನು ತೆಗೆದುಕೊಂಡಾಗ ಧರ್ಮ ಪ್ರಮುಖ ಪಾತ್ರವಹಿಸುತ್ತದೆ. ಹೀಗಾಗಿ ಸುರಪುರ ತಾಲೂಕಿನ ತಿಂಥಿಣಿ ಮೌನೇಶ್ವರ, ಕೊಡೇಕಲ್ಲ ಬಸವಣ್ಣ, ಶಿರಸಪ್ಪಯ್ಯ, ಗುಲ್ಬರ್ಗಾದ ಶ್ರೀ ಖಾಜಾ ಬಂದೇ ನವಾಜ, ಮಂಟೇಸ್ವಾಮಿ ಮುಂತಾದವರನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಹಲವಾರು ಧರ್ಮಗಳ ಸಮನ್ವಯತೆಯನ್ನು ಹೊಂದಿದ ಈ ಪ್ರದೇಶವು ವಿಭಿನ್ನ ಸಂಸ್ಕೃತಿಯ ಸಂಪ್ರದಾಯ ಆಚರಣೆಗಳನ್ನು ಅನುಸರಿಸುತ್ತಾ ವಿಭಿನ್ನತೆಯಲ್ಲಿ ಏಕತೆಯನ್ನು ಮೆರೆದು ಈ ಭಾಗವು ಕೋಮು ಸೌಹಾರ್ದತೆಗೆ ಹೆಸರಾಗಿದೆ.

ಹೀಗಾಗಿ ಅನೇಕ ಕೋಮು ಸೌಹಾರ್ದತೆ ತಾಣಗಳು ಸರ್ವ ಸಮಾನತೆ, ಸಹೋದರತೆ, ಸಹಕಾರ ಮನೋಭಾವನೆಗಳನ್ನು ಪ್ರತಿಪಾದಿಸುವ ಸಂಕೇತಗಳಾಗಿವೆ. ಹೈದ್ರಾಬಾದ ಕರ್ನಾಟಕದ ವಿವಿಧ ಸ್ಥಳಗಳಾದ, ತಿಂಥಣಿ ಮೌನೇಶ್ವರ, ಕೊಡೇಕಲ್ಲ ಬಸವಣ್ಣ, ಯಾನಾಗುಂದಿ ಮಾತೆ ಮಾಣಿಕೇಶ್ವರಿ, ಹಲಕಟ್ಟಿಯ ವೀರಭದ್ರೇಶ್ವರ ಹಾಗೂ ಸೂಫಿ ಸಂತರ ಉರುಸ್, ಖ್ವಾಜಾ ಬಂದೇ ನವಾಜ್, ಶ್ರೀ ಶರಣಬಸವೇಶ್ವರ, ಲಾಡ್ಲೆ ಮಶಾಕ, ನೀಲೂರು ಮೈಹಬೂಬ ಸುಬಾನಿ, ಲಾಡ್ಲ ಮಶಾಖ ಜೇವರ್ಗಿ ಕೂಡಿ ಬಾಬ ಸಾಹೇಬ ಭಟರ್ಕಿ, ಬಾವಸಾಬ ಹಿರೇಜೇವರ್ಗಿ ರಾಜಾ ಒಕ್ಸರ್, ಗೋನಾಳ ಮೊನಪಯ್ಯ ಶೇಖ ಜಿಂದಾವಲಿ, ದ್ಯಾಗಾಯಿ, ರಾಜಾ ಬಕ್ಸರ್ ಬಸವಕಲ್ಯಾಣ, ಅಷ್ಟುರಿನ ಅಲ್ಲಮಪ್ರಭು ಘೋಡವಾಡದ ಇಸ್ಮಾಮಿಲ್ ಖಾದ್ರಿ ಹೀಗೆ ಈ ಭಾಗದ ಹಲವು ಸ್ಥಳಗಳು ಕೋಮು ಸೌಹಾರ್ದತೆಗೆ ಹೆಸರು ಪಡೆದುಕೊಂಡಿವೆ. ಇಂದಿಗೂ ಪ್ರತಿನಿತ್ಯದ ಜೀವನದಲ್ಲಿ ವಿವಿಧ ಸಂಸ್ಕೃತಿಯ ಮೌಲ್ಯಗಳನ್ನು ಅಳವಡಿಸಿಕೊಂಡು ಬಾಳುತ್ತಿರುವುದು ಸಂತಸದ ಸಂಗತಿಯಾಗಿದೆ. ಇಂತಹ ತಾಣಗಳು ಕೋಮು ಸೌಹಾರ್ದತೆಯ ಪ್ರತೀಕಗಳಾಗಿರುವುದು ನಿಜಕ್ಕೂ ಅಭಿಮಾನ ಪಡಬೇಕಾಗಿದೆ. ಈ ಭಾಗದಲ್ಲಿ ನಡೆಯುವ ಜಾತ್ರೆ ಹಾಗೂ ಉರುಸ್ಸುಗಳಲ್ಲಿ ಕೋಮು ಸೌಹಾರ್ದತೆಗೆ ಅತಿ ಮಹತ್ವ ನೀಡಿ ಹೆಸರುವಾಸಿಯಾಗಿದ್ದಾರೆ.

**೩.೩.೧ ಕೊಡೇಕಲ್ ಬಸವಣ್ಣ**

**೩.೩.೨ ಖಾಜಬಂದೇನವಾಜುಖ**

**೩.೩.೩ ತಿಂಥಿಣಿ ಮೋನಪ್ಪಯ್ಯ**

**೩.೩.೪ ಮಂಟೇಸ್ವಾಮಿ**

**ಕೊಡೇಕಲ್ ಬಸವಣ್ಣ**

ಸಾವಿರಾರು ವರ್ಷಗಳ ಸುಧೀರ್ಘ ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ನಮ್ಮ ನಾಡು ದಾಸರ, ಶರಣರ, ಸಂತರ ನೆಲೆಯಾಗಿದೆ. ಸಾಧರು – ಸತ್ಪುರಷರು ನೈತಿಕ ಮೌಲ್ಯಗಳ ದೂರದೃಷ್ಟಿಯನ್ನಿಟ್ಟುಕೊಂಡು ಜನ್ನ ತಾಳಿದವರಲ್ಲಿ ಶ್ರೀ ಕೊಡೇಕಲ್ಲ ಬಸವಣ್ಣನವರು ಒಬ್ಬರು. ತತ್ವ ಹಾಗೂ ದಾರ್ಶನಿಕರಾದ ಬಸವಣ್ಣನವರು ಸಾಂಸ್ಕೃತಿಕ ನಾಯಕರಾಗಿದ್ದಾರೆ. ಕೊಡೇಕಲ್ ಮುನಿ ಎಂಬ ಬಿರುದಿನಿಂದ ಪ್ರಖ್ಯಾತರಾದ ಕೊಡೇಕಲ್ ಬಸವಣ್ಣನವರು ಸಿದ್ದಿ ಪುರುಷರಲ್ಲಿ ಒಬ್ಬರು. ೧೫–೧೬ನೇ ಶತಮಾನದ ಸಂಧರ್ಭದಲ್ಲಿ ಸೌಹಾರ್ದ ಭಾವನೆಯನ್ನು ತುಂಬುವ ಚಿಂತನೆಯನ್ನು ಮೈಗೂಡಿಸಿಕೊಂಡ ಬಸವಣ್ಣನವರು ಕಾಲಜ್ಞಾನ ಚಿಂತನೆಯ ಮಹಾಪುರುಷರು ಇವರು ನೆಲೆಸಿರುವ ಸ್ಥಳ ಕೊಡೇಕಲ್ಲ, ಈತನೂ ಹಂಪಿಯ ನೆಲೆಯಿಂದ ಬಂದನು ಎಂಬ ವಿಚಾರ ತಿಳಿದು ಬಂದಿದೆ. ಕಲ್ಯಾಣ ಪರಂಪರೆಯಲ್ಲಿ ಕೊಡೆಕಲ್ಲಿನ ಕವಿ–ಸಾಧಕರು ಕಡೆಕಲ್ಯಾಣವೆಂದು ಕರೆದುಕೊಂಡರು. ಹೀಗಾಗಿ ಈ ತಾಣವು ಅಮರ ಕಲ್ಯಾಣ, ಧರ್ಮಕಲ್ಯಾಣ ಎಂಬ ಎರಡು ಕಲ್ಯಾಣಗಳ ತಳಪಾಯವಾಗಿದೆ. ಹೀಗಾಗಿ ಜನಪದರು ಅಲ್ಲಿನ ವಾಸ್ತವ ಸ್ಥಿತಿಯನ್ನು ಕಂಡು ಹೀಗೆ ಆಡಿದ್ದಾರೆ.

"ಆ ಕಲ್ಲು ಈ ಕಲ್ಲು ಹಸಿರ ಹಳದಿಯ ಕಲ್ಲೆ
ಹೆಸರಾದ ಕಲ್ಲ ಕೊಡೆಯಕಲ್ಲ। ಬಸವಣ್ಣ ಹಸಿರು
ಗಲೀಫ ಹೊಲಿಸೀನ
ಕೋಡಿಯ ಏರ್‍ಯಾವ ಕೊಡೆಕಲ್ಲ ಬಸವ ನಿಮಗೆ"[3]

ಎಂಬ ಈ ಹಾಡನ್ನು ಗಮನಿಸಿದಾಗ ಬಸವನ ಸಿದ್ಧಾಂತದ ಮೌಲ್ಯವು ಅರಿವಿಗೆ ಬರುತ್ತದೆ. ಇಂತಹ ಬಸವಣ್ಣನ ಕುರಿತು ಅಧ್ಯಯನ ಮಾಡುವಂತಹ ಸಂಧರ್ಭದಲ್ಲಿ ಅವರ ಜೀವನ, ಅವರ ವೃತ್ತಾಂತ, ಅವರ ಕುಟುಂಬ, ಅವರ ಶಿಷ್ಯ ಪರಂಪರೆ, ಆಚರಣೆಗಳು ಇನ್ನೂ ಮುಂತಾದವುಗಳನ್ನು ತಿಳಿದುಕೊಳ್ಳುವುದು ಮುಖ್ಯವೆನಿಸುತ್ತದೆ.

ಗೌರಿ ಮತ್ತು ದವನದ ಹುಣ್ಣಿಮೆಯ ಮರುದಿವಸ ನಡೆಯುವ ಈ ಜಾತ್ರೆ ಹಿಂದೂ ಮುಸ್ಲಿಂರ ಭಾವೈಕ್ಯತೆಯಿಂದ ಜರುಗುತ್ತದೆ. ಕಾಲಜ್ಞಾನ ಎಂಬುದೇ ಒಂದು ಪರಂಪರೆ. ಈ ಪರಪರೆಯ ಮೂಲಕ ಸೌಹಾರ್ದತಗೆ ಒತ್ತುಕೊಟ್ಟ ಬಸವಣ್ಣ ಯಾವುದೇ ರೀತಿಯ ಇಷ್ಟಲಿಂಗ ಪ್ರಾಣಲಿಂಗ ಆರಾಧಕರಾಗಿ ಕಂಡು ಬಂದಿದ್ದಾರೆ. ಇಂತಹ ಬಸವಣ್ಣನು ರಾಯಚೂರು ಜಿಲ್ಲೆಯ ಸಿಂಧನೂರ ತಾಲೂಕಿನ ಸಿದ್ದರಾಮಪುರಕ್ಕೆ ಬಂದಿರುವ ಇತಿಹಾಸ ಹೊಸದಾಗಿ ಕಾಣಿಸಿಕೊಂಡಿದೆ. ಇದಕ್ಕೆ ನಿದರ್ಶನವೆಂದರೆ "ಶರಣರ ವಾಸಸ್ಥಳವಾಗಿರುವ ಸಿದ್ಧರಾಮಪುರದಲ್ಲಿ ಹಿಂದೆಯೇ ಆಗಿ ಹೋದ ಚರಿತ್ರೆಯು ಹೀಗಿರುತ್ತಿರಲು ಒಂದಾನೊಂದು ದಿವಸ ಕೋರಿಶೆಟ್ಟರ ಕಟ್ಟಿಯ ಮೇಲೆ ವಿರುಪಯ್ಯ ತಾತನವರು ತಮ್ಮ

ಭಕ್ತ ಸಮೂಹದೊಂದಿಗೆ ಕುಳಿತಿರುವ ಸಮಯದಲ್ಲಿ ಶ್ರೀ ಹಠಯೋಗಿ ಕೊಡೇಕಲ್ಲ ಬಸವಯ್ಯ ಶಿವಶರಣರ ಆಗಮನ. ಬಸವಣ್ಣನವರು ಬತ್ತಲ ಕುದುರೆಯನ್ನೇರಿ ಆಗಮಿಸಿದ ಶಿವಶರಣರನ್ನು ಕಂಡು ಗುರುವರ್ಯರಿಗೆ ವಿರುಪಯ್ಯ ತಾತನವರು ತಮ್ಮದು ಯಾವ ಊರು ತಾವು ಯಾರು ಎಂದು ಕೇಳಿದರು.

ನಮ್ಮದು ಕೊಡೇಕಲ್. ನಾನು ಜಂಗಮ, ನನ್ನ ಹೆಸರು ಬಸಪ್ಪಯ್ಯನೆನ್ನುವರು. ನೀನು ನಾಲ್ಕೈದು ವರ್ಷಗಳ ಹಿಂದೆ ಕಾಶಿಗೆ ಬಂದಾಗ ನಮ್ಮೂರಿಗೆ ಬರಬೇಕೆಂದು ಕೇಳಿಕೊಂಡಿದ್ದಿರಿ ಇಲ್ಲಿಯ ವರೆಗೆ ನನಗೆ ಬರಲಿಕ್ಕೆ ಅನುಕೂಲವಾಗದ ಕಾರಣ ಬರಲಿಲ್ಲ. ಈಗ ನಮಗೆ ಸಮಯ ಕೂಡಿ ಬಂತು ಬಂದೆವು ಎಂದು ಹೇಳಲು ವಿರುಪಯ್ಯ ತಾತನವರು, ಇವರ ಮರ್ಮವನ್ನರಿತು ಗುರುದೇವಾ, ನನ್ನನ್ನು ತಮ್ಮ ಶಿಷ್ಯನನ್ನಾಗಿ ಅಂಗೀಕರಿಸಬೇಕೆಂದು ಸಾಷ್ಟಾಂಗವೆರಗಿದರು.

ಆಗ ಕೊಡೇಕಲ್ ಬಸಪ್ಪಯ್ಯ ತಾತನವರು ವಿರುಪಯ್ಯ ತಾತನವರನ್ನು ತಮ್ಮ ಶಿಷ್ಯನನ್ನಾಗಿ ಅಂಗೀಕರಿಸಿದರು. ಇವರೀರ್ವರು ಕೂಡಿ ಪಾಪಸಕಳ್ಳಿ ಬೆಳೆದ ಜಾಗದಲ್ಲಿ ನಿಂತು ದೇವ, ಡಮುರುಗ (ಡೊಳ್ಳು) ಬಾರಿಸಲು ಹೇಳುತ್ತಿದ್ದರು. ಈ ಶರಣರು ಊರು ಕೊಡೇಕಲ್ ಎಂಬುದು ಇವರ ವಾಣಿಯಿಂದಲೇ ತಿಳಿದುಬಂದಿರುತ್ತದೆ.

ಇವರ ಕಾಲಾಂತರದಲ್ಲಿ ಇವರ ಸಂಬಂಧಿಕರು ಇದ್ದಾರೆ. ಆದರೆ ಇವರು ಯಾರ ಮನೆಯವರು ಇವರ ತಂದೆ-ತಾಯಿಗಳು ಯಾರೆಂಬುದನ್ನು ಶೋಧಿಸಿದರೂ ಗೊತ್ತಾಗಿಲ್ಲ. ಇವರ ಫೋಟೊ ತೆಗೆದರೂ ಇವರ ಭಾವ ಚಿತ್ರ ಎಷ್ಟು ಪ್ರಯತ್ನ ಮಾಡಿದರು ಛಾಯಾಚಿತ್ರ ಮೂಡಿರುವದಿಲ್ಲ. ಈ ಶಿವಶರಣರು ಅಂತಹ ಮಹಾಮಹಿಮರು ಹಠಯೋಗಿಗಳು, ಭವರೋಗ ವೈದ್ಯರು. ಹಿಮ್ಮುಖದಿ ಕುಳಿತು ಕುದುರೆ ನಡೆಸಿದವರು. ಗುರುವಿನ ಗುರು ಶ್ರೀ ಕೊಡೇಕಲ್ ಬಸಪ್ಪಯ್ಯ ತಾತನವರು ಹರನಾಜ್ಞೆ ಪಡೆದು ಧರೆಗೆ ನರರ ಉದ್ಧಾರಕ್ಕಾಗಿ ಬಂದ ಮಹಾಶಿವಶರಣರು. ೧೨ ನೇ ಶತಮಾನದ ಪರಿಕಲ್ಪನೆ ಮರುಹುಟ್ಟು ಪಡೆದ ದೈವತ್ವ ಇಲ್ಲಿ ಪ್ರಮುಖವಾಗಿದೆ. ಒಂದು ಕಡೆ ಅಂಗ ಮತ್ತೊಂದು ಕಡೆ ಲಿಂಗ ಎನ್ನುವ ಫಕೀರರು, ಅಷ್ಟೇ ಮುಖ್ಯ ಎನ್ನುವ ಪರಂಪರೆಗೆ ಸೇರಿದ ಕೊಡೇಕಲ್ ಬಸವಣ್ಣನವರ ಪರಂಪರೆ. ಈ ಬಸವಣ್ಣನವರ ಪರಂಪರೆಯಲ್ಲಿ ಅವರ ಮಂದಿರಗಳಲ್ಲಿ ಪೂಜಿಸಲ್ಪಡುವ ಸ್ಥಳದಲ್ಲಿ ಯಾವುದೇ ರೀತಿಯ ಮೂರ್ತಿಗಳಿರುವುದಿಲ್ಲ. ಅಂದರೆ ಸಮಾಧಿ ಮತ್ತು ಗದ್ದುಗೆಗಳೇ ಪ್ರಮುಖವಾಗಿ ಪೂಜಿಸಲ್ಪಡುತ್ತವೆ.

**ಮನೆತನದ ಹಿನ್ನಲೆ :**

ಸುರಶೆಟ್ಟಿ ಮನೆತನದ ಮಲ್ಲಿಶೆಟ್ಟಿ ಮತ್ತು ಲಿಂಗಮ್ಮ ಎಂಬ ದಂಪತಿಗಳ ಮಗನಾಗಿ ಕೊಡೆಕಲ್ಲ ಬಸವಣ್ಣನವರು ಜನಿಸಿದರು ಎಂದು ಕೆಲವರು ಅಭಿಪ್ರಾಯ ಪಟ್ಟರೆ ಇನ್ನೂ ಕೆಲವರು ಲಿಂಗಮ್ಮ ಮತ್ತು ಮಲ್ಲಿಶೆಟ್ಟಿ ಸಾಕಿದವರು ಎಂದು ಅಭಿಪ್ರಾಯ ಪಡುತ್ತಾರೆ. ಈ ಮಾತಿಗೆ ಈ ದಂಪತಿಗಳಿಗೆ ಮಕ್ಕಳು

ಇದ್ದರೂ ಇಲ್ಲದಂತಾಗಿ ತಮ್ಮ ಬಂಧುಗಳ ಮಕ್ಕಳನ್ನು ತಂದು ಸಾಕಿದರೂ ಮಕ್ಕಳುದಕ್ಕದೇ ಹೋದಂತಹ ಸಂಧರ್ಭದಲ್ಲಿ ಮಕ್ಕಳ ಹಂಬಲ ಇಟ್ಟುಕೊಂಡ ಮಲ್ಲಿಶೆಟ್ಟಿಯವರು ತನ್ನ ವಿಜಯನಗರದ ಜನರಿಗೆ ಎಲ್ಲಿಯಾದರೂ ಅಡಿವಿಯೊಳಗೆ ಮಗುವನ್ನು ತೆಗೆದುಕೊಂಡು ಬಾ ಎಂದು ಅಪ್ಪಣೆ ಮಾಡಿದರಂತೆ. ಆಗ ತೇಗಿನ ಮರದ ಅಡಿಯಲ್ಲಿ ಎಲೆಯ ಹಾಸಿಗೆಯ ಮೇಲೆ ಮಲಗಿದ ಶಿಶುವೇ ಸಿಕ್ಕು ಮುಂದೆ ಕಾಲಜ್ಞಾನಿಯಾಗಿ ಕೊಡೇಕಲ್ಲ ಬಸವಣ್ಣನಾದದ್ದು. ಈತನು ಬಾಲ್ಯದಲ್ಲಿ ಆಧ್ಯಾತ್ಮಿಕ ಚಿಂತನೆಯನ್ನು ಮೈಗೂಡಿಸಿಕೊಳ್ಳುತ್ತಾನೆ. ಆದರಂತೆ ಈತ ಯೌವನಕ್ಕೆ ಬಂದಾಗ ವಡ್ಡಿನ ಎಂಬ ಗ್ರಾಮದ ಶೆಟ್ಟಿ ಲಿಂಗಣ್ಣನ ಮಗಳಾದ ಕಾಶಮ್ಮಳೊಂದಿಗೆ ಮದುವೆಯಾಗುತ್ತಾನೆ. ಕಾಶಮ್ಮ ತೀರಿದ ಬಳಿಕ ನೀಲಮ್ಮಳನ್ನು ಮದುವೆಯಾಗುತ್ತಾನೆ.

"ವಿಜಯನಗರಕ್ಕೆ ಬಸವ ಬಂದನು
ಬಿಜಯ ಮಾಡು ನೀ ಬಳ್ಳಿಗಾವಿಗೆ
ಸುಜನ ಪಂಚವಣ್ಣಿಗೆಯ ಸಿದ್ದಯ್ಯ ಚನ್ನಮ್ಮನ
ನಿಜಗರ್ಭದಲಿ ಜನಿಸಿ
ಯಜಮಾನತ್ವದಿ ಬೆಳೆದು ಬುದ್ದಿಯ
ಸೃಜಿಸಿ ಹೇಳಿ ಕಳುಹಿದನು ನೀಲಾಂಬಿಕೆಯ ಶಿವನು"[5]

ಆಗ ಬಸವಣ್ಣನವರು ವ್ಯಾಪಾರದಲ್ಲಿ ನಿರತನಾಗುತ್ತಾನೆ. ಆಗ ನೀಲಮ್ಮಳು ಹೀಗೆ ಹೇಳುತ್ತಾಳೆ.

"ಮಕ್ಕಳನು ಕೊಡಲಿಲ್ಲವೆನುತಲಿ
ಮಿಕ್ಕು ಮೀರಿ ಹೋದೆ ಸ್ವರ್ಗಕೆ
ಸಿಕ್ಕಿದಿನ್ನು ಹೇಗೆ ಅನುತಲಿ ನಗುತ ನುಡಿದನು
ದಕ್ಕಿಸಲಿಲ್ಲವು ಕೊಟ್ಟ ಮಾತನು
ಅಕ್ಕಗಿತ್ತಿರಿ ಫಲದ ಪದವಿಯ
ಒಕ್ಕಲಗೇಡಿಯಾಗಿ ಹೋದೆನು ನಿಮಗೆ ಹೊಂದದಲೆ"[6]

ಇಂತಹ ಸಂದರ್ಭದಲ್ಲಿ ಸಂಗಮೇಶ್ವರರ ನಂತರ ರೂಪ ಪಡೆದು ಬಸವಣ್ಣನನ್ನು ಕಾಲಜ್ಞಾನದತ್ತ ಸೆಳೆದುಕೊಳ್ಳುತ್ತಾನೆ. ಕೊಡೇಕಲ್ಲ ಬಸವಣ್ಣನು ರಾಜಪ್ಪಯ್ಯ, ಗುಹೇಶ್ವರ ಮತ್ತು ಸಂಗಪ್ಪಯ್ಯ ಎಂಬ ಮೂವರು ಗಂಡು ಮಕ್ಕಳನ್ನು ಪರಮಾನಂದ ಪ್ರಭು, ಆರೂಢ ಸಂಗಮೇಶ್ವರ ಎಂಬ ಗುರು ಪರಂಪರೆಯನ್ನು ಮಂಟೇಸ್ವಾಮಿ, ತಿಂಥಣಿ ಮಾನಪ್ಪಯ್ಯ, ಸಾಲೋಟಗಿ ಶಿವಯೋಗಿಶ್ವರ, ಮಳೆಯ ಪ್ರಭು ಹಾಗೂ ನಾಗ-ಈಶ ಎಂಬ ಶಿಷ್ಯ ಪರಂಪರೆಯನ್ನು ಪಡೆದುಕೊಂಡರು. ಕೊಡೇಕಲ್ಲ ಬಸವಣ್ಣನು ಸೂಫಿ ಸಂತರಲ್ಲಿ ಒಬ್ಬರು. ಗುರುಗಳಾದ ಪರಮಾನಂದ ಮತ್ತು ಸಂಗಮನಾಥರನ್ನು ಕೊಡೇಕಲ್ಲ

ಬಸವಣ್ಣ ಹಲವು ಬಗೆಯಾಗಿ ಕೀರ್ತಿಸಿದ್ದಾನೆ. ಅತ್ಮ ಚೈತನ್ಯವಾಗಿ, ಜ್ಞಾನದ ಮೂರ್ತಿಗಳಾಗಿ, ಚಲನಶೀಲ ಸಂಸ್ಕೃತಿಯ ರೂವಾರಿಗಳಾಗಿ ಅವರನ್ನು ಕಂಡಿದ್ದಾನೆ. ದೈವೀಕರಣದ ನೆಲೆಯಲ್ಲೂ ಗುರುಗಳ ಅಸ್ತಿತ್ವವನ್ನು ಹೇಳುವ ಕೊಡೇಕಲ್ಲ ಬಸವಣ್ಣನ ವಚನವಾಕ್ಯಗಳು ಉಲ್ಲೇಖಾರ್ಹವಾಗಿದೆ.

"ಜಗವೆಲ್ಲ ಬರಡಾಯಿತು ಪರಮಗುರು
ಸಗುಣನೆಂದು ಕಾಣದೆ"
"ಪರಮನಲ್ಲದೆ ಇನ್ನಾರ ಮೊರೆಹೊಕ್ಕರೆ
ಆರುಗು ಕೊಡುವವರಿಲ್ಲವು"
"ದೇವ ಪರಮಾನಂದನು ಜಗಭರಿತ
ಕರುಣ ಕೃಪೆಯನಿಟ್ಟ ಪ್ರಭುವು ಗುಹೇಶ್ವರನು
ಭರವಸವು ಬಂದರೆ ಮೇಲು ಸಂಗಮನಾಥ"
"ಕುರುಹು ತೋರಿ ತೊರೆದಾನೆ ಸಂಗ"
" ಕಪ್ಪು ಕಣ್ಣೊಳಗೆ ಇದ್ದಂತೆ ಅಪ್ಪ ಸಂಗಯ್ಯನ ಕೃಪೆ"
"ಕಾಯವಿಡಿದು ಕೈಲಾಸ ಕಂಡವರು
ರಾಯ ಪೂರ್ವಾಚಾರಿ ಸಂಗನ ಶರಣರು"[೮]

ಹೀಗೆ ವರ್ಣಿಸಿದ್ದಾರೆ.

ಶಿಷ್ಯ ಪರಂಪರೆಯ ಒಬ್ಬರಾದ ಮಂಟೇಸ್ವಾಮಿಯು ಕಲ್ಯಾಣದಿಂದ ಮೈಸೂರು ಭಾಗದವರೆಗೂ ಬೆಳೆಯುತ್ತಾನೆ. ಇಂತಹ ಕೊಡೇಕಲ್ ಬಸವಣ್ಣನು ಕಲ್ಯಾಣ ಬಸವಣ್ಣನ ಪುನರ್ ಅವತಾರವೆಂದು ಬಣ್ಣಿಸುವ ನಂದಿಯಾಗಲೀಲೆ ಕೃತಿಯ ಪದ್ಯವೊಂದರಲ್ಲಿ ಮಹಮ್ಮದ್ ಹಾಗೂ ಗುಪ್ತಗಣೇಶ್ವರ ಎರಡು ಅವತಾರಗಳೇ ಎಂದರ್ಥ. ಕೊಡೇಕಲ್ಲ ಬಸವಣ್ಣನವರ ಅವತಾರಗಳೆಂದು ಹೇಳುತ್ತಾರೆ. ಮಹಮ್ಮದ್ ಎಂಬುದು ಮುಸ್ಲಿಂ ಧರ್ಮಗುರು ಅಥವಾ ಇಸ್ಲಾಂ ಧರ್ಮಗುರು, ಇದು ಮಹಮ್ಮದ್ ಪೈಗಂಬರರ ಹೆಸರು. ಕೊಡೇಕಲ್ ಬಸವಣ್ಣನ ಎರಡನೇಯ ಮಗನಾದ ಗುಹೇಶ್ವರ ಕೊಡೇಕಲ್ಲಿನಲ್ಲಿಯೇ ಕಾಲೂರಿ ತನ್ನ ತಂದೆಯ ಸತ್ಯಸಂಪ್ರದಾಯಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

**ಗುಡಿಯ ಒಳ ಮತ್ತು ಹೊ ರ ನೋಟ:**

ಈ ಶರಣನ ದೇವಸ್ಥಾನ ಐತಿಹಾಸಿಕತೆಯನ್ನು ತಿಳಿಸುವುದರ ಮೂಲಕ ಸೌಹಾರ್ದತೆಯ ನೆಲೆಯಲ್ಲಿ ರಚನೆಯಾಗಿದೆ. ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ದರ್ಗಾದಲ್ಲಿ ಈ ಬಸವಣ್ಣನ ಸಮಾಧಿಯಿದೆ. ಮುಸ್ಲಿಂ ಭಕ್ತರು ಮಹಮ್ಮದ್ ಪೈಗಂಬರರೆಂದು ಹಿಂದೂಗಳು ಬಸವೇಶ್ವರರ ಗದ್ದುಗೆ ಎಂದು ಕರೆಯುತ್ತಾರೆ.

ಈತನ ಗೋರಿಯ ಮೇಲೆ "ಲಾ ಇಲಾಹ್ಯಾ ಇಲ್ಲಿಲ್ಲಾ ಮೊಹಮ್ಮದ್ ರಸೂಲಿಲ್ಲಾ" ಎಂಬ ವಾಕ್ಯಗಳು ಇವೆ. ಹಾಗೆಯೇ ಈ ಗೋರಿಗೆ ಹಸಿರು ಬಣ್ಣದ ವಸ್ತ್ರವನ್ನು ಹೊದಿಸಲಾಗಿದೆ. ಗೋರಿಯ ಮುಂದೆ ಅದಕ್ಕೆ ಹತ್ತಿಕೊಂಡಂತೆ ಬೆಳ್ಳಿ ಹಾಗೂ ಹಿತ್ತಾಳೆಯ ಇದರ ವಚನಗಳ ಪಟಗಳಿವೆ. ಅಂದಿನಿಂದ ಇಂದಿನವರೆಗೂ ಗೋರಿಯ ಮೇಲೆ ಬಸವನ ಸಾಹಿತ್ಯದ ಗ್ರಂಥವಿದೆ. ಅದನ್ನು ಪ್ರತಿ ಶಿವರಾತ್ರಿಯ ದಿನದಂದು ಬಿಚ್ಚುತ್ತಾರೆ.

ಈ ದೇವಸ್ಥಾನದ ಬಲಗಡೆಯಲ್ಲಿ ಸಂಗಪ್ಪಯ್ಯನ ಸ್ಮಾರಕದ ಜಗುಲಿಯಿದ್ದರೆ ಎಡಕ್ಕೆ ನೀಲಮ್ಮನ ಸ್ಮಾರಕ ಜಗಲಿಯಿದೆ. ಈ ದೇವಸ್ಥಾನದ ಹಿಂದುಗಡೆ ಇರುವ ಚೌಕಿಯಲ್ಲಿ ಆ ಕಾಲದ ರಾಚಪ್ಪನ ಮಗ ಕುಮಾರಸ್ವಾಮಿಯ ಸಮಾಧಿಯಿದೆ. ಹೀಗೆ ಇಡೀ ಬಸವ ವಂಶಸ್ಥರ ಸಮಾಧಿಗಳನ್ನು ಮುಸಲ್ಮಾನರ ಪದ್ಧತಿಯ ಗೋರಿಗಳ ರೂಪದಲ್ಲಿರುವುದು ಕಾಣುತ್ತೇವೆ. ಲಿಂಗವನ್ನು ವಿರೋಧಿಸಿದ ಈ ಬಸವಣ್ಣನವರ ಪರಂಪರೆ ಶಿಷ್ಯನಾದ ನಾಗಾಯಿ ಈಶಪ್ಪನು ಲಿಂಗವನ್ನು ಕತ್ತಿನ ಕೊರಳಲ್ಲಿ ಕಟ್ಟಿ ಬೋಳ ಜಂಗಮರೆಂದು ಕರೆಸಿಕೊಳ್ಳುವರು. ಇಂತಹ ಕೊಡೇಕಲ್ಲ ದೇವಸ್ಥಾನ ಭವ್ಯವಾದ ಜಾಗೆಯನ್ನು ಹೊಂದುವುದರ ಮೂಲಕ ತನ್ನದೇ ಆದ ಒಂದು ವಿಶಿಷ್ಟತೆಯನ್ನು ಮೆರೆದರೆ ಇನ್ನೊಂದು ಕಡೆ ಬಸವಣ್ಣನ ದೇವಸ್ಥಾನಕ್ಕಿಂತ ವಿಶಿಷ್ಟವೂ ಹಸಿರು ತಾಣವನ್ನು ಉಣಬಡಿಸುವ ಹನ್ನೆರಡನೇ ಶತಮಾನದ ಜ್ಞಾನಿ ಪ್ರಭುದೇವರ ಗುಡಿಯಿದೆ. ಇದು ಕೂಡ ಸೌಹಾರ್ದತೆಯ ತಾಣವಾಗಿದೆ.

"ಪೊಡವಿಗೆ ಸುಕ್ಷೇತ್ರ ಕೊಡೆಯಕಲ್ಲೆಂಬುದು
ಕಡೆಯ ಕಲ್ಯಾಣ ನದಿ ಕೃಷ್ಣ । ತೀರದಲಿ ಅ
ಗಡ ದೇವದ ರ್ಗ ಜಯಬೀಡು."[9]

ಈ ಪದ್ಯವು ಕವಿ ರಾಜಪ್ಪ ವರದು. ಅವರು ತಮ್ಮ ಕಾವ್ಯದಲ್ಲಿ ಕೊಡೆಕಲ್ಲ ಗ್ರಾಮದ ಭೌಗೋಳಿಕ ನೆಲೆಯನ್ನು ತಿಳಿಸಿದರೆ ಕೆಳಗಿನ ಪದ್ಯದ ಮೂಲಕ ಇದರ ಶಿಲೆಯು ಕೊಡೆಯಾಕಾರದಲ್ಲಿದೆ ಇರುವುದನ್ನು ತಿಳಿಸುತ್ತದೆ.

"ಕಪ್ಪಡೆ ಕೆಳಹೊಳೆ ಕಾಶಿಗಿಂತಲು ಮಿಗಿಲು
ಆ ಪೂರ್ಣಚಾರ್ಯ ವಶಿಷ್ಠನ । ಹಸ್ತಕ್ಕೆ
ಒಪ್ಪಿತು ಕೊಡೆ ಛತ್ರ ಶೀದೊಳು"[10]

ಹೀಗೆ ಭೌತಿಕ ಮತ್ತು ಸಾಂಸ್ಕೃತಿಕವಾಗಿ ಕಲ್ಯಾಣ ಬಸವನ ಜೊತೆಗೆ ಸನಾತನದ ಸಂಪ್ರದಾಯದ ಕಾಶಿಶೆಟ್ಟಿಗೆ ಸಂಬಂದಿಸಿ ಹೇಳಲಾಗಿದೆ. ಅಷ್ಟೇ ಅಲ್ಲದೇ ಹಲವು ಕಲ್ಲು ಎಂಬ ಸ್ಥಳವು ಕೊಡೆಕಲ್ಲಿನಿಂದ ಮೂರು ಮೈಲು ದೂರವಿರುವ ಸಿದ್ಧ ಬಸವನ ನೆಲೆಯಾಗಿರುವ ಬೆಟ್ಟವಿದೆ. ಅಷ್ಟೇ ಅಲ್ಲದೇ ಸುಕ್ಷೇತ್ರ ಶಿಲಪುರ ಎಂಬ ಸ್ಥಳ ಅಂತರಗಲ್ ಹನುಮನ ಶಿಲಾದೇವಾಲಯವಿದೆ. ಈತನೂ ಕೊಡೇಕಲ್ಲ ಬಸವಣ್ಣನ ಅವತಾರ ಪುರುಷ ಎಂದು ಹೇಳಲಾಗಿದೆ.

"ಹಲವು ಕಲ್ಲೆಂಬುದು ನೆಲೆ ಹನುಮನಾಶ್ರಮವು
ಕಲಿ ಪ್ರಥಮ ಪಾದ ಕಡೆ ಉಳಿವಿ। ಬಸವಯ್ಯ
ನೆಲಸಿದ ಸುಕ್ಷೇತ್ರ ಶಿಲಪುರವು
ಹಲವು ಕಲ್ಲೆಂಬುದು ಸ್ಥಲ ಸಿದ್ದ ಬಸವನ
ನಿಲುಕಡಿಯು ಶರಣ ಪದವಿಗೆ"[17]

**ಆಚರಣೆ ಪದ್ಧತಿಗಳು :**

ಕೋಮು ಸೌಹಾರ್ದತೆಯ ತತ್ವಸಾರಿದ ಕೊಡೇಕಲ್ಲ ಬಸವಣ್ಣನವರು ಸಮಾಜದಲ್ಲಿರುವ ಮೇಲು ಕೀಳು ಎಂಬ ಭಾವನೆಯನ್ನು ಹೋಗಲಾಡಿಸಲು ನಾನಾ ಪ್ರದೇಶಗಳನ್ನು ಸಂಚರಿಸಿ ಶ್ರಮಿಸಿದ್ದಾರೆ. ಪ್ರತಿವರ್ಷ ನಡೆಯುವ ಜಾತ್ರೆಯಲ್ಲಿ ಗಂಧ ಏರಿಸುವ ಕಾರ್ಯಕ್ರಮದಲ್ಲಿ ದಲಿತ ಭಕ್ತರು ತಂದ ನೀರನ್ನು 'ಗಂಧ'ತೇಯಲು ಉಪಯೋಗಿಸಲಾಗುತ್ತದೆ. ಲಿಂಗಾಯಿತ ಭಕ್ತರು ಗಂಧ ತೇಯುತ್ತಾರೆ. ಕೊಡೇಕಲ್ಲ ಸಾಹಿತ್ಯ ಹಾಡುಗಳನ್ನು ಹೇಳುತ್ತಾ 'ಹಾಡಿ' ಎಂಬ ಮಣ್ಣಿನ ಗಡಿಗೆ ಹಿಡಿದು ಗುರುವರ್ಗದವರು ಹಾಡಿ ಭಿಕ್ಷೆ ಮಾಡುತ್ತಾರೆ. ಗೌರಿ ಹುಣ್ಣಿಮೆ ಮತ್ತು ದವನದ ಹುಣ್ಣಿಮೆ ಮರುದಿನ ನಡೆಯುವ ಜಾತ್ರೆಯಲ್ಲಿ ಮಹಾನ್ ಮಠದ ಮಠಾಧೀಶರು ಮತ್ತು ರಾಜಾ ಕಿವುಡ ಹನುಮಪ್ಪ ನಾಯಕ ವಂಶಸ್ಥರು, ಗ್ರಾಮದ ಜನರು ಜೋಡು ಪಲ್ಲಕ್ಕಿ ಉತ್ಸವ ನೆರವೆರಿಸುತ್ತಾರೆ. ಪಲ್ಲಕಿ ಮೇಲೆ ಹೊದಿಸುವ ಮುಸ್ಲೀಂ ಗಲೀಫ್‌ವನ್ನು ಹಣಗಿ ಎಂಬ ಮುಸ್ಲಿಂ ಭಕ್ತರ ಮನೆಯಿಂದ ತರಲಾಗುತ್ತದೆ. ಈ ಹಣಗಿಯ ಮನೆತನದವರೇ ಉತ್ಸವದಲ್ಲಿ ದೀನ್ ಜಗಾಯಿಸಿದ (ಪಾತೆ ಕೊಡುವುದು) ನಂತರ ತೆಂಗಿನಕಾಯಿ ಒಡೆಯಲಾಗುತ್ತದೆ. ಈ ಮುಸ್ಲಿಂ ಭಕ್ತರ ಕೆಲವೊಂದು ಸ್ಥಳಗಳಲ್ಲಿ ತೆಂಗಿನ ಕಾಯಿ ಒಡೆಯಲಾಗುತ್ತದೆ. ಹೀಗೆ ಹಿಂದೂ ಮುಸ್ಲಿಮರು ಒಂದುಗೂಡಿ ಜಾತ್ರೆಯಲ್ಲಿನ ಆಚರಣಿಯನ್ನು ಸಂಭ್ರಮದಿಂದ ಮಾಡುವುದು ಬಹುಅಪರೂಪ. ಅದನ್ನು ಕೊಡೇಕಲ್ಲಿನಲ್ಲಿ ಒಂದು ಗೂಡಿ ಆಚರಿಸುವುದನ್ನು ಇಂದಿಗೂ ನೋಡಬಹುದಾಗಿದೆ.

ಮೊಹಮ್ಮದ್ ಕೊಡೇಕಲ್ಲ ಬಸವಣ್ಣ ಇನ್ನೊಂದು ಹೆಸರು ಇಂಥ ಅಂಶಗಳು ಹಾಗೂ ಮುಸಲ್ಮಾನ್ ರೀತಿಯಲ್ಲಿಯೇ ಪೂಜೆಗಳಾಗುತ್ತಿರುವ ಕೊಡೆಕಲ್ಲ ಮತ್ತಿತರ ಕಡೆಗಳಲ್ಲಿನ ಕೊಡೇಕಲ್ಲ ಬಸವಣ್ಣನ ದೇವಸ್ಥಾನ ಗದ್ದುಗೆಗಳು, ಮುಸಲ್ಮಾನ ಭಕ್ತರನ್ನು ಕೊಡೇಕಲ್ಲ ಸಂಪ್ರದಾಯದತ್ತ ಸೆಳೆದಿದ್ದರಲ್ಲಿ ಆಶ್ಚರ್ಯವಿಲ್ಲ. ಈಗಲೂ ಬಿಜಾಪೂರ ಭಾಗದ ಮುಸಲ್ಮಾನ ಭಾಂಧವರು ಕೊಡೇಕಲ್ಲ ಬಸವನ ಉತ್ಸವಗಳಲ್ಲಿ ತಮ್ಮ ತಮ್ಮ ಹಬ್ಬಗಳ ಸಂಧರ್ಭದಲ್ಲಿ ಕೊಡೆಕಲ್ಲಿನ ಮುಸಲ್ಮಾನ ರೀತಿಯಲ್ಲಿ ಪೂಜೆ ಸಲ್ಲಿಸಿ ದೀನ ಹಾಡುತ್ತಾರೆ.

ಕೊಡೇಕಲ್ಲ ಬಸವನ 'ಮಹಮ್ಮದ್' ವೇಷ ಸಾಕಾರ ಪೂಜೆಯ ಖಂಡನೆ ಮತ್ತು ನಿರಾಕಾರ ಪೂಜೆ ಸ್ವೀಕರಣೆಗಳು ಕೊಡೇಕಲ್ಲ ಬಸವನ ಕಾಲದಲ್ಲಿಯೇ ಆ ಕಾಲದ ಮುಸಲ್ಮಾನವರನ್ನು

ಸೆಳೆದುದ್ದರಲ್ಲಿ ಆಶ್ಚರ್ಯವಿಲ್ಲ. ಕೊಡೇಕಲ್ಲ ಬಸವಣ್ಣ ತನ್ನ ಐದು ವಚನ ಹಾಗೂ ಕೇಶಗಳನ್ನು ಕೊಟ್ಟನೆಂದು ಆಯಾ ಲೀಲೆ ವರ್ಣಿಸುವುದನ್ನು ಅವನ ಜೀವನ ಚರಿತ್ರೆ ಸಂದರ್ಭದಲ್ಲಿ ಹಿಂದೆ ನೋಡಿದ್ದೇವೆ. ಈಗಲೂ ಬಿಜಾಪುರದ ಆಸರ್‌ಮಹಲ್‌ನಲ್ಲಿ ಕೊಡೇಕಲ್ ಬಸವಣ್ಣ ಕೊಟ್ಟ ಈ ಕುರುಹುಗಳು ಮಹಮ್ಮದ್ ಪೈಗಂಬರ ಕೊಟ್ಟ ಕುರುಹುಗಳಿಂದ ಅತ್ಯಂತ ವೈಭವದಿಂದ ಮುಸಲ್ಮಾನರಿಂದ ಪೂಜೆಗೊಂಡಿವೆ.

ಪ್ರತಿಯೊಬ್ಬ ವ್ಯಕ್ತಿ ಪರಿಶುದ್ಧವಾಗಿರಬೇಕು. ಅವನು ಯಾವುದೇ ಜಾತಿಯವನಾಗಿರಲಿ ನಡೆ – ನುಡಿಯಿಂದ ಶುದ್ಧ ಆಗಿರಬೇಕೆಂಬ ತತ್ವ ಕೊಡೆಕಲ್ಲ ಬಸವಣ್ಣನವರ ತತ್ವ. ಇದೊಂದು ಜಾತ್ಯಾತೀತ ಸಮಾಜ ಎಂಬುದಕ್ಕೆ ಈಗಲೂ ಕೊಡೆಕಲ್ಲ ಬಸವನ ಗದ್ದುಗೆಗೆ ಗಂಧ ಏರಿಸುವಂಥ ಸಂಧರ್ಭದಲ್ಲಿ ನೀರು ತರುವವರು ಕೆಳಜಾತಿಯವರು. ಯಾವ ಹಿಂದೂ ಧರ್ಮ ಯಾರನ್ನು ಅಂತ್ಯಜರೆಂದು ಕರೆದಿತ್ತೊ, ಅಂತಹವರಿಂದಲೇ ಆಚರಿಸಲ್ಪಡುವ ಈ ದೇವಸ್ಥಾನದ ಸಂಪ್ರದಾಯ ಭಾವೈಕ್ಯತೆಯಿಂದ ಕೂಡಿದೆ. ಈ ಆಚರಣೆಯನ್ನು ಆಚರಿಸುವ ಸಂದರ್ಭದಲ್ಲಿ ಬಸವಣ್ಣ ಹಾಗೂ ಪ್ರಭುದೇವರ ಪಲ್ಲಕ್ಕಿಗಳು. ಇವರೀರ್ವರ ಅಮರ ಕಲ್ಯಾಣ ಕಾಲದ ಸಂಬಂಧವನ್ನು ಒತ್ತಿ ಹೇಳುತ್ತದೆ. ಸಾಮಾನ್ಯ ದಿನಗಳಲ್ಲಿ ಧಾರ್ಮಿಕ ವಿಧಾನಗಳೊಂದಿಗೆ ದಿನಕ್ಕೆ ಮೂರುಸಲ ಪೂಜೆಗೈಯಲ್ಪಡುವ ಈ ಪೂಜಾ ಪದ್ಧತಿ ಒಂದರ್ಥದಲ್ಲಿ ಮುಸಲ್ಮಾನ್ ಪದ್ಧತಿಯನ್ನು ಅನುಸರಿಸುವಂತಿದೆ. ಭಜನೆ, ಮೇಳ ಹಿಂದೂ ಧರ್ಮದ ಪ್ರತೀಕವಾದರೆ ಮುಡಿಕೆಯಲ್ಲಿ ಧೂಪ ಹಾಕುವುದು ಮುಸಲ್ಮಾನ್ ಪದ್ಧತಿಗಳಲ್ಲೊಂದಾಗಿದೆ. ಹರಕೆ ಹಾಗೂ ನೈವೇದ್ಯವನ್ನು ಭಕ್ತರು ಮಾಡುವುದರ ಮೂಲಕ ಮಂದಿರದಲ್ಲಿರುವ ತಂಬೂರಿ ಗಡಿಗೆಯನ್ನು ಪೂಜಿಸುತ್ತಾರೆ. ಆದರೆ ವಿಶೇಷ ಸಂದರ್ಭಕ್ಕೆ ಬಂದಾಗ ಕೊಡೇಕಲ್ ಬಸವಣ್ಣನ ಉತ್ಸವ ಸಂದರ್ಭದಲ್ಲಿ ಎಲ್ಲೆಲ್ಲಿ ಶಾಕಾ – ಮಠಗಳಿವೆಯೋ ಅಲ್ಲಲ್ಲಿ ಉತ್ಸವ ನಡೆಯುತ್ತವೆ. ಅಂದರೆ ಒಂದು ವರ್ಷದಲ್ಲಿ ಎರಡು ಸಲ ನಡೆಯುವ ಬಸವನ ಉತ್ಸವದಲ್ಲಿ ಬಸವನ ಸಮಾಧಿಗೆ 'ಗಂಧದ' ಸೇವೆ ನಡೆಯುತ್ತದೆ.

ಅಲ್ಲದೇ ಆತನ ಗದ್ದುಗೆಯ ಮೇಲಿರುವ ಹೊತ್ತಿಗೆಯನ್ನು ಈ ಸಂದರ್ಭದಲ್ಲಿ ಓದಲಾಗುತ್ತದೆ. ಇದರಲ್ಲಿರುವ ನುಡಿಗಳನ್ನು ಸಾರ್ವ ಅಯ್ಯಗಳು ಆ ವರ್ಷ ಪೂರ್ತಿ ಊರೂರಿಗೆ ಸಾರುತ್ತ ಹೋಗುತ್ತಾರೆ. ಆ ಮಠವನ್ನು ಅಥವಾ ಮಂದಿರವನ್ನು ಪಿಠಾಧೀಪತಿಗಳು ನಡೆಸಿಕೊಂಡು ಹೋಗುತ್ತಾರೆ. ಯುಗಾದಿಯ ದಿವಸ ಈ ಮುತ್ಯಾರು ನಿ ಲುವಂಗಿ ಧರಿಸಿ ತಲೆಗೆ ಹಸಿರು ವರ್ಣದ ಪೇಟವನ್ನು ತೊಟ್ಟು ಬಿಳಿ ಇಲ್ಲವೇ ಕಂದು ಬಣ್ಣದ ಕುದುರೆಯ ಮೇಲೆ ಮೆರವಣಿಗೆಯ ಮುಖಾಂತರ ಈ ದೇವಸ್ಥಾನಕ್ಕೆ ಆಗಮಿಸುತ್ತಾರೆ. ಆ ಗ್ರಾಮದ ಪಂಚಮರು ಸಾಯಂಕಾಲ ನಾಲ್ಕು ಗಂಟೆಗೆ ಕೃಷ್ಣಾ ನದಿಯಿಂದ ನೀರು ತಂದು ಆ ನೀರಿನಿಂದ ಗಂಧವನ್ನು ತೇಯುತ್ತಾರೆ. ಈ ನೀರನ್ನು ಹರಿಜನರು ತರುವ ಪದ್ಧತಿ ಇಂಥ ದೇವಸ್ಥಾನದಲ್ಲಿ ಮಾತ್ರ ಸಿಗುತ್ತವೆ. ಅಲ್ಲದೇ ರಾತ್ರಿ ಎಂಟು ಗಂಟೆಗೆ ಇವರ ಜೊತೆಗೆ ಬೇರೆಯವರು ಕೂಡಿ ಹಿಂದಿನ ವರ್ಷ ಹಚ್ಚಿದಂತಹ ಗಂಧವನ್ನು ಸಂಪೂರ್ಣ ತೆಗೆದು ಹೊಸ ಗಂಧವನ್ನು ಗದ್ದುಗೆಗೆ

ಲೇಪನ ಮಾಡುತ್ತಾರೆ. (ಅಷ್ಟೇ ಅಲ್ಲದೇ ಪ್ರಭುದೇವನ ಗುಡಿಗೆ ಬಂದು ತಯಾರಿಸಿರುವ ಗಂಧವನ್ನು ಗುಡಿಯೊಳಗಿರುವ ಮಾಡಿಗೆ ಲೇಪನ ಮಾಡುತ್ತಾರೆ) ತದನಂತರ ನಿಜಲಿಂಗಪ್ಪನ ಗುಡಿ, ನಿಲಮ್ಮನ ಗುಡಿ ಹಾಗೂ ಕುಮಾರಸ್ವಾಮಿ ಗುಡಿಗಳಿಗೂ ಸಹ ಈ ಪೂಜಾ ವಿಧಾನವನ್ನು ಅನುಸರಿಸುತ್ತಾರೆ. ಮಂದಿರದಲ್ಲಿರುವಂತಹ ನಗಾರಿಯನ್ನು ಹೊರತಂದು ಬಾರಿಸುವುದರ ಮೂಲಕ ಜಾತ್ರೆ ನಡೆಯುವ ಸೂಚನೆಯನ್ನು ಪಂಚಾಗದ ವಿಧಿ ವಿಧಾನಗಳ ಮೂಲಕ ತಿಳಿಸುತ್ತಾರೆ.

**ಪಲ್ಲಕ್ಕಿ ಮತ್ತು ಕಳಸ ತುಂಬುವುದು :**

ಮಧ್ಯಾನ್ಹದ ಸಮಯಕ್ಕೆ ಕೊಡೇಕಲ್ ಬಸವಣ್ಣನ ಹಾಡುಗಳನ್ನು ಹಾಡುತ್ತಾ ವಾದ್ಯಗಳೊಂದಿಗೆ ಭಕ್ತ ಸಮೂಹವು ಎರಡು ಪಲ್ಲಕ್ಕಿಗಳನ್ನು ಹೊತ್ತು ಊರೆಲ್ಲಾ ಸುತ್ತಾಡುತ್ತಾ ನಂತರದಲ್ಲಿ ಪ್ರಭುದೇವರ ಗರ್ಭಗುಡಿಯನ್ನು ಪ್ರವೇಶಿಸಿ ಮೂರುಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ಇಂತಹ ಸಂಧರ್ಭದಲ್ಲಿ ಇಸ್ಲಾಂನೊಬ್ಬ ಬಸವಣ್ಣನನ್ನು ಮಹಮದ್ ಹೆಸರಿನಿಂದ ಸ್ತುತಿಸಿದ ಮೇಲೆ ಆ ಎರಡು ಪಲ್ಲಕ್ಕಿಗಳನ್ನು ಕೊಡೇಕಲ್ಲ ಬಸವನ ಮಂದಿರಕ್ಕೆ ತರುತ್ತಾರೆ. ಇದು ಒಂದು ಕಡೆಯಾದರೆ ಪಲ್ಲಕ್ಕಿಗೆ ಕಳಸವನ್ನಿಟ್ಟು ಹೂಗಳಿಂದ ಅಲಂಕರಿಸುತ್ತಾರೆ. ಇಡೀ ರಾತ್ರಿ ಜರಗುವ ಈ ಪಲ್ಲಕ್ಕಿ ಉತ್ಸವವನ್ನು ಭಕ್ತಾದಿಗಳಿಗೆ ದರ್ಶನ ಮಾಡಿಸುತ್ತಾರೆ.

**ಇನ್ನಿತರ ಪ್ರಮುಖ ವಿಧಾನಗಳು :**

ಈ ಮೇಲಿನ ಪೂಜಾ ವಿಧಾನಗಳನ್ನು ಗಮನಿಸಿದ ಮೇಲೆ ಈ ದೇವಸ್ಥಾನದಲ್ಲಿ ನಡೆಯುವ ಅನುಸರಿಸುವ ವಿಧಿ – ವಿಧಾನಗಳನ್ನು ನೋಡಿದಾಗ ಸೌಹಾರ್ದ ಭಾವನೆ ನಮಗೆ ವಿಶೇಷವಾಗಿ ಕಂಡು ಬರುತ್ತದೆ.

**ವೇಷ :**

ಪೀಠಾಧ್ಯಕ್ಷರನ್ನು ಹೊರತುಪಡಿಸಿ ಎಲ್ಲಾ ಗುರು ದರ್ಗಾ ಹಾಗೂ ಶಿಷ್ಯವರ್ಗದವರು ಸಾಮಾನ್ಯ ವೇಷ–ಭೂಷಣಗಳನ್ನು ಧರಿಸುತ್ತಾರೆ. ಪೀಠಾಧ್ಯಕ್ಷರು ಸಾಮಾನ್ಯ ದಿನಗಳಲ್ಲಿ ಬಿಳಿ ಧೋತ್ರ ಮತ್ತು ಬಿಳಿ ಅಂಗಿಯನ್ನು ಹಾಕಿಕೊಂಡು ತಲೆಯ ಮೇಲೆ ಹಸಿರು ಒಮ್ಮೊಮ್ಮೆ ಬಿಳಿಯ ಪೇಟ ಧರಿಸುತ್ತಾರೆ. ವಿಶೇಷ ದಿನಗಳಲ್ಲಿ ನಿಲುವಂಗಿ ತಲೆಯ ಮೇಲೆ ಹಸಿರು ರುಮಾಲು ಧರಿಸಿ ಬೆತ್ತ ಹಿಡಿಯುತ್ತಾರೆ.

**ದೀಕ್ಷೆ :**

ಆರೂಢ ಸಂಗಮೇಶ್ವರ ಕೊಡೇಕಲ್ಲ ಬಸವಣ್ಣನ ಕೊರಳಲ್ಲಿದ್ದ ಲಿಂಗವನ್ನು ತೆಗೆದು ಅವನಿಗೆ ಹಸ್ತ ಮಸ್ತಕ ಮಾಡಿದ್ದನೆಂದು, ಕೊಡೇಕಲ್ಲ ಬಸವಣ್ಣ ನಾಗವೀರಪ್ಪಯ್ಯ ಮುಂತಾದವರಿಗೆ ಲಿಂಗಬಿಡಿಸಿ ಹಸ್ತಮಸ್ತಕ ಮಾಡಿದ್ದನೆಂದು ಲೀಲೆಯಲ್ಲಿ ನಾವು ನೋಡಬಹುದು. ಕೊಡೇಕಲ್ಲ ಅವರ ಪ್ರಾಚೀನ ಕಾಲದ ಈ ಹಸ್ತಮಸ್ತಕ, ವೀರಶೈವ 'ಹಸ್ತಕಮಸ್ತಕ' ದೀಕ್ಷೆಯಲ್ಲಿ ಕೊಡೆಕಲ್ಲಿನವರು ಲಿಂಗ ತೊರೆದಿರುವುದರಿಂದ

ಸುಸ್ಪಷ್ಟ ಲಿಂಗ ಇಲ್ಲವೇ ಇನ್ನಾವುದೇ ಲಾಂಛನಗಳ ಧಾರಣಿ ಈ ಹಸ್ತಮಸ್ತಕದಲ್ಲಿ ಇಲ್ಲದ್ದರಿಂದ ಇದನ್ನು ದೀಕ್ಷೆ ಎನ್ನದೇ ಆರ್ಶಿವಾದ ಎನ್ನಬಹುದು. ಭಕ್ತರು ತಮ್ಮ ಪಾದಕ್ಕೆ ನಮಸ್ಕರಿಸಿದರೆ 'ಹಸ್ತಮಸ್ತಕ' ಆರ್ಶಿವಾದ ನೀಡುತ್ತಾರೆ. ವಿನಃ ಅದನ್ನು ಧಾರ್ಮಿಕ ವಿಧಿಯಾಗಿ ಎಂದು ಆಚರಿಸುವುದಿಲ್ಲ.

ಭಕ್ತರು ನಿಜವಾಗಿ ಶ್ರದ್ದೆಯನ್ನು ವ್ಯಕ್ತಪಡಿಸಿದರೆ ಸಾಹಿತ್ಯ ಕೃತಿಗಳನ್ನು ಲೀಪಿಕರಣ ಮಾಡಿಸಿಕೊಂಡು ಪೂಜಿಸಲು, ಅವಕಾಶ ನೀಡುತ್ತಾರೆ. ಇದನ್ನು 'ವಚನ ದೀಕ್ಷೆ' ಎನ್ನಬಹುದು.

**ವಿವಾಹ :**

ಶಿಷ್ಯ ವರ್ಗದವರಿಗೆ ವಿವಾಹದಲ್ಲಿ ಅಂತಹ ನಿರ್ಭಂಧನೆಗಳು ಇಲ್ಲ ಹಾಗೇಯೇ ವಿಶೇಷವಾದಂತಹ ಆಚರಣೆಗಳು ಅಲ್ಲಿ ಕಂಡುಬರುವುದಿಲ್ಲ. ಗುರುವರ್ಗದಲ್ಲಿ ವೈವಾಹಿಕ ಸಂಬಂಧಗಳನ್ನು ತಮ್ಮ ತಮ್ಮಲ್ಲಿಯೇ ಮಾಡಿಕೊಳ್ಳುತ್ತಾರೆ. ಇವರು ಬೇರೆಯವರ ಸಮಾಜದೊಂದಿಗೆ ರಕ್ತಸಂಬಂಧವನ್ನು ಮಾಡಿಕೊಳ್ಳುವುದಿಲ್ಲ. ಹಾಗೇಯೇ ಹಿಂದೂಗಳು ಆಚರಿಸುವಂತಹ ವಿಧಿ ವಿಧಾನಗಳು ಇವರ ಸಂಪ್ರದಾಯದಲ್ಲಿ ನಾವು ನೋಡಬಹುದಾಗಿದೆ.

**ಧಫನ್ :**

ಕೊಡೇಕಲ್ ಗುರುವರ್ಗದವರಲ್ಲಿ ಯಾರಾದರೂ ತೀರಿಕೊಂಡರೆ ಅವರನ್ನು ಮುಸಲ್ಮಾನರು ಧಫನ್ ರೀತಿಯಲ್ಲಿ ಮಾಡುತ್ತಾರೆ. ಈ ಶವ ಸಂಸ್ಕಾರ ಪದ್ದತಿಯನ್ನು ಕಟ್ಟುನಿಟ್ಟಾಗಿ ಆಚರಿಸಬೇಕೆಂದು ನಿರ್ಭಂಧನೆಗಳು ಇಲ್ಲಿ ಇರುವುದಿಲ್ಲ.

**ಶಿಷ್ಯ ಪರಂಪರೆ :**

ಕೊಡೇಕಲ್ ಬಸವೇಶ್ವರರ ಗುರು ಆರೂಢ ಸಂಗಮನಾಥನು ಈ ಶರಣನ ಕೊರಳಲ್ಲಿರುವ ಲಿಂಗವನ್ನು ಕಿತ್ತುಹಾಕಿ ಅಂತರಂಗಕ್ಕೆ ಆರೂಢತತ್ವವನ್ನು ಅಳವಡಿಸಿ "ಹಸ್ತಮಸ್ತಕ" ಮಾಡುತ್ತಾರೆ. ಅನುಭಾವಿ ಪಂಥದಲ್ಲಿ ದೀಕ್ಷೆ ತೆಗೆದುಕೊಳ್ಳುವ ಕ್ರಮವನ್ನು ಹಸ್ತಮಸ್ತಕ ಎನ್ನುತ್ತಾರೆ. ಗುರುಗಳು ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಅವನಿಂದ ಲಿಂಗತ್ಯಾಗದ ದೀಕ್ಷೆಯನ್ನು ತೆಗೆದುಕೊಳ್ಳುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸುವುದಾದರೆ ಶರಣರ ಸಮೂಹದಲ್ಲಿ ಲಿಂಗಧಾರಣಿಯಾಗುವ ದೀಕ್ಷೆ ಇರುತ್ತದೆ. ಆದರೆ ಈ ಪಂಥ ತದ್ವಿರುದ್ಧವಾಗಿದೆ. ನಿಜಕ್ಕೂ ಗಮನಾರ್ಹ.

ಹೀಗೆ ಗುರುಗಳಿಂದ ದೀಕ್ಷೆ ಪಡೆದ ಕೊಡೇಕಲ್ಲ ಬಸವಣ್ಣನವರು ತಮ್ಮ ಸಂಚಾರ ಕಾಲಕ್ಕೆ ಅನೇಕ ಜನ ಶಿಷ್ಯತ್ವವನ್ನು ಪಡೆದುಕೊಂಡರು. ಅವರಲ್ಲಿ ಜಂಗಮ, ಜಾಡ ಮತ್ತು ಬೇಡ ಶಿಷ್ಯರು. ಇವರಲ್ಲಿ ಜಾಡರು ಹಾಗೂ ಬೇಡರು ಇವರ ಇಂದಿಗೂ ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದ ಇತಿಹಾಸವಿದೆ. ಈ ಶಿಷ್ಯರು ಅನುಯಾಯಿಗಳಲ್ಲಿ ಬಸವಣ್ಣನ ತತ್ವ ಸಾಹಿತ್ಯಕ್ಕೆ ಆಕರ್ಷಕರಾಗಿ ಶಿಷ್ಯರಾದವರು. ಇವರಲ್ಲಿ ಅತ್ಯಂತ ಕೆಳಗಿನ ಜಾತಿಯ ಜನರು ಇರುವುದರಿಂದಲೇ ಇವತ್ತಿಗೂ ಜಾತ್ರೆ

ಉತ್ಸವಗಳಲ್ಲಿ ಎಲ್ಲರೂ ಸರಿಸಮಾನವಾಗಿ ನಡೆಯುವ ಸಂಪ್ರದಾಯವಿದೆ. ಅಷ್ಟೇ ಅಲ್ಲದೇ ಅಂತ್ಯಜರೆ ಗಂಧವನ್ನು ತೇಯಬೇಕೆಂಬ ನಿಯಮ ಕಡ್ಡಾಯವಿದೆ. ಇಂತಹ ಬಸವಣ್ಣನವರ ವಿಚಾರಗಳನ್ನು ತಿಳಿದ ಅನೇಕ ಶಿಷ್ಯಂದಿರು ಬೆನ್ನುಹತ್ತಿ ಬಂದವರು. ಅವರಲ್ಲಿ ಜಾಡರು ಮತ್ತು ಬೇಡರು ನೆಲೆಯಾಗಿರುವ ಕೇಂದ್ರಗಳು ರಾಜ್ಯಾದ್ಯಂತ ತಲೆಎತ್ತಿವೆ. ಅವುಗಳಲ್ಲಿ ಗುಲಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಕೊಡೇಕಲ್, ದ್ಯಾಮನಾಳ, ಅಮ್ಮಾಪುರ, ರುಕುಂಪ್ಯಾಟಿ ಹಾಗೂ ಬಾಚನಾಳ ಗ್ರಾಮಗಳು. ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ನಾಲತ್ವಾಡ ಗ್ರಾಮಗಳಲ್ಲಿ ಇಂದಿಗೂ ಸೌಹಾರ್ದತೆ ಭಾವನೆಗಳು ತಳವೂರಿವೆ.

ಹೀಗೆ ಸರ್ವರ ಸಮಾನತೆಗೆ, ಸಹೋದರತೆಗೆ, ಸಹಕಾರ ಮನೋಭಾವನೆಗಳನ್ನು ಪ್ರತಿಪಾದಿಸುವ ಕೋಮು ಸೌಹಾರ್ದತೆಯ ತಾಣಗಳಲ್ಲಿ ಕೊಡೇಕಲ್ ಒಂದಾಗಿದೆ. ಸೂಫಿಸಂತರಲ್ಲಿ ಬಸವಣ್ಣನವರು ಪ್ರಮುಖರಾಗಿ ಕಾಣಿಸಿಕೊಂಡಿದ್ದಾರೆ. ಬೆಳಗಾವಿಯಿಂದ ತನ್ನನ್ನು ಸಾಧನೆಯಲ್ಲಿ ತೊಡಗಿಸಿಕೊಂಡ ಬಸವಣ್ಣ ಪತ್ನಿ ನೀಲಮ್ಮನೊಂದಿಗೆ ಲೋಕಸಂಚಾರಗೈಯುತ್ತಾ ಅನೇಕ ಶಿಷ್ಯಂದಿರನ್ನು ಪಡೆದುಕೊಂಡನು. ಇಂತಹ ಬಸವಣ್ಣನ ಬಾಹ್ಯವೇಷ ಕುರಿತು ಹೀಗೆ ಕವಿ ಹಾಡಿದ್ದಾರೆ.

"ಯೋಗಿ ದರ್ಶನದವರು ಜೋಳಿಗೆ
ಜೋಗಿ ದರ್ಶನದವರು ಪಾತ್ರೆಯು
ಆಗ ಶ್ರವಣರು ಕರ ಪಾತ್ರೆಯಲಿ ಬೇಡಿ ಉಣುತಿಹರು,
ಸಾಗಿ ಸನ್ಯಾಸದವರು ಉಲುಪಿಯ
ಈಗ ಪಶುಪತಿಯುವರು ಗೋಪಾಳ
ಬೇಗ ಕಾಳಾಮುಖಿಯ ಕಪ್ಪರ ಆರೋಪರಿಗೆ ಹಾಡಿ"[9]

ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಪಶುಪತಿ ಹಾಗೂ ಕಾಳಾಮುಖ ಎಂಬುವುಗಳನ್ನು ದರ್ಶನ ಮಾಡಿಸಿದ ಬಸವಣ್ಣನು ಅವುಗಳ ಭಿಕ್ಷಾಪಾತ್ರೆಯ ಹೆಸರು ಹಾಗೂ ತನ್ನ ಗುರುವಾದ ಆರೂಢರವರನ್ನು ಪರಿಚಯಿಸುತ್ತಾನೆ.

**ಕೊಡೇಕಲ್ ಬಸವಣ್ಣನವರ ಪವಾಡಗಳು:**

ಬಸವಣ್ಣನವರ ಪವಾಡಗಳು ಇತ್ತೀಚೆಗೆ ಬೆಳಕಿಗೆ ಬಂದ ಸಂಗತಿ 'ಸಿದ್ದರಾಮಪುರದ ಶ್ರೀ ಕೊಡೇಕಲ್ ಬಸಪ್ಪಯ್ಯ ಮತ್ತು ವಿರುಪಯ್ಯನವರ ಜೀವನ ಚರಿತ್ರೆ' ಎಂಬ ಕಿರು ಪುಸ್ತಕದಿಂದ ತಿಳಿದುಬಂದಿದೆ. ಹೀಗಾಗಿ ಈ ಪುಸ್ತಕದಲ್ಲಿನ ಕೆಲವೊಂದು ಪವಾಡಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಗಂಗಾವತಿ ತಾಲೂಕಿನ ಬೂದಗುಂಪಾ ಗ್ರಾಮದಲ್ಲಿನ ಪವಾಡ, ಸಿಂಧನೂರು ತಾಲೂಕಿನ ಬೂದಿವಾಳ ಗ್ರಾಮದ ಪವಾಡ, ಸಿದ್ಧರಾಮಾಪುರದ ಪವಾಡ, ಮಾವಿನ ಮಡ್ಡು ಗ್ರಾಮದಲ್ಲಿಯ ಪವಾಡ,

ಕನ್ನಾರಿಯಲ್ಲಿ ನಡೆದ ಪವಾಡ, ಮಾಡ ಶಿರಿವಾರದ ಪವಾಡ, ಆಕಳ ಕುಂಪಿ ವಾಲ್ಮೀಕ ಮಹಿಳೆಗೆ ಪುತ್ರ ವರದಾನ, ಹೊಸಪೇಟೆ ಕೊಟ್ರಪ್ಪ ಅವರ ಧರ್ಮಪತ್ನಿ ಸುಮಂಗಲೆಗೆ ವರದಾನ ಮತ್ತು ಆನೆಗೊಂದಿಯ ಹತ್ತಿರ ಹರಿಗೋಲಿಲ್ಲದೆ ನದಿ ದಾಟಿದ ಪವಾಡ ಮುಂತಾದವುಗಳನ್ನು ಗಮನಿಸಿದಾಗ ಬಸವಣ್ಣನವರು ದೇಶಸಂಚಾರವನ್ನು ಕೈಗೊಂಡು ತಮ್ಮದೇ ಆದ ಶರಣ ನುಡಿಯನ್ನು ಮನಬಿಚ್ಚಿ ನುಡಿದಿರುವ ವಾಸ್ತವಿಕ ಚಿತ್ರಣವನ್ನು ಎರಡು ಪವಾಡಗಳಲ್ಲಿ ಕಾಣಬಹುದು.

**ಆನೆಗೊಂದಿಯ ಹತ್ತಿರ ಹರಿಗೋಲಿಲ್ಲದೆ ನದಿ ದಾಟಿದ ಪವಾಡ:**

ದವನದ ಹುಣ್ಣಿಮೆ, ಬೇಸಿಗೆ ಕಾಲದಲ್ಲಿ ಜನರು ಪಂಪಾ ಮಹೇಶನ ಜಾತ್ರೆಗೆ ಹೋಗುತ್ತಿರುವಾಗ ಬಸಪ್ಪಯ್ಯ, ಶಿವಶರಣರು ಆನೆಗೊಂದಿ ನದಿ ದಂಡೆಯ ಮೇಲೆ ಕುಳಿತಿರುವಾಗ ಜನರು ಹರಿಗೋಲಿನಲ್ಲಿ ಕುಳಿತು ಅಲೇ ತಮ್ಮಾ, ನಾವು ಬರುತ್ತೇವೆ. ನಮ್ಮ ಹತ್ತಿರ ದುಡ್ಡು ಎಲ್ಲಿಂದ ಬರುತ್ತದೆ. ನಾನೊಬ್ಬನು ನಿನಗೆ ತ್ರಾಸು ಕೊಡುತ್ತೇನಯೇ? ಎಂದು ನಾವಿಕನನ್ನು ಕೇಳಿದರು. ಅದಕ್ಕೆ ನಾವಿಕನು ಇರಲಿ ಹೋಗೋ, ಹುಚ್ಚಾ ಉದಯದಿಂದ ಸಾಯಂಕಾಲದವರೆಗೆ ನಿಮ್ಮಂತಹ ಸಾಧುಗಳು, ಸನ್ಯಾಸಿಗಳು ಇಂಥಹವರನ್ನೇ ದಾಟಿಸುವದಾಗಿದೆ. ನಮ್ಮ ಬಾಳು, ಒಬ್ಬರಾದರೂ ದುಡ್ಡುಕೊಡುವಂತಿಲ್ಲ, ಮನೆಯಲ್ಲಿ ನಮ್ಮ ತಂದೆಯು ಬಯ್ಯುತ್ತಿದ್ದಾನೆ ಇರಲಿ ಹೋಗೋ ನಿಮ್ಮಂಥವರನ್ನೇ ದಾಟಿಸಿ ದಾಟಿಸಿ ಸಾಕಾಗಿ ಹೋಗಿದೆ. ಮತ್ತು ಹಣವಿಲ್ಲದೆ ಬರೀ ಕೈಲಿ ಮನೆಗೆ ಹೋಗುವುದಾಗಿದೆ, ಎಂದಾಗ ಹರಿಗೋಲಿನಲ್ಲಿ ಕುಳಿತಂಥ ಓರ್ವ ಪ್ರಾಂತಸ್ತ, ಅಂದರೆ ಓರ್ವ ಯಜಮಾನನು ಏ..... ತಮ್ಮಾ, ಅವರ ದುಡ್ಡನ್ನು ನಾನು ಕೊಡುತ್ತೇನೆ. ಅವರೊಬ್ಬರು ಏನು ವಜ್ಜೆ ಆಗುತ್ತಿದ್ದಾರೆಯೇ, ಕುಳ್ಳಿರಿಸಿಕೋ ಎಂದು ಹೇಳಿದರೂ ಕೇಳದೆ ನಾವಿಕನು ಹಾಗೆಯೇ ಹರಿಗೋಲನ್ನು ಸಾಗಿಸಿದ.

ಅರ್ಧ ನದಿಗೆ ಹೋಗಿರಬಹುದು ಹರಿಗೋಲು, ಬಸಪ್ಪಯ್ಯ ತಾತನವರು ಹೋಗಿ ಆಚೆಯ ದಡದಲ್ಲಿ ಕುಳಿತಿದ್ದರು. ಹರಿಗೋಲಿನಲ್ಲಿ ಕುಳಿತಿದ್ದ ಯಜಮಾನನು ಆಚೆ ದಡದಲ್ಲಿದ್ದವರು ಈಚೆ ದಂಡೆಗೆ ಬಂದು ಕುಳಿತಿರುವ ಶರಣರನ್ನು ಕಂಡು ಗಾಬರಿಯಾದನು. ಹರಿಗೋಲಿನಿಂದಿಳಿದು ತಾತನವರ ಪಾದಕ್ಕೆ ನಮಸ್ಕರಿಸಿ, ತಾತಾ ನೀವು ಆ ಕಡೆ ದಂಡೆಯಲ್ಲಿ ಇದ್ದವರು ಹೇಗೆ ಬಂದಿರಿ ಎಂದು ಕೇಳಿದನು. ನಾವು ಕಾಲು ನಡಿಗೆಯಿಂದಲೇ ಬಂದೆವೆಂದು ತಾತನವರು ಉತ್ತರಿಸಿದರು. ಹರಿಗೋಲಿನ ನಾವಿಕನು ನೋಡು ಎಷ್ಟು ಸುಳ್ಳು ಹೇಳುತ್ತಾನೆ. ಹರಿಗೋಲಿಗೆ ಗಣೆ ನಿಲುಕಲಾರದೆ ಬರೀ ಹುಟ್ಟಿನಿಂದ ಹರಿಗೋಲು ನಡೆಯುತ್ತಿದೆ. ಭಯಂಕರವಾದ ನೀರಿನಲ್ಲಿ ಕಾಲು ನಡಿಗೆಯಿಂದ ದಾಟುವದಕ್ಕೆ ಸಾಧ್ಯವೇ? ಕಾಲು ನಡಿಗೆಯಿಂದ ಬಂದೆವೆಂದು ಹೇಳುತ್ತಾನಲ್ಲಾ, ಈತನೇನು ದೇವರೇ, ಸಾಧುವಾಗಿ ಸುಳ್ಳು ಹೇಳುತ್ತಾನೆ. ಇವನೆಂಥ ಮೋಸಗಾರನಿರಬಹುದು. ಇಂಥಹ ಢಾಂಬಿಕರಿಂದಲೇ ಜಗವೆಲ್ಲವೂ ಅಲ್ಲೋಲ ಕಲ್ಲೋಲವಾಗಿರುವುದು. ಗಾಂಜಾ ಸೇದಿದ ನಿಶೆಯಲ್ಲಿ ಬಾಯಿಗೆ ಬಂದಂತೆ ಮಾತನಾಡುತ್ತಿದ್ದಾನೆ ಎಂದನು.

"ಎಲಾ ಅಂಬಿಗಾ ನಾನು ನಿನ್ನನ್ನು ಮಾತಾಡಿಸಿಯೂ ಇಲ್ಲ. ನಿನಗೆ ತಂಟೆ ತಕರಾರುಗಳನ್ನು ಮಾಡಿಲ್ಲ, ಸುಮ್ಮನೆ ಬಾಯಿಗೆ ಬಂದಂತೆ ಬೊಗಳುತ್ತಿರುವೆಯಲ್ಲಾ ನಿನ್ನ ಎಡಹೆಗಲ ಮೇಲೆ ಮೃತ್ಯು ದೇವತೆ ಕುಳಿತಂತೆ ಕಾಣುತ್ತದೆ. ಬ್ರಹ್ಮ ಬರೆದ ಬರಹವನ್ನು ಅಳುಕಿಸಲು ಹವಣಿಸುತ್ತಿದ್ದಾಳೆ ಇದೋ ನೋಡು, ನಾನೊಂದು ಮಾತು ಹೇಳುತ್ತೇನೆ, ಚೆನ್ನಾಗಿ ಲಕ್ಷ್ಯವಿರಲಿ, ಇನ್ನು ಮೂರು ದಿವಸಗಳಲ್ಲಿ ನಿನ್ನ ಆಯುಷ್ಯವು ಮುಗಿಯಿತು. ಸಾಯುತ್ತಿ, ಈ ಮಾತು ಚೆನ್ನಾಗಿ ಲಕ್ಷದಲ್ಲಿರಲಿ, ಈ ಮಾತು ಸುಳ್ಳಾದರೆ ಜಗತ್ತಿನಲ್ಲಿ ದೇವರಿಲ್ಲವೆಂದು ತಿಳಿ, ಈ ಮಾತು ಸತ್ಯವೋ, ಅಸತ್ಯವೋ ಜಗತ್ತೇ ನಿರ್ಧರಿಸಲಿ, ಇದೇ ಕೊಡೇಕಲ್ ಬಸಪ್ಪಯ್ಯ ಶರಣರವಾಣಿ ಎಂದು ಶಾಪವನ್ನಿತ್ತರು. ಕೊಟ್ಟ ದೇವರ ಇಕ್ಕಿದ್ದೇ ಶಾಪವೆಂಬಂತೆ ಮೂರು ದಿನಗಳೊಳಗೆ ನಾವಿಕನ ಹರಿಗೋಲು ಚಂಡಮಾರುತ ಗಾಳಿ ಹೊಡೆತಕ್ಕೆ ಸಿಲುಕಿ ನಾವಿಕನು ಮೃತಪಟ್ಟನು."[೧]

**ಸಿದ್ಧರಾಮಾಪುರದ ಪವಾಡ :**

ಸಿದ್ಧರಾಮಾಪುರ ರಾಯಚೂರ ಜಿಲ್ಲೆಯ ಸಿಂಧನೂರು ತಾಲ್ಲೂಕಿನ ಒಂದು ಗ್ರಾಮ. ಶರಣರು ವಾಸಿಸುವ ಸ್ಥಳ. ಶರಣರು ಸಿದ್ಧರಾಮಪುರ ಗ್ರಾಮದಲ್ಲಿ ಹ್ಯಾಟಿ ನಾಗಪ್ಪನ ಹತ್ತಿರ ಹೋಗಿ ಅಲೇ ನಾಗಪ್ಪಾ, ನಿನ್ನ ಹೆಂಡತಿಯ ಸೀರೆಯನ್ನು ಕೊಡಿಸು ಎಂದು ಕೇಳಿದರು. ಅದಕ್ಕೆ ಆತನು ಆಗಲಿ ತಾತಾ ಎಂದು ಮನೆಯೊಳಗೆ ಹೋಗಿ ಒಂದು ಹೊಸ ಸೀರೆಯನ್ನು ತೆಗೆದು ಕೊಂಡು ಬಂದು ತಾತನವರಿಗೆ ಕೊಡಲಿಕ್ಕೆ ಹೋದನು. ನಾನು ಕೇಳಿದ ಸೀರೆ ಬೇರೆ, ನೀನು ಬೇರೆ ಸೀರೆಯನ್ನು ಕೊಡಲಿಕ್ಕೆ ಬಂದಿರುವಿಯಲ್ಲಾ ನಿನ್ನ ಪ್ರಪಂಚವೇ ಬೇರೆ ಬೇರೆಯಾಗುತ್ತೆ ನಡೆ ಎಂದರು. ಆಗ ಅವನ ಹೆಂಡತಿಯು ಗರ್ಭಿಣಿಯಾಗಿದ್ದಳು. ಹೆರಿಗೆ ಕಾಲದಲ್ಲಿ ಬಹಳ ಶ್ರಮಪಟ್ಟು ಹೆರಿಗೆಯಾಗಲಾರದೆ ತೀರಿಹೋದಳು. ಆಗ ಅಲ್ಲಿಂದ ವಡ್ಡರ ಜನಾಂಗದವರ ಓಣಿಯಲ್ಲಿ ತಿರುಗಾಡುತ್ತಿದ್ದಾಗ ತನಗೆ ಬೇಕಾದವರನ್ನು ಮಾತನಾಡಿಸುತ್ತಿದ್ದ. ಒಂದು ದಿವಸ ತಿಮ್ಮಪ್ಪ ಎಂಬ ಭಕ್ತನಿಗೆ, ಏಲೇ.... ತಮ್ಮಾ ನಿನ್ನ ಹೆಂಡತಿಯನ್ನು ಕೊಡುತ್ತೀಯಾ ಎಂದು ಕೇಳಲು ತಾತನವರ ಸ್ವಭಾವವನ್ನರಿತ ತಿಮ್ಮಪ್ಪನು ಆಗಲಿ ತಾತಾ ಕೊಡುತ್ತೇನೆ.

"ನೀನು ಮಾಡಿದ್ದು ನಿನಗೇಕೆ ಇಲ್ಲ. ಎಂದು ತಿಮ್ಮಪ್ಪನು ಹೇಳಿದನು. ಏಲೇ.... ತಮ್ಮಾ ನಾನು ಕೇಳಿದಾಗಲೆಲ್ಲಾ ಹೀಗೆಯೇ ಮಾತನಾಡುತ್ತಿರುವೆಯಲ್ಲಾ, ನಿನ್ನಲ್ಲಿ ಸ್ವಲ್ಪವಾದರೂ ಶೌರ್ಯ ವಿಲ್ಲವೇನು ಎಂದು ಕೇಳಿದರು. ತಾತ ನವರ ಮಾತಿಗೆ ತಿಮ್ಮಪ್ಪನು ಅಂದದ್ದೇನೆಂದರೆ ತಾತಾ ನಿಮ್ಮ ಮೇಲೆ ಸಿಟ್ಟು ಮಾಡಿ ನಾನು ಯಾವ ನರಕಕ್ಕೆ ಹೋಗಲಿ ತಾತಾ. ನೀವು ಈ ಊರಲ್ಲಿ ವಾಸವಾದಾಗಿನಿಂದ ಈ ಸಿದ್ಧರಾಮಪುರವೆಂಬುದು ಕೈಲಾಸವಾದಂತಾಗಿದೆ. ಈ ಊರಿನಲ್ಲಿ ನೀವು ವಾಸ ಮಾಡಿದಾಗಿನಿಂದ ಈ ಊರಿನ ಕೀರ್ತಿಯು ಅಜರಾಮರವಾಗಿ ಆ ಚಂದ್ರಾರ್ಕ ಪರಿಯಂತ ಉಳಿಯುವಂತೆ ನಿನ್ನ ಕೀರ್ತಿಯು ದಿವ್ಯದಿಗಂತ ತೇಜಸ್ಸು ಬೆಳಗತೊಡಗಿದೆ ಎಂದು ತಿಮ್ಮಪ್ಪನು ಹೇಳಿದನು. ಅದಕ್ಕೆ ತಾತನವರು ತಿಮ್ಮಪ್ಪನ

ಮಾತಿಗೆ ಹಸನ್ಮುಖರಾಗಿ ನಗುನಗುತ್ತಾ ಹೊರಟು ಹೋದರು. ಇಂತೀ ಶರಣರ ಅಗಾಧವಾದ ಲೀಲಾಮಯರಾದ ಶಿವ ಶರಣರ ಮರ್ಮವು ತಿಳಿದು ಬರುತ್ತದೆ".[೧೪]

**ನೀಲಮ್ಮ :**

ಕೊಡೇಕಲ್ಲ ಬಸವಣ್ಣನವರ ಎರಡನೇ ಪತ್ನಿ ನೀಲಮ್ಮ. 'ವಡ್ಡಿನ' ಗ್ರಾಮದ ಶೆಟ್ಟಿಲಿಂಗಣ್ಣ ಸಂಗಾಜಮ್ಮರ ಮಗಳಾದ ಕಾಶಮ್ಮರು ಬಸವಣ್ಣನವರು ಮದುವೆಯಾದ ಕೆಲವರ್ಷಗಳಲ್ಲಿ ತೀರಿಕೊಳ್ಳುತ್ತಾರೆ. ಆಗ ಬಸವಣ್ಣನವರು ಬೆಳಗಾವಿ ಪಂಚವಣ್ಣಿಗೆಯ ಮಠದ ಮಹಾದೇವಮ್ಮನನ್ನು (ನೀಲಮ್ಮಳನ್ನು) ಎರಡನೇ ಪತ್ನಿಯಾಗಿ ಸ್ವೀಕರಿಸುತ್ತಾರೆ. ನೀಲಮ್ಮ ೧೨ ನೇ ಶತಮಾದ ಶಿವಶರಣಿ ನೀಲಮ್ಮಳ ಅನುಭವ ಪಡೆದು ಅಭಿನವ ನೀಲಮ್ಮಳೆಂದು ಪ್ರಸಿದ್ಧಿಯಾಗಿದ್ದಾರೆ. ಇಂತಹ ನೀಲಮ್ಮಳಿಗೆ ಮಕ್ಕಳಾಗದ ಕಾರಣ ತಂಗಡಿಯಲ್ಲಿ ಬಂದು ನೆಲೆಸಿದಳೆಂಬ ಪ್ರತೀತಿಯಿದೆ. ಆಕೆಯ ಸಾಮಾಜಿಕ ಬದುಕಿನ ನುಡಿಗಳನ್ನು ಹಾಗೂ ಹೆಣ್ಣಿನ ಬದುಕಿನ ಸಾಂಸ್ಕೃತಿಕ ಲೋಕದ ವಿಚಾರಗಳು 'ನಂದಿಯಾಗಮ ಲೀಲೆ' ಯಲ್ಲಿ ಹೀಗೆ ವ್ಯಕ್ತಿಗೊಂಡಿವೆ.

"ಪುಣ್ಯ ಫಲವನು ಕಾಣಲಿಲ್ಲವೊ
ಹೆಣ್ಣು ಜನ್ಮವು ಸುಡಲಿ ಎನುತಲಿ
ಕಣ್ಣಿನಿಂದಲೆ ದುಃಖ ಸೋಸುತ ಇಂದು ತಲೆವಾಗಿ
ಎಣ್ಣೆ ಬಲುಮಿಲಿ ದೀಪ ಉರಿವುದು
ತಣ್ಣಗಾದರೆ ತಮವು ಮುಸುಕಿತು
ಬಣ್ಣಗಾರಿಕೆಯಿಂದ ಲಿಂಗೈಕ್ಯಳು ನಿಮ್ಮ ನಿರ್ದಯದಿ"[೧೫]

ಹೀಗೆ ಸಾಹಿತ್ಯ ರಚಿಸಿರುವ ನೀಲಮ್ಮ ಮಹಿಳಾ ಪರವಾದ ಚಿಂತನೆಗಳನ್ನು ತನ್ನದಾಗಿಸಿಕೊಂಡು ಗಂಡನ ಲೋಕ ಸಂಚಾರದೊಳಗೆ ಕಷ್ಟಸಹಿಷ್ಣೆಯಾಗಿ ಬದುಕಿದ ನೀಲಮ್ಮ ಸಾಂಸ್ಕೃತಿಕ ಲೋಕದಲ್ಲಿ ತನ್ನದೇ ಆದ ಸ್ಥಾನಮಾನವನ್ನು ಕಂಡುಕೊಂಡಿದ್ದಾಳೆ.

ಕೊಡೇಕಲ್ ಬಸವಣ್ಣನ ಮಕ್ಕಳಾದ ಗುಹೇಶ್ವರ ಗುರುಮಠದ ಉತ್ತರಾಧಿಕಾರತ್ವ ಪಡೆದುಕೊಂಡು ಗುಹೇಶ್ವರ ಅಂಕಿತದಿಂದ ಅನೇಕ ತತ್ವಪದಗಳನ್ನು ರಚಿಸಿದರೆ, ಮೂರನೆಯ ಮಗನಾದ ಸಂಗಪ್ಪಯ್ಯನು ಬಹುಮುಖ ವ್ಯಕ್ತಿತ್ವದ ಸಾಧಕನಾಗಿ ಕನಕದಾಸನೊಂದಿಗೆ ಕಾಗಿನೆಲೆಗೆ ಹೋಗಿ ಮರಳಿ ಬರಲಿಲ್ಲವೆಂಬ ಇತಿಹಾಸವಿದೆ. ಕನಕದಾಸನ ಗದ್ದಿಗೆಯ ಬಲಭಾಗದಲ್ಲಿಯೇ ಈತನ ಗದ್ದಿಗೆಯಿದ್ದು, ಪ್ರತಿವರ್ಷದ ಶಿವರಾತ್ರಿಯ ಮರುದಿನ ಇಲ್ಲಿ ಜಾತ್ರೆ ಆಚರಿಸುವುದು ಕಾಣಬಹುದಾಗಿದೆ.

**ಖ್ವಾಜಾ ಬಂದೇ ನವಾಜು ದರ್ಗಾ:**

ದೇಶದಲ್ಲೆಲ್ಲಾ ಚಿರಪರಿಚಿತವಾದ ಖ್ವಾಜಾ ಬಂದೇ ನವಾಜ್ ದರ್ಗಾವು ಗುಲಬರ್ಗಾದಲ್ಲಿದೆ. ಸೂಫಿ ನಾಸ್ರುದ್ದೀನನ ಶಿಷ್ಯನಾಗಿದ್ದ ಖಾಜ ಬಂದೇ ನವಾಜ್ ಅವರು ಗುಲಬರ್ಗಾದಲ್ಲಿ ನೆಲೆ ನಿಂತು ನಾಡಿನಾದ್ಯಂತ ಕೋಮು ಸೌಹಾರ್ದತೆಯ ಭಾವವನ್ನು ತುಂಬಿದವರು. ಬಂದೇ ನವಾಜ್ ಎಂದರೆ ಜನರನ್ನು ಉದ್ಧಾರ ಮಾಡುವವನೆಂದರ್ಥ. ಸುಮಾರು ೬೦ ವರ್ಷಗಳ ವಯಸ್ಸಾಗಿದ್ದ ಬಂದೆ ಜವಾಜ್ ಅವರು ಗೇಸುದಾರಾಜ್ (ಉದ್ದೇಶವುಳ್ಳವನು) ಎಂಬ ಬಿರುದನ್ನು ಪಡೆದುಕೊಂಡಿದ್ದರು. ಖಾಜ ಬಂದೇ ನವಾಜ್ ಅವರು ಗುಲಬರ್ಗಾದಲ್ಲಿ ಬಂದೇ ನವಾಜ್ ದರ್ಗಾವನ್ನು ಕಟ್ಟಿಸುವ ಕೆಲಸಗಾರರಲ್ಲಿ ಬಬ್ಬನಾಗಿದ್ದನು. ಅಂದರೆ ಕೆಲಸ ಮಾಡುವ ಕೂಲಿಯಾಳು ಎಂದರ್ಥ.

**ಮದುವೆ:**

ಜ್ಞಾನ ಸಂಪಾದನೆಯ ಕಡೆ ಲಕ್ಷ್ಯವನ್ನು ಕೇಂದ್ರೀಕರಿಸಿಕೊಂಡ ಖ್ವಾಜಾ ಬಂದೇ ನವಾಜರಿಗೆ ಮದುವೆಯ ಯೋಚನೆಯೇ ಹೊಳೆದಿರಲಿಲ್ಲವೆನಿಸುತ್ತದೆ. ತಾವಾಯಿತು ತಮ್ಮ ವಿದ್ಯೆಯಾಯಿತು ಎಂಬುದರಲ್ಲೇ ಬೈಗು – ಬೆಳಗಾಗುತ್ತಿತ್ತು. ಸಾಧನೆಯ ಶಿಖರದಲ್ಲಿರುವವರಿಗೆ ಸಾಂಸಾರಿಕ ನೆನಪುಗಳು ಕಾಡಲೇ ಇಲ್ಲ. ಆದರೆ ಹೆತ್ತ ತಾಯಿಗೆ ಮಗನ ಮದುವೆಯ ಆಲೋಚನೆಯ ಆ ಯೋಚನೆಯೇ ಅವರನ್ನು ಕಾಡುತ್ತಿರಬೇಕು. ಒಳಗೊಳಗೆ ಕುದಿಯುತ್ತಿದ್ದ ಮಾತೃವಾತ್ಸಲ್ಯದ ಆ ಜ್ವಾಲೆ ಒಂದು ದಿನ ಹೊರಬಿತ್ತು. ತಾಯಿಯ ಒತ್ತಾಸೆಯ ಮೇರೆಗೆ ಖ್ವಾಜಾ ಬಂದೇ ನವಾಜರು ಮದುವೆಗೆ ಒಪ್ಪಿದರು. ದೆಹಲಿಯ ಸೂಫಿ ಸಂತರುಗಳಲ್ಲಿ ಹೆಸರಾದ ಸಯ್ಯದ್ ಅಹ್ಮದ್ ಬಿನ್ ಹಜ್ರತ್ ಮೌಲಾನಾ ಸಯ್ಯದ್ ಜಮಾಲೆ ಮಗ್ರಬಿಯವರ ಮಗಳಾದ ಬೀಬಿ ರಜಾಖಾತೂನ್ ಎಂಬ ಕನ್ಯೆಯೊಡನೆ ಸರಳ ರೀತಿಯಲ್ಲಿ ಮದುವೆಯಾಯಿತು. ಮದುವೆಯಾದ ನಂತರವೂ ಸಂಸಾರಕ್ಕೇನೆ ಅಂಟಿಕೊಂಡು ಬೀಳಲಿಲ್ಲ.

**ಮಕ್ಕಳು :**

ಖ್ವಾಜಾ ಬಂದಾನವಾಜರಿಗೆ ಇಬ್ಬರು ಗಂಡು ಮಕ್ಕಳು ಹಾಗೂ ಮೂವರು ಹೆಣ್ಣು ಮಕ್ಕಳಿದ್ದರು. ತಂದೆಯ ವಿಚಾರಧಾರೆಯಲ್ಲಿಯೆ ಬೆಳೆದು ಗಂಡು ಮಕ್ಕಳು ಶ್ರೇಷ್ಠ ವಿದ್ವಾಂಸರಾಗಿದ್ದರು. 'ಖಲೀಫಾ'ದಂತಹ ಉನ್ನತ ಸ್ಥಾನಕ್ಕೇರಿ ಆಧ್ಯಾತ್ಮಿಕ ಬೋಧನೆಯಲ್ಲಿ ವಿಚಾರಗಳನ್ನು ಜನರಿಗೆ ತಿಳಿಸುತ್ತಿದ್ದರು. ಮಕ್ಕಳ ಏಳ್ಗೆಯನ್ನು ನೋಡಿ ಖ್ವಾಜಾ ಬಂದೇ ನವಾಜರು ಸುಖ ಸಂತೋಷದಲ್ಲಿದ್ದರು. ಒಬ್ಬ ತಂದೆಗೆ ಅದು ಸೂಫಿ ಸಂತನಾದವನಿಗೆ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು. ಆದರೆ ದುರ್ದೈವ. ಈ ಸುಖ – ಸಂತೋಷವನ್ನು ನೋಡುವ ಭಾಗ್ಯ – ವಿಧಿಗೆ ಬೇಕಾಗಿರಲಿಲ್ಲವೆಂದು ತಿಳಿಯುತ್ತದೆ. ದೊಡ್ಡ ಮಗನಾದ ಹಜ್ರತ್ ಸಯ್ಯದ್ ಹುಸೇನ ಉರ್ಫ ಸಯ್ಯದ್ ಮುಹ್ಮದ್ ಅಕ್ಬರ್‌ರವರು ಒಮ್ಮಿಂದೊಮ್ಮೆಲೆ ತೀರಿಕೊಂಡರು. ಈ ಲೋಕದ ಬದುಕಿಗೆ ವಿದಾಯ ಹೇಳಿದರು.

ಎರಡನೆಯ ಮಗನಾದ ಹಜ್ರತ್ ಸಯ್ಯದ್ ಮುಹಮ್ಮದ ಆಸ್ಕರ್ ಹುಸೇನಿಯವರು ತಮ್ಮ ತಂದೆಯವರ ಆಧ್ಯಾತ್ಮಿಕ ದಾರಿಯಲ್ಲೆ ಮುಂದೆ ಸಾಗಿದವರು. ತಂದೆಯ ಧಾರ್ಮಿಕ ನಿಧನಾನಂತರ ಅವರ ತೆರವಾದ ಸ್ಥಳದಲ್ಲಿ ಆಧ್ಯಾತ್ಮಿಕ ಸ್ಥಾನವನ್ನು ಅಲಂಕರಿಸಿದರು. ಮೂವರು ಹೆಣ್ಣು ಮಕ್ಕಳಲ್ಲಿ ಹಿರಿಯ ಮಗಳು ಬೀಬಿಫಾತಿಮಾ, ಎರಡನೆಯವಳು ಬೀಬಿಬತೂರ್, ಮತ್ತು ಮೂರನೆಯವಳು ಬೀಬಿ ಉಮ್-ವ್-ದೀನರಾಗಿದ್ದರು. ಖ್ವಾಜಾ ಬಂದೇ ನವಾಜರ ವಂಶಾವಳಿಯನ್ನು ಈ ರೀತಿ ಗಮನಿಸಬಹುದು.

**ಗುರುಶಿಷ್ಯರ ಸಂಬಂಧ :**

ಹಿಂದೂ ಸಂಪ್ರದಾಯದಲ್ಲಿ ಸನ್ಯಾಸಿ ಮಠ – ಮಾನ್ಯಗಳಲ್ಲಿರುವ ಗುರು ಮತ್ತು ಮುಮುಕ್ಷು ಸಂಬಂಧಿಸಿದಂತೆ ಗೇಸುದರಾಜರ ಬೋಧನೆಯಲ್ಲಿ ಸಹ ಖಾನ್ ಖಾಹ್‌ನಲ್ಲಿ ಪೀರ್ ಮುರೀದ್ ಸಂಬಂಧಗಳು ಇವೆ. ಗೇಸೂದರಾಜರು ಹೇಳುವಂತೆ ಅಲ್ಲಾಹ್ ಪೀರ್ – ಮರೀದ್ ತ್ರಿವಿಧ ಸಂಬಂಧವಿದೆ. "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' ಎನ್ನುವಂತೆ ದೇವರನ್ನು ಕಾಣಬೇಕನ್ನುವ ಶಿಷ್ಯನು ನೇರವಾಗಿ ಭಗವಂತನನ್ನು ಕಾಣಲು ಸಾಧ್ಯವಿಲ್ಲ. ಗುರುವಿನ ಅಂತಃಕರಣದಲ್ಲಿ ದೇವರನ್ನು ಕಾಣುತ್ತಾನೆ. ಗುರು ಎನ್ನುವವನು ತಿಳಿನೀರಿನ ಹಾಗೆ ತಿಳಿನೀರಿನಲ್ಲಿ ಸೂರ್ಯ ಬಿಂಬವನ್ನು ಕಾಣುವಂತೆ, ಗುರುವಿನ ಹೃದಯದಲ್ಲಿ ದೇವರನ್ನು ಕಾಣುತ್ತಾನೆ. ಗುರುವನ್ನೇ ಭಗವಂತನೆಂದು ಪೂಜ್ಯಭಾವದಿಂದ ಕಾಣಬೇಕು. ಸಮರ್ಪಣ ಭಾವದಿಂದ ತನುಮನಭಾವದಿಂದ ಅರ್ಪಿಸಬೇಕು. ಸತಿ-ಪತಿ ಭಾವವುಳ್ಳವರಾಗಬೇಕು. ಗುರುವಿನ ಪ್ರೀತಿಯಿಂದ ಎಂದೂ ವಿಮುಖನಾಗಬಾರದು. ಗುರು ಸಾನಿಧ್ಯದಲ್ಲಿ ಪಿಸು ಮಾತಿನಿಂದ ಸಂವಾದ ಮಾಡಬೇಕು. ಗುರುವಿನ ಆದೇಶವನ್ನು ಪ್ರಶ್ನಿಸದೇ ಈಡೇರಿಸಬೇಕು.

**ತಿಳುವಳಿಕೆಯ ಮಾತುಗಳು :**

"ಒಬ್ಬ ಭಿಕಾರಿಯು ಮತ್ತೊಬ್ಬ ಭಿಕಾರಿಗೆ ಏನು ಕೊಡಬಲ್ಲ" ಮನುಷ್ಯನ ಆಸೆ ದುರಾಸೆ ಯಾವ ಮಟ್ಟಕ್ಕಿರುತ್ತದೆ. ಅದರಿಂದ ಏನಾಗುತ್ತದೆ. ಎಂಬುದರ ಕುರಿತು ಕಥೆಯೊಂದರ ಮೂಲಕ ಗೇಸೂದರಾಜರು ತನ್ನ ಶಿಷ್ಯವರ್ಗಕ್ಕೆ ಹೀಗೆ ವಿವರಿಸುತ್ತಾರೆ.

ಬಾದಷಹನೊಬ್ಬ ಪ್ರಾರ್ಥನೆ ಸಲ್ಲಿಸಲು ಮಸೀದಿಗೆ ಹೋಗಿದ್ದನು. ಪ್ರಾರ್ಥನೆ ಎಂದರೆ ದೇವರಲ್ಲಿ ಒಳ್ಳೆಯದನ್ನು ಬೇಡುವುದು. ಆದರೆ ಈ ಬಾದಷಹನ ಪ್ರಾರ್ಥನೆಯೆಂದರೆ, ಅಲ್ಲಾಹ್‌ನನ್ನು ಕುರಿತು ರಾಜ್ಯವನ್ನು ವಿಸ್ತರಿಸು. ನನ್ನ ಸಂಪತ್ತನ್ನು ಹೆಚ್ಚಿಸು, ಎಲ್ಲಾ ಬಾದಷಹರಿಗಿಂತಲೂ ನಾನೇ ಮೇಲ್ಮಟ್ಟದ್ದಲ್ಲಿರಲಿ, ಸಕಲ ಸೌಭಾಗ್ಯಗಳನ್ನು ನನಗೆ ಕೊಡು ಎಂದು ಪ್ರಾರ್ಥಿಸುತ್ತಿದ್ದನಂತೆ ಈ ರೀತಿ ಪ್ರಾರ್ಥನೆ ಮಾಡುವುದು ಒಬ್ಬ ಫಕೀರನಿಗೆ ಗೊತ್ತಾಯಿತು. ನಮ್ಮ ಬಾದಷಹನಿಗೆ ಬುದ್ಧಿ ಕಲಿಸುಬೇಕು

ಎಂದು ಯೋಚಿಸಿದನು. ಆತನು ಪ್ರಾರ್ಥನೆ ಮಾಡುವ ಮಸೀದಿಯ ಎದುರು ಬೇಡುವವರ ವೇಷದಲ್ಲಿ ಬಂದು ಮಸೀದೆಯ ಹೊರಗೆ ನಿಂತನು. ಪ್ರಾರ್ಥನೆಯ ನಂತರ ಬಾದಷಹನು ಫಕೀರನಿಗೆ ದಾನವನ್ನು ಮಾಡುತ್ತಿದ್ದನು.

ಈ ಫಕೀರನಿಗೆ ಚಿನ್ನದ ನಾಣ್ಯವನ್ನು ದಾನ ಹಾಕಲು ಭಿಕ್ಷಾಪಾತ್ರೆಗೆ ಹಾಕಿದಾಗ, ಫಕೀರನು ಭಿಕ್ಷಾಪಾತ್ರೆಯನ್ನು ಹಿಂದೆ ತೆಗೆದುಕೊಂಡನು, ಬಾದಷಹರಿಗೆ ಇದರಿಂದ ವ್ಯಥೆಯಾಗಿ ತಟ್ಟೆಯನ್ನು ಏಕೆ ಹಿಂತೆಗೆದುಕೊಂಡೆ ಎಂದು ಕೇಳಿದಾಗ "ಒಬ್ಬ ಭಿಕಾರಿಯು ಇನ್ನೊಬ್ಬ ಭಿಕಾರಿಗೆ ಏನು ದಾನ ಮಾಡಬಲ್ಲ ಎಂದನಂತೆ. ಈ ಮಾತು ಕೇಳಿ ಬಾದಷಹನಿಗೆ ಸಿಟ್ಟು ಬಂತು. ಇವನನ್ನು ದರ್ಬಾರಿಗೆ ಎಳೆತನ್ನಿರಿ ವಿಚಾರಿಸೋಣ ಎಂದು ಬಾದಷಹನು ಆದೇಶಿಸಿದ."[೧೬]

ದರ್ಬಾರಿನಲ್ಲಿ ಎಳೆತಂದು ನಿಲ್ಲಿಸಿದ ಫಕೀರನಿಗೆ ನನ್ನನ್ನು ಭಿಕಾರಿ ಎಂದು ಏಕೆ ಕರೆದೆ ಎಂದು ಪ್ರಶ್ನಿಸುತ್ತಾನೆ. ಆಗ ಫಕೀರನು, ಬಾದಷಹರೆ ಪ್ರಾರ್ಥನೆ ಸಲ್ಲಿಸುವಾಗ ನನ್ನ ರಾಜ್ಯವನ್ನು ವಿಸ್ತರಿಸು ಎಂದು ಕೇಳಿದಿರಿ. ರಾಜ್ಯ ಸುಮ್ಮನೆ ವಿಸ್ತಾರವಾಗುತ್ತದೆಯೆ ಅದಕ್ಕಾಗಿ ಯುದ್ಧ ಮಾಡಬೇಕು. ಸಾವಿರಾರು ಸೈನಿಕರು ಸಾಯುತ್ತಾರೆ. ಕುದುರೆಗಳು ಸಾಯುತ್ತವೆ. ರಕ್ತಪಾತವಾಗುತ್ತದೆ. ಸಾಮ್ರಾಜ್ಯ ವಿಸ್ತರಣೆ ಎಂದರೆ ಕೊಲೆ–ಸುಲಿಗೆ, ಲೂಟಿ, ರಕ್ತಪಾತ ಅಲ್ಲವೆ? ಹಿಂಸೆಯ ಮೂಲಕ ರಾಜ್ಯ ವಿಸ್ತಾರ, ಮಾಡುವುದು, ಅದೆಷ್ಟರ ಮಟ್ಟಿಗೆ ಸರಿ ನೀವೇ ಯೋಚಿಸಿ ಎಂದನು. ಸಂಪತ್ತು ಹತ್ತು ಪಟ್ಟು ಹೆಚ್ಚಲಿ ಎಂದು ಬೇಡಿಕೊಂಡಿರಿ ಸಂಪತ್ತು ಸುಮ್ಮನೆ ಬರುತ್ತದೆಯೆ? ಇದ್ದುಳ್ಳುವರನ್ನು ಬಲಾತ್ಕಾರಿಸಬೇಕು, ಏನೇನೋ ನೆಪಮಾಡಿ ಸುಲಿಗೆ ಮಾಡಬೇಕು. ಅವರ ಮನನೋಯಿಸಬೇಕು. ಇನ್ನೊಬ್ಬರ ಮನನೋಯಿಸಿ ತಂದ ದುಡ್ಡು ನಮ್ಮ ಜೀವನಕ್ಕೆ ಸಂತೋಷ ತರಬಹುದೇ? ಅಂಥ ದುಡ್ಡು ಯೋಗ್ಯ ಕಾರ್ಯಕ್ಕೆ ಉಪಯೋಗವಾಗುವುದೇ ಎಂದು ಕೇಳಿದ.

ಫಕೀರನ ಈ ಮಾತುಗಳನ್ನು ಕೇಳಿದ ರಾಜನಿಗೆ ಬುದ್ಧಿಬಂತು, ಫಕೀರನ ಮಾತು ಸರಿ ಎನಿಸಿತು. ತನ್ನ ತಪ್ಪಿನ ಅರಿವಾಯಿತು. ಅಂದಿನಿಂದ ದೇವರಲ್ಲಿ ನಿಷ್ಕಾಮ ಭಾವನೆಯಿಂದ ಪ್ರಾರ್ಥಿಸತೊಡಗಿದ. ಅಹಿಂಸಾತ್ಮಕ ರೀತಿಯಿಂದ ರಾಜ್ಯಭಾರ ಮಾಡಲೆತ್ನಿಸಿದ. ಒಬ್ಬ ಫಕೀರನು ರಾಜನೊಬ್ಬನಿಗೆ ಕಣ್ಣು ತೆರೆಸಿದನೆಂದು ಗೇಸೂದ ರಾಜರು ದೃಷ್ಟಾಂತದ ಮೂಲಕ ತಮ್ಮ ಶಿಷ್ಯರಿಗೆ ತಿಳಿಸಿದರು.

ಸೂಫಿ ಸಂತರುಗಳು ಅಲ್ಲಾಹ್‌ನ ರಾಜ್ಯದ ಪ್ರತಿನಿಧಿಗಳಲ್ಲಿ ಯಾರಿಗೂ ಹೆದರಬೇಕಾಗಿಲ್ಲ ಯಾರ ಹಂಗಿನಲ್ಲೂ ಬದುಕಬೇಕಾಗಿಲ್ಲ. ಈ ಸಾಮ್ರಾಜ್ಯ ಅಲ್ಲಾಹ್‌ನದು ಎಂದು ಬಲವಾಗಿ ನಂಬಿ ತಮ್ಮ ಧರ್ಮ ಪ್ರಚಾರವನ್ನು ಮಾಡುತ್ತಿದ್ದರು. ಸಮಾಜದ ಎಲ್ಲ ಜನರ ಪ್ರೀತಿಗೆ ಪಾತ್ರರಾಗಿದ್ದರು. ಸರ್ವಜನಾಂಗವನ್ನು ಮಮತೆ ಮಡಿಲಲ್ಲಿ ಇಟ್ಟುಕೊಳ್ಳಬಾರದು ಆಸೆ ಸರ್ವನಾಶಕ್ಕೆ ದಾರಿ, ಆಸೆ ದುಃಖಕ್ಕೆ ಕಾರಣ ಎಂದು ತಮ್ಮ ಶಿಷ್ಯನಿಗೆ ತಿಳಿಸಿದರು. ಬೋಧಿಸಿದರು. ನಡೆಯಲು ಪ್ರೇರೇಪಿಸಿದರು.

**ಹಿಂದು – ಮುಸ್ಲಿಂರ ಐಕ್ಯತೆ :**

ಹಿಂದು – ಮುಸ್ಲಿಂರು ಈ ನೆಲದಲ್ಲಿ ಕೂಡಿ ಬಾಳಬೇಕಿದೆ, ಬದುಕಬೇಕಿದೆ. ಈ ಹಿನ್ನೆಲೆಯಲ್ಲಿ ಬಂದೇ ನವಾಜರು ಮತ – ಧರ್ಮದ ಸೇತುವೆಯಾಗಿ ನಮ್ಮೆದುರು ನಿಲ್ಲುತ್ತಾರೆ, ಜನಾಂಗದ ಬಾಳ ಬದುಕಿಗೆ ಮಾರ್ಗವಾಗುತ್ತಾರೆ. ಬಂದೇ ನವಾಜರು ಹಿಂದು – ಮುಸ್ಲಿಂರ ಐಕ್ಯತೆಗಾಗಿ ಶ್ರಮಿಸಿ ಇಸ್ಲಾಂ ಧರ್ಮದ ಬೆಳವಣಿಗೆಯಲ್ಲಿ ಒಂದು ವಿಶಿಷ್ಟ ಹೆಜ್ಜೆಯಿಟ್ಟರು. ಆ ಕಾಲದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಇದೊಂದು ದಿಟ್ಟ ಹೆಜ್ಜೆ. ಇವರು ಹಾಗೂ ಇವರ ಶಿಷ್ಯ ಪರಂಪರೆಯಲ್ಲಿ ಹಿಂದೂ ಧರ್ಮದ ಪ್ರಭಾವವು ಮೂಡಿ ನಿಂತು ಚೈತನ್ಯ ಸಂಪ್ರದಾಯವೊಂದು ಹುಟ್ಟಿ ನಿಂತಿತು. ಬಂದೇ ನವಾಜರನ್ನು ಕೇಶವ ಚೈತನ್ಯ ಎಂದು ಕರೆಯುವ ವಾಡಿಕೆಯೂ ಉಂಟು. ಇವರ ಗುರುಬಂಧು ಸಿದ್ದಲಿಂಗ ಎಂಬ ಕವಿ ಬರೆದ ತತ್ವಜ್ಞಾನದ ಗ್ರಂಥವೊಂದು ದೊರಕಿದ್ದು ಈ ದಿಶೆಯಲ್ಲಿ ಹೊಸ ಬೆಳಕನ್ನು ಬೀರುತ್ತದೆ. ಬಂದೇ ನವಾಜರನ್ನು ಕುರಿತು ಬರೆದ ತತ್ಯೇರ್ ಖ್ವಾಜಾ ಗೇಸೂದರಾಜ್ ಎಂಬ ಗ್ರಂಥದಲ್ಲಿ ವಿವರಿಸಲಾಗಿರುವ ಪವಾಡಗಳೊಂದರಲ್ಲಿ ಸಿದ್ದಪ್ಪನ ಉಲ್ಲೇಖವಿದೆ. ಈ ಸಿದ್ದಪ್ಪ ಮತ್ತು ಸಿದ್ದಲಿಂಗ ಕವಿ ಇಬ್ಬರೂ ಏಕ ವ್ಯಕ್ತಿಯಾಗಿರಬಹುದು. ಸಿದ್ಧಲಿಂಗನ ಕವಿತೆ ಇಂತಿದೆ.

ಗುರುಲೇಖ ನಸೀರುದ್ದೀನ ಚಿರಾಘ ದಿಲ್ಲಿ ಕರಾಮತ್ ಕಾ ಪೀರ್‌ವೊ ಪಾತವಲ್ಲಿ (ಲೀ) ಕೈಲಾಖ ಬಂದಾನವಾಜ ನಬೀನೆ ಕಹೆ ಸಿದ್ಧಲಿಂಗ ರಹೋ ಕದಮ್ ತಾನೇ ಬಂದಾನವಾಜರ ಶಿಷ್ಯ ಪರಂಪರೆ ಭಾರತದ ತುಂಬಾ ಹರಡಿಕೊಂಡಿತ್ತು. ಅದು ಮಹಾರಾಷ್ಟ್ರದ ಸಂತಕವಿ ಏಕನಾಥನವರೆಗೆ ಬೆಳೆದುಕೊಂಡು ಬಂದುದು ತಿಳಿದು ಬರುತ್ತದೆ. ಕರ್ನಾಟಕದಲ್ಲಿಯೂ ಆಳಂದ, ಮಾಯಿನಾಳ, ಮಿಡನಾಳ, ಬೀದರ್ ಸಾವಳಗಿಯ ಶ್ರೀ ಶಿವಲಿಂಗೇಶ್ವರ ಮಠದಲ್ಲಿ ಇಂದಿಗೂ ಬಂದಾನವಾಜ ಕೀ ದೋಸ್ತ ರಾ ಹೋದೀನ್ ಎಂದು ದೀನ್ ಜಗಾಯಿಸುತ್ತಾರೆ.

**ಶಿಷ್ಯ ಪರಂಪರೆ :**

**ಕುಸ್ನೂರಿನ ಸಿದ್ಧಯ್ಯಪ್ಪ :**

ಗುಲ್ಬರ್ಗಾದಿಂದ ಮೂರ್‍ನಾಲ್ಕು ಕಿ.ಮೀ.ಗಳ ಅಂತರದಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯದ ಪಕ್ಕದಲ್ಲಿ ಕುಸ್ನೂರು ಎಂಬ ಚಿಕ್ಕ ಗ್ರಾಮವಿದೆ. ಈ ಕುಸ್ನೂರು ಗ್ರಾಮದಲ್ಲಿ ಶ್ರೀ ಸಿದ್ದೇಶ್ವರ ಸ್ವಾಮಿಯ ಮಠವಿದೆ. ಸಿದ್ಧೇಶ್ವರ ಸ್ವಾಮಿಯ ಮೂಲ ಸಮಾಧಿ ಸ್ಥಾನಕ್ಕೆ ತಲುಪಬೇಕಾದರೆ ನೆಲಮಾಳಿಗೆಯಲ್ಲಿ ಮೂರು ತಿರುವುಗಳನ್ನು ನಡುಬಗ್ಗಿಸಿಕೊಂಡೇ ಹೋಗಬೇಕು. ಅಲ್ಲಿ ಮೂಲ ಸಮಾಧಿಯ ದರ್ಶನವಾಗುತ್ತದೆ. ಮೂಲ ಗದ್ದುಗೆಯ ಮೇಲೆ ಸುಮಾರು ಹದಿನೈದು ಅಡಿಗಳ ಅಂತರದಲ್ಲಿ ಬೆಳಕಿಗಾಗಿ ಬೆಳಿಕಿಂಡಿಯೊಂದನ್ನು ಕೊರೆದಿದ್ದಾರೆ. ಅಲ್ಲಿಂದಲೇ ನೇರವಾಗಿ ಬೆಳಕು ನೆಲಮಾಳಿಗೆಯಲ್ಲಿ ಬರುತ್ತದೆ. ಈಗ ವಿದ್ಯುದ್ದೀಪದ ವ್ಯವಸ್ಥೆ ಕೂಡಾ ಇದೆ. ಕಾಲಮಾನ, ಇತಿಹಾಸ, ದಾಖಲೆಗಳಾವು ಸಿಗುವುದಿಲ್ಲ.

ಜನರಾಡುವ ಮಾತಿನ ಮುಖಾಂತರ ಹಾಗೂ ಸದ್ಯ ಮಠದ ಸ್ವಾಮೀಜಿಯ ಮುಖಾಂತರ ಈ ರೀತಿ ತಿಳಿದು ಬರುತ್ತದೆ.

ಈಗ ಖ್ವಾಜಾ ಬಂದಾನಾವಾಜರು ಸಮಾಧಿ ಹೊಂದಿದ ಸ್ಥಳ (ದರ್ಗಾ) ಅದಕ್ಕೆ 'ಸಿಲಫೇನ' ಅಥವಾ ಶಿಲ್ಪಿಗ್ರಾಮ ಎಂದು ಕರೆಯುತ್ತಿದ್ದರಂತೆ ಆ ಶಿಲ್ಪಿಗ್ರಾಮವು ಗಿಡ-ಮರಗಳಿಂದ ಆವೃತ್ತವಾಗಿತ್ತು. ಸ್ಥಳವೊಂದರಲ್ಲಿ ತನ್ನ ಶಿಷ್ಯರೊಂದಿಗೆ ಧ್ಯಾನ- ತಪಸ್ಸು ತಲ್ಲೀನನಾಗಿ ಸಿದ್ಧಯ್ಯಪ್ಪ ಎಂಬ ಶರಣರು ಇರುತ್ತಿದ್ದರಂತೆ.

ಬಹಮನಿ ದೊರೆ ಫೀರೋಜ್‌ಷಾನ ಆಹ್ವಾನವನ್ನು ಮನ್ನಿಸಿ ಖ್ವಾಜಾ ಬಂದೇ ನವಾಜರು ಗುಲ್ಬರ್ಗಾಕ್ಕೆ ಬಂದರು. ಫೀರೋಜ್‌ಷಾ ಹಾಗೂ ಅವನ ತಮ್ಮ ಅಹ್ಮದ್ ಶಾ ಇವರ ಶಿಷ್ಯರಾದರು. ಆದರೆ ಫೀರೋಜ್‌ಷಾನ ಕೊನೆಗಾಲದಲ್ಲಿ ಬಂದೇ ನವಾಜರಿಗೂ ವಿರಸ ಉಂಟಾಯಿತು. ಫೀರೋಜ್‌ಗೆ ತನ್ನ ತರುವಾಯ ತನ್ನ ಮಗ ಹಸನ್ ಪಟ್ಟಕ್ಕೆ ಬರಬೇಕೆಂದು ಬಯಕೆ. ಆದರೆ ಆಗ ರಾಜ್ಯಾಡಳಿತದಲ್ಲಿ ಭಾಗಿಯಾಗಿದ್ದ ಫೀರೋಜ್‌ಷಾನ ತಮ್ಮ ಅಹ್ಮದ ಶಾನೇ ಪಟ್ಟಕ್ಕೆ ಸೂಕ್ತ ಅಧಿಕಾರ ಎಂಬುದು ಬಂದೇ ನವಾಜರ ಅಭಿಮತ. ಈ ಭಿನ್ನಾಭಿಪ್ರಾಯದಿಂದ ಕ್ರುದ್ಧನಾದ ಫೀರೋಜ್‌ಷಾನು ಬಂದೇ ನವಾಜರನ್ನು ಊರಿನಿಂದ ಹೊರಕ್ಕೆ ಹಾಕಿ ಹಸನಾಬಾದದಲ್ಲಿ ಇರುವಂತೆ ಮಾಡಿದ. ಈ ಹಸನಾಬಾದೇ 'ಶಿಲ್ಪಿಗ್ರಾಮ'.

ಅಲ್ಲಿಂದ ಹೊರಬಂದ ಸಯ್ಯದ ಹಜರತ್ ಖ್ವಾಜಾ ಬಂದೇ ನವಾಜರು ಶರಣ ಸಿದ್ಧಯ್ಯಪ್ಪನವರು ಮುಖಾಮುಖಿಯಾಗಿ ಭೇಟಿಯಾಗಿರಬೇಕು. ಸಿದ್ಧಯ್ಯಪ್ಪನವರು ಬಂದೇ ನವಾಜರಿಗೆ ಗೌರವಿಸಿ ಕೂಡ್ರಿ ಕೂಡ್ರಿ ಎಂದಾಗ ಕೂಡಲು ಬಂದಿಲ್ಲ ಇರಲಿಕ್ಕೆ ಬಂದಿದ್ದೇವೆ ಎನ್ನುತ್ತಾರಂತೆ, ಆಯಿತು. ಇರ್ರಿ ಎಂದು ಸಿದ್ದಪ್ಪಯ್ಯನವರು ಹೇಳುತ್ತಾರೆ. ಶರಣ ಸಿದ್ಧಯ್ಯಪ್ಪ ಸೂಫಿ ಸಯ್ಯದ ಹಜರತ್ ಖ್ವಾಜಾ ಬಂದೇ ನವಾಜರ ಆತ್ಮಗಳು ಮಿಲನವಾಗಿ ಒಂದೇ ಎಂಬುದನ್ನು ಸಾಬೀತು ಪಡಿಸುತ್ತವೆ. ನಂತರ ಮಾತು ಕೊಟ್ಟಂತೆ ಸಿದ್ಧಯ್ಯಪ್ಪನವರು ಖ್ವಾಜಾ ಬಂದೇ ನವಾಜರಿಗೆ ಸ್ಥಳವನ್ನು ಬಿಟ್ಟು ಕೊಟ್ಟರಂತೆ ಎಂದು ಜನ ಹೇಳುತ್ತಾರೆ.

**ಸಾವಳಗಿಯ ಶ್ರೀ ಶಿವಲಿಂಗೇಶ್ವರ :**

ಗುಲ್ಬರ್ಗಾ ಜಿಲ್ಲೆಯಲ್ಲಿರುವ ಸಾವಳಗಿಯ ಶ್ರೀ ಶಿವಲಿಂಗೇಶ್ವರ ಮಠವು ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ವಿಶಾಲವಾದ ತೋಟದ ಪ್ರಾಂಗಣದಲ್ಲಿರುವ ಈ ಮಠವು ಭಾವುಕರಿಗೆ ಭಕ್ತಿಯ ದರ್ಶನವನ್ನು ಮಾಡಿಸುತ್ತದೆ. ಶ್ರೀ ಶಿವಲಿಂಗೇಶ್ವರರು ಸಿದ್ಧಿಯ ಸಾಧಕರು. ಇವರ ಮಹಿಮೆಯನ್ನು ಕೇಳಿ ಭಕ್ತರು ತಂಡೋಪತಂಡವಾಗಿ ದರ್ಶನಕ್ಕೆ ಬರಹತ್ತಿದರು. ಈ ಸುದ್ದಿಯನ್ನು ಕೇಳಿ ತಿಳಿದ ಖ್ವಾಜಾ ಬಂದಾನವಾಜರು ಉರುಸಿಗೆ ಕರೆಸಬೇಕೆಂದು ತಮ್ಮ ಶಿಷ್ಯ ರೋಜದ ರಾಜನಿಗೆ ತಿಳಿಸಿದರು. ರಾಜನ ಆಣತಿ, ಬಂದೇನವಾಜರ ಆಪೇಕ್ಷೆಯೆಂಬಂತೆ ಸೇವಕನು ಬಂದು ಗುರು

ಬಂದಾನವಾಜರು ತಮ್ಮನ್ನು ಉರುಸಿಗೆ ಕರೆತರಲು ಹೇಳಿದ್ದಾರೆಂದು ಹೇಳುತ್ತಾನೆ. ಆಗ ಶ್ರೀ ಶಿವಲಿಂಗೇಶ್ವರರು ನಮ್ಮದೇನು ಕೆಲಸ ನಾವು ಬರುವುದಿಲ್ಲವೆಂದು ಹೇಳಿಕಳಿಸುತ್ತಾರೆ. ಈ ಸುದ್ದಿ ರೋಜದ ರಾಜನಿಗೆ ಮುಟ್ಟಿ ಸೇನಾ ಪಡೆಯ ತುಕಡಿಯೊಂದನ್ನು ಕರೆದು ಆ ಜಂಗಮ ಬರದಿದ್ದರೆ ಹಿಡಿದುಕೊಂಡು ಬನ್ನಿರೆಂದು ಅಪ್ಪಣೆ ಮಾಡುತ್ತಾನೆ. ಸಾವಳಿಗೆಗೆ ಬಂದ ಸೈನಿಕರನ್ನು ಶ್ರೀ ಶಿವಲಿಂಗೇಶ್ವರರು ತಮ್ಮ ಸಹಾಯಕನಾಗಿರುವ ಇರುವ ಕಾಳದೈತ್ಯನ ಸಹಾಯದಿಂದ ಸೈನ್ಯವನ್ನು ಹತ್ಯ ಮಾಡುತ್ತಾನೆಂದು ಪುರಾಣದಿಂದ ತಿಳಿದು ಬರುತ್ತದೆ.

**ರಟಗಲ್ ರೇವಣ ಸಿದ್ದೇಶ್ವರರು ಮತ್ತು ಬಂದೇ ನವಾಜರು :**

ರೇವಣ ಸಿದ್ದೇಶ್ವರರ ಕಾಲಕ್ಕೂ ಬಂದೇ ನವಾಜರ ಕಾಲಕ್ಕೂ ಹೊಂದಾಣಿಕೆ ಯಾಗುವುದಿಲ್ಲವಾದರೂ ಆ ಕಾಲಕ್ಕೆ ಇದ್ದ ಆಯಾ ಮಠದ ದರ್ಗಾದ ಪೀಠಸ್ಥ ಪರಂಪರೆಯವರೆಂದು ಭಾವಿಸಬೇಕು ಅಷ್ಟೆ. ಕಲಬುರ್ಗಿಯಿಂದ ಸುಮಾರು ೩೫–೪೦ ಕಿ.ಮೀ. ಗಳ ಅಂತರದಲ್ಲಿ ರಟಗಲ್ ಎಂಬ ಗ್ರಾಮವಿದ್ದು. ಆ ಗ್ರಾಮದ ಎತ್ತರವಾದ ಪ್ರದೇಶದಲ್ಲಿ ರೇವಣಸಿದ್ದೇಶ್ವರರ ಬಹುದೊಡ್ಡ ದೇವಾಲಯವಿದೆ. ಪ್ರತಿ ಅಮಾವಾಸ್ಯೆಗೊಮ್ಮೆ ಜನ ಜಾತ್ರೋಪಾದಿಯಲ್ಲಿ ಸೇರುತ್ತಾರೆ.

ಪ್ರತಿದಿನ ಕೆಲಸ ಮಾಡುವವರಿಗೆ ಸಂಜೆ ಕೂಲಿಯನ್ನು ಬಂದೇ ನವಾಜರು ಕೊಡುತ್ತಿದ್ದರು. ಬಂದೇ ನವಾಜರಿಗೆ ಕೂಲಿ ಆಳಿನ ಸಂಬಳ ಉಳಿಯುತಿತ್ತು. ಈ ಕೂಲಿಕಾರ ಯಾರು ಎಂದು ಹುಡುಕಿದರೂ ಸಿಗುತ್ತಿರಲಿಲ್ಲ. ಆದರೆ ಆತ ದಿನ ನಿತ್ಯ ಕೆಲಸ ಮಾಡುತ್ತಿದ್ದು, ಕೂಲಿ ಮಾತ್ರ ತೆಗೆದುಕೊಳ್ಳುತ್ತಿರಲಿಲ್ಲ. ಮುಂದೆ ಬಂದೇ ನವಾಜರು ಇವನನ್ನು ಹುಡುಕಿ ಕೇಳಿದಾಗ ಆತ ನನಗೆ ಕೂಲಿ ಬೇಡ ನಾನು ನಿಮ್ಮ ಸೇವಕನಾಗಿರುವೆ ಎಂದನು. ಈತನ ಈ ನಿಷ್ಠೆಯನ್ನು ಕಂಡು ಬಂದೇ ನವಾಜರು ವರ್ಷಕೊಮ್ಮೆ ನನ್ನ ಉರುಸಾದರೆ ವಾರಕ್ಕೊಮ್ಮೆ ನಿನ್ನ ಉರುಸಾಗಲೆಂದು ಆಶೀರ್ವದಿಸಿದರು. ಇಂದು ಪ್ರತಿ ಗುರುವಾರ ಈತನ ಉರುಸಾಗುತ್ತದೆ.

ಬಂದೇ ನವಾಜರಿಂದ ಆರ್ಶಿವಾದ ಪಡೆದುಕೊಂಡು ಮುಂದೆ ಬೀದರಿನ ಬಹಮನಿ ಸುಲ್ತಾನರ ಸೈನ್ಯದಲ್ಲಿ ಸೈನಿಕನಾಗಿ ಸೇರಿಕೊಂಡನು. ಬಹಮನಿ ಸುಲ್ತಾನರು ಊರ ಹೆಣ್ಣು ಮಕ್ಕಳು ದೊಡ್ಡವರಾದ ಮೇಲೆ ಮತ್ತು ಹೊಸದಾಗಿ ಮದುವೆಯಾಗಿ ಬಂದ ಹೆಣ್ಣು ಮಕ್ಕಳನ್ನು ಒತ್ತಾಯದಿಂದ ಕರೆಸಿಕೊಳ್ಳುತ್ತಿದ್ದರು. ಈ ಕರೆತರುವ ಕೆಲಸವನ್ನು ಇಸ್ಲಾಯಿಲ್ ಖಾದ್ರಿಗೆ ವಹಿಸಲಾಗಿತ್ತು. ಒಂದು ದಿನ ರಾಜನು ದೊಡ್ಡವಳಾದ ಹುಡುಗಿಯನ್ನು ಕರೆದುಕೊಂಡು ಬಾ ಎಂದು ಕಳುಹಿಸಿದಾಗ ಕುದುರೆ ಏರಿ ಹೊರಟ ಖಾದ್ರಿ ಬ್ರಾಹ್ಮಣರ ಹೆಣ್ಣು ಮಗಳನ್ನು ಕರೆದುಕೊಂಡು ಬರಬೇಕೆಂದು ಅವರ ಮನೆಗೆ ಹೋದಾಗ ಆ ಹೆಣ್ಣು ಮಗಳ ತಂದೆ ತಾಯಿ ಗೋಳನ್ನು ಕಂಡು ಖಾದ್ರಿಯ ಮನಸ್ಸನ್ನು ಪರಿವರ್ತಿಸಿತು. ಆಗಲೇ ರಾಜನ ಕಣ್ಣಿನಿಂದ ಇವಳನ್ನು ರಕ್ಷಿಸಬೇಕೆಂದು ತೀರ್ಮಾನಿಸಿ ತಮ್ಮ ಜೊತೆಯಲ್ಲಿಯೇ ಅವಳನ್ನು

ಕರೆದುಕೊಂಡು ಹೋದನು. ಈತನನ್ನು ನೋಡಿ ಸೈನಿಕರು ರಾಜನಿಗೆ ಸೇರಬೇಕಾಗಿದ್ದ ಹೆಣ್ಣನ್ನು ಅಪಹರಿಸಿಕೊಂಡು ಹೋಗುತ್ತಿರುವನೆಂದ ಆತನ ಬೆನ್ನು ಹತ್ತಿದರು. ಖಾದ್ರಿ ಅವರ ಕೈಗೆ ಸಿಗದೇ ಒಂದು ಗುಹೆಯಲ್ಲಿ ಆ ಹೆಣ್ಣು ಮಗಳ ಸಮೇತ ಐಕ್ಯವಾದರು. ಐಕ್ಯವಾಗುವ ಸಂದರ್ಭದಲ್ಲಿ ಆ ಹೆಣ್ಣು ಮಗಳ ಸೀರೆ ಗುಹೆಯ ಹೊರಭಾಗದಲ್ಲಿ ಉಳಿಯಿತು. ಅಂದಿನಿಂದ ಇಸ್ಮಾಯಿಲ್ ಖಾದ್ರಿಯು ಕುದುರೆ ಏರಿ ಬಂದ ಈ ಸ್ಥಳಕ್ಕೆ ಘೋಡವಾಡಿ ಎಂಬ ಹೆಸರು ಬಂದಿತು. ಘೋಡಾ ಎಂದರೆ ಕುದರೆ ವಾಡಿ ಎಂದರೆ ಹಳ್ಳಿ ಎಂದು. ಇವತ್ತಿಗೂ ಆ ಖಾದ್ರಿಯ ಉರಸನ್ನು ಹಿಂದೂ ಮುಸ್ಲಿಂಗಳು ಯಾವ ಮತ ಭೇಧವಿಲ್ಲದೇ ವಾರಕ್ಕೊಮ್ಮೆ ಆಚರಿಸಿಕೊಂಡು ಬರುತ್ತಾರೆ. ಅದಕ್ಕಾಗಿ ಇದೊಂದು ಸೌಹಾರ್ದತೆಯ ತಾಣವಾಗಿ ಕಂಡು ಬಂದಿದೆ.

ಕರ್ನಾಟಕಕ್ಕೆ ಬರುವಾಗಲೇ ಎಂಬತ್ತು ಪ್ರಾಯವಿದ್ದ ಬಂದೇ ನವಾಜ್ ತನ್ನ ಹಿರಿತನದಿಂದಲೂ ಕಿರಿಯ ವಯಸ್ಸಿನ ಆಡಳಿತಗಾರರ ಮೇಲೆ ಪ್ರಭಾವ ಬೀರುವ ವ್ಯಕ್ತಿತ್ವವನ್ನು ಹೊಂದಿದ್ದನು. ಬಂದೇ ನವಾಜ ವಿದ್ವಾಂಸನೂ, ಸಂಗೀತ ಪ್ರಿಯನೂ ಆಗಿದ್ದನು. ಅಷ್ಟೇ ಅಲ್ಲದೇ ಕಲಾ ಪ್ರಿಯನಾಗಿದ್ದನು. ಹಿಂದಿ ಭಾಷೆಗಳನ್ನು ಹೃದಯದಲ್ಲಿ ಸೌಮ್ಯವಾಗಿ ಹರಡಿದ್ದನು. ಈತನು ಸೂಫಿಸಂತನು ಹಾಗೂ ಕನ್ನಡದ ಕವಿಯಾಗಿದ್ದನು. ಆದರೆ ಕನ್ನಡದಲ್ಲಿ ಬರೆಯಲಿಲ್ಲವೆಂಬುದು ಅಷ್ಟೇ ವಾಸ್ತವಿಕ ಸಂಗತಿ. ಬಂದೇ ನವಾಜರು ಹಿಂದೂ ಮತ್ತು ಮುಸ್ಲಿಂರ ವಿಶ್ವಾಸವನ್ನು ಗಳಿಸಿಕೊಂಡಿದ್ದ ಶಿಷ್ಯ ಪರಂಪರೆಯ ಕೊಂಡಿಯಾಗಿದ್ದರು.

**ದಕ್ಷಿಣ ಭಾರತದಲ್ಲಿ ಪ್ರವೇಶ :**

ಗುಲ್ಬರ್ಗಾ ಬಹಮನಿ ಸುಲ್ತಾನರ ಕೇಂದ್ರ ಸ್ಥಾನವಾಗಿತ್ತು. ೧೩೪೭ರಲ್ಲಿ ಸುಲ್ತಾನ ಹಸನಗಂಗು ಬಹಮನಿಯಿಂದ ಸ್ವತಂತ್ರ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಗುಲ್ಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದು ರಾಜ್ಯಾಡಳಿತವನ್ನು ನಡೆಸಿದ್ದರು.

೧೩೯೭ ರಲ್ಲಿ ಫೈರೋಜ್ ಶಹಾ ಬಹಮನಿ ಗುಲಬರ್ಗಾವನ್ನು ಆಳುತ್ತಿದ್ದರು. ಸುಶಿಕ್ಷಿತ ಸುಲ್ತಾನನಾಗಿದ್ದು ಈತನು ಜಾಣರ ಜೊತೆ ಕೂಡುತ್ತಿದ್ದ, ವಿಚಾರವಂತರ ಜೊತೆ ಚರ್ಚೆ ಮಾಡುತ್ತಿದ್ದ ಸೂಫಿ ಸಂತರುಗಳ ಮೇಲೆ ಒಲವಿದ್ದ. ಖ್ವಾಜಾಬಂದಾನವಾಜರು ದೌಲತಾಬಾದಿಗೆ ಬರುತ್ತಿರುವರು ಎಂಬ ಸುದ್ದಿಯನ್ನು ತಿಳಿದು ಅವರಿಗೆ ಸಂತೋಷವಾಯಿತು.

ಅವರನ್ನು ಗೌರವದಿಂದ ಬರಮಾಡಿಕೊಳ್ಳಬೇಕೆಂದು ದೌಲತಾಬಾದಿನ ಗೌರ್ನರಿಗೊಂದು ಪತ್ರವನ್ನು ಬರೆದು ಖ್ವಾಜಾ ಬಂದಾನವಾಜರ ಸ್ವಾಗತಕ್ಕೆ ಯೋಗ್ಯವೆನಿಸುವ ರೀತಿಯಲ್ಲಿ ಗೌರವಗಳನ್ನು ಸಲ್ಲಿಸಿ ದೌಲತಾಬಾದಿಗೆ ಬರಮಾಡಿಕೊಳ್ಳಬೇಕೆಂದು ತಿಳಿಸಿದ.

ಫೈರೋಜ್ ಶಹಾನ ಆದೇಶದಂತೆ ಗೌರ್‍ನರರು ಸಯ್ಯದ ಹಜರತ್ ಖ್ವಾಜಾ ಬಂದೇನವಾಜರಿಗೆ ಅದ್ದೂರಿಯ ಸ್ವಾಗತವನ್ನು ನೀಡಿದರು. ಅಷ್ಟೇ ಅಲ್ಲ ಅವರ ವಾಸಕ್ಕೆ ಯೋಗ್ಯ ಅನುಕೂಲಗಳನ್ನು ಒದಗಿಸಿಕೊಟ್ಟು ಯಾವ ತೊಂದರೆಯೂ ಆಗದಂತೆ ನೋಡಿಕೊಂಡರು. ಕೆಲವು ದಿನಗಳ ಕಾಲ ತಂಗಿದ್ದ ಸಯ್ಯದ ಹಜರತ್ ಖ್ವಾಜಾ ಬಂದೇನವಾಜರಿಗೆ ಗುಲ್ಬರ್ಗದ ಸುಲ್ತಾನನಾದ ಫೈರೋಜ್‌ಶಹಾನ ಬಯಕೆಯನ್ನು ತಿಳಿಸಿ ಗುಲ್ಬರ್ಗಾದತ್ತ ಪ್ರಯಾಣ ಮಾಡಲು ವಿನಂತಿಸಿದರು.

ದೌಲತಾಬಾದಿನಿಂದ ಗುಲ್ಬರ್ಗಕ್ಕೆ ಬಂದ ಖ್ವಾಜಾ ಬಂದಾನವಾಜರನ್ನು ಸಾಂಪ್ರದಾಯಿಕವಾಗಿ ಆತ್ಮೀಯವಾಗಿ ಆತನನ್ನು ಗುಲಬರ್ಗಾಕ್ಕೆ ಆಮಂತ್ರಿಸುತ್ತಾನೆ. ತನ್ನ ರಾಜ್ಯದಲ್ಲಿಯೇ ಇರಲು ವಿನಂತಿಸುತ್ತಾನೆ. ಕಾರಣವೆಂದರೆ ಬಹಮನಿ ಸುಲ್ತಾನರ ಸ್ಥಾಪಕ ಗುರುವಾದ ಶೇಖ್ ಸಿರಾಜುದ್ದೀನ್ ಅಲಿ ಎಂಬುವವರು ೧೩೮೦ರಲ್ಲಿ ತೀರಿಕೊಂಡಿದ್ದರು. ಗುರುವಿನ ಸ್ಥಾನವೂ ಖಾಲಿಯಾಗಿತ್ತು. ಅದಕ್ಕಾಗಿ ರಾಜ್ಯದಲ್ಲಿ ಯೋಗ್ಯಗುರುವೂ ಬೇಕಾಗಿದ್ದಿತು. ಫೈರೋಜ್ ಷಾಹನು ಧಾರ್ಮಿಕನು, ಪವಿತ್ರ ಮನೋಭಾವದವನು ಆಗಿದ್ದನು. ಆ ಕಾರಣವಾಗಿಯೂ ಬಂದೆ ನವಾಜರನ್ನು ಆಮಂತ್ರಿಸಿದನು.

**ಉರಸ್ :**

ದಕ್ಷಿಣ ಭಾರತದಲ್ಲಿಯೇ ನಡೆಯುವ ಬಹುದೊಡ್ಡ ಉರುಸ್ ಎಂದರೆ ಖ್ವಾಜಾ ಬಂದೆ ನವಾಜರದು ಎಂದು ಹೇಳಬಹುದು. ದಕ್ಷಿಣ ಭಾರತದ ಜನರು ಹಾಗೂ ಉತ್ತರ ಭಾರತದಿಂದಲೂ ಕೂಡಾ ಜನರು ಉರುಸ್‌ಗೆ ಬರುತ್ತಾರೆ. ಮುಜಾಹರಿನ ದರ್ಶನ ಪಡೆಯುತ್ತಾರೆ. ದರ್ಗಾದಲ್ಲಿ ಸುತ್ತಾಡಿ ಮನ ಪಾವನ ಗೊಳಿಸಿಕೊಳ್ಳುತ್ತಾರೆ. ಗಂಧ, ಚಿರಾಗ್, ಝಿಯಾರತ್ ಎಂದು ಮೂರು ದಿನಗಳ ಕಾಲ ನಡೆಯುವ ಧಾರ್ಮಿಕ ವಿಧಿ– ವಿಧಾನಗಳು ಉರುಸ್‌ಗೆ ಕಳೆ ತರುತ್ತವೆ. ಉರುಸ್‌ಗಿಂತ ಒಂದು ತಿಂಗಳು ಮುಂಚೆ 'ಝೀಲಾದ ಕಾರ್ಯಕ್ರಮ ನಡೆಯುತ್ತದೆ. ಝೀಲಾ ಎಂದರೆ ಗುಂಬಜ್‌ದ ಮೇಲೆ ಸುತ್ತಲೂ ಬೀಳುವಂತೆ ಹೂವಿನ ಸರಗಳನ್ನು ಸುತ್ತು ಹಾಕುತ್ತಾರೆ.

ಉರುಸಿನ ಸಂದರ್ಭದಲ್ಲಿ ದೇಶದ ನಾನಾ ಭಾಗಗಳಿಂದ ಸಹಸ್ರಾರು ಜನರು ಆಗಮಿಸಿ ಸಂತನ ದರ್ಶನವನ್ನು ಪಡೆಯುತ್ತಾರೆ. ಹಿಂದೂಗಳು ತಮ್ಮ ಧರ್ಮದ ರೀತಿಯ ಪದ್ಧತಿಯಲ್ಲಿ ಪೂಜೆಗಳಾದರೆ ಮುಸ್ಲಿಂ ಬಂಧುಗಳು ಇಸ್ಲಾಂ ಧರ್ಮದ ಸಿದ್ಧಾಂತಗಳಲ್ಲಿ ಪೂಜಿಸುತ್ತಾರೆ. ಸಕ್ಕರೆ, ಮಾದ್ಲಿ, ಹೂ, ಲೋಬಾನ್, ಊದುಬತ್ತಿ ಇಟ್ಟು ಪೂಜಿಸುವ ವಿಧಾನವಿರುತ್ತದೆ. ದರ್ಗಾದ ಹೊರಗಡೆ ಕಾಯಿ ಹೊಡೆಯುವ ಸಂಪ್ರದಾಯದಲ್ಲಿ ಅನುಸರಿಸಲಾಗುತ್ತದೆ. ಉರಸ್ ದಿನ 'ತಂದೂರಿ' ಮಾಡಿ ಮಾಂಸದಡಿಗೆಯನ್ನು ಹೆಡೆಯನ್ನಾಗಿಸುತ್ತಾರೆ.

ಸಾಮಾನ್ಯವಾಗಿ ಐದು ಜನ ಫಕೀರರನ್ನು ಕರೆದು ಊಟ ಹಾಕಲಾಗುತ್ತದೆ. ಲಿಂಗಾಯತರ ಮನೆಗಳಲ್ಲಿ ಫಕೀರರನ್ನು ಕರೆದು ಮಾದ್ಲಿ ಊಟ ಹಾಕಿ ಕಾಣಿಕೆ ಸಲ್ಲಿಸುವ ಸಂಪ್ರದಾಯವಿದೆ. ಜವಳ

ತೆಗೆಸುವುದು. ದೀಡು ನಮಸ್ಕಾರ ಹಾಕುವುದು, ದೀಪಕ್ಕೆ ಎಣ್ಣೆ ತುಪ್ಪ ಹಾಕುವುದು. ಉರಿಯುವ ಬೆಂಕಿಗೆ ಉಪ್ಪು ಸುರಿಯುವುದು ಹೀಗೆ ನಾನಾ ರೀತಿಯ ಸತ್‌ಸಂಪ್ರದಾಯಗಳಿವೆ. ಇಲ್ಲಿ ಹರಕೆಯನ್ನು ಸಹ ಹೋರಲಾಗುತ್ತದೆ. ಈ ಸಂದರ್ಭದಲ್ಲಿ ಪತ್ತೆ ಹಾಡುವುದು ಸರ್ವೆ ಸಾಮಾನ್ಯವಾಗಿರುತ್ತದೆ. ಬಂದಂತಹ ಭಕ್ತಾದಿಗಳಿಗೆ ಊಟದ ವ್ಯವಸ್ಥೆಯನ್ನು ಏರ್ಪಡಿಸಲಾಗುತ್ತದೆ. ಇಲ್ಲಿ ತತ್ವಪದ, ವಚನಗಳು, ಜನಪದ ಗೀತೆಗಳನ್ನು ಹಾಡುವುದರ ಮೂಲಕ ಜಾತ್ಯತೀತ ಮನೋಭಾವನೆಗಳನ್ನು ತುಂಬುವ ಕೆಲಸ ಈ ದರ್ಗಾ ಮಾಡುತ್ತದೆ.

**ತಿಂಥಿಣಿ ಮೌನಪ್ಪಯ್ಯ :**

ದಕ್ಷಿಣ ಕಾಶಿ ಎಂದು ಪ್ರಸಿದ್ಧಿ ಪಡೆದ ತಿಂಥಿಣಿ ಸುಕ್ಷೇತ್ರವು ಗುಲಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಒಂದು ಗ್ರಾಮ ತಿಂಥಿಣಿ. ಸುತ್ತ ಮುತ್ತ ಬೆಟ್ಟ ಗುಡ್ಡಗಳಿಂದ ಕೂಡಿ, ಕೃಷ್ಣ ನದಿಯ ಪ್ರಮುಖ ತಾಣವಾಗಿರುವ ಈ ಸ್ಥಳವು ನಿಸರ್ಗ ತಾಣವನ್ನು ಉಂಟುಬಡಿಸುತ್ತದೆ. ಇದು ಕಲಬುರ್ಗಿ ಜಿಲ್ಲಾ ಕೇಂದ್ರದಿಂದ ೧೩೦ ಕಿ.ಮೀ ಅಂತರದಲ್ಲಿರುವ ತಿಂಥಿಣಿ ಮೂ ಹಿಂದೂ, ಮುಸ್ಲಿಂರ ಭಾವೈಕ್ಯತೆಯ ಕೇಂದ್ರಬಿಂದುವಾಗಿದೆ. ಸುರಪುರ ತಾಲ್ಲೂಕಿನಿಂದ ಮೂರು ಮೈಲು ದೂರವಿರುವ "ಗೊನಾಳ" ಎಂಬ ಗ್ರಾಮದ ವಿಶ್ವಕರ್ಮ ಮನೆತನದ ಮೌನೇಶ್ವರರು ತಿಂಥಿಣಿ ಸುಕ್ಷೇತ್ರವನ್ನು ಏಕೆ ಆಯ್ದುಕೊಂಡರು. ಅವರು ಹೇಗೆ, ಏಕೆ ಬಂದರು. ಅವರ ಮನೆತನದ ಹಿನ್ನೆಲೆಯೇನು ಹಿಂದೂ ಮುಸ್ಲಿಂ ಬಾಂಧವ್ಯವನ್ನು ಬೆಸೆಯುವಲ್ಲಿ ಏಕೆ ಶ್ರಮಿಸಿದರು ಎಂಬ ಹಲವಾರು ಅಂಶಗಳನ್ನು ತಿಳಿಯುವುದು ಬಹಳ ಮುಖ್ಯವಾಗುತ್ತದೆ.

ಕೆಲವು ವಿದ್ವಾಂಸರು ಮೌನೇಶ್ವರ ಕಾಲವನ್ನು ಹದಿನೇಳನೇಯ ಶತಮಾನವೆಂದು ಊಹಿಸಿದ್ದಾರೆ. ೧೫ನೇ ಶತಮಾನದ ಕಾಲಜ್ಞಾನಿ ಶ್ರೀ ಕೊಡೇಕಲ್ಲ ಬಸವಣ್ಣನವರ ಶಿಷ್ಯರಲ್ಲಿ ಒಬ್ಬರಾದ ಮೌನೇಶ್ವರರು ಬಸವಣ್ಣನ ಅಂಕಿತವಿಟ್ಟುಕೊಂಡು ವಚನಗಳನ್ನು ರಚಿಸಿದ್ದು ಗಮನಿಸಿದರೆ ಬಸವಣ್ಣನವರ ಸೌಹಾರ್ದತೆಯ ಪ್ರಭಾವ ಇವರ ಮೇಲೆ ಆಗಿರಬೇಕು ಅಥವಾ ಆತನ ಪ್ರಭಾವಕ್ಕೆ ಒಳಗಾಗಿ ಐಕ್ಯತೆಯ ಮನೋಭಾವ ಮೂಡಿರಬೇಕು. ಹೀಗೆ ಹಲವಾರು ಪ್ರಶ್ನೆಗಳಿಗೆ ನಿಖರವಾದ ಉತ್ತರ ದೊರಕುವುದಿಲ್ಲ. ಮೌನೇಶ್ವರರು ೧೬-೧೭ನೇ ಶತಮಾನದ ಕಾಲದಲ್ಲಿ ತಮ್ಮ ಪವಾಡಗಳಿಂದಲೇ ಸೌಹಾರ್ದತೆಯನ್ನು ಬೆಳೆಸಿರಬೇಕು.

ಗೋನಾಳ ಗ್ರಾಮದ ವಿಶ್ವಕರ್ಮ ಮನೆತನದ ದಂಪತಿಗಳಾದ ಹಾವಪ್ಪ, ಹಾವಮ್ಮ ಎಂಬ ದಂಪತಿಗಳ ಮಗನಾಗಿ ಶ್ರೀ ಮೌನೇಶ್ವರರು ಜನಿಸಿದರು. ಅಂದರೆ ಬೀದರ್ ಕೋಟೆಯ ಮೂಲದವರಾದ ಶೇಷಗಿರಿರಾಯರ ಮಕ್ಕಳಾದ ಕ್ಯಾದಿಗೆಪ್ಪಯ್ಯ ಸ್ವಾಮಿ ಹಾಗು ಅಯ್ಯಪ್ಪಸ್ವಾಮಿ. ಅಯ್ಯಪ್ಪಸ್ವಾಮಿಯ ಮಗ ಹಾವಪ್ಪಸ್ವಾಮಿಯ ಮಗನೇ ತಿಂಥಿಣಿ ಮೌನಪ್ಪಯ್ಯ. ಅಂದರೆ ಶೇಷಗೀರಿರಾಯರ ಮರಿಮೊಮ್ಮಗ. ಎಲ್ಲಾ

ಜಾತಿಯ, ಎಲ್ಲಾ ಕೋಮುದವರು ಮೌನೇಶ್ವರ ಮೋನಯ್ಯ, ಮೋನಪ್ಪಯ್ಯ, ಮೌನ, ಮೌನಲಿಂಗ, ಮನೋಹರ, ಮಾನಪ್ಪ ಮಾನಯ್ಯ ಮತ್ತು ಮೌನೋದ್ದಿನ್ ಎಂಬ ಹೆಸರುಗಳಿಂದ ಕರೆಯುತ್ತಿರುವುದನ್ನು ಗಮನಿಸಿದರೆ ಎಲ್ಲರನ್ನು ಸರ್ವಸಮಾನಾಗಿ ಕಂಡಿದ್ದು ತಿಳಿದುಬರುತ್ತದೆ.

ತಿಂಥಿಣಿ ಎಂದಾಕ್ಷಣ ಮೊದಲಿಗೆ ನಮಗೆ ನೆನಪಿಗೆ ಬರುವ ಸಂತ ಮೌನೇಶ್ವರ. ಇಂತಹ ಮೌನೇಶ್ವರ ಹುಟ್ಟಿದ್ದು ಸುರಪುರ ತಾಲ್ಲೂಕಿನ ಗೋನಾಳದಲ್ಲಿ. ಬೆಳೆದಿದ್ದು ಲಿಂಗನ ಬಂಡಿಯಲ್ಲಿ. ರಾಯಚೂರು ಕುರುಹು ತೋರಿದ್ದು. ಶಿರಹಟ್ಟಿಯಲ್ಲಿ ನೆಲೆಗೊಂಡಿದ್ದು. ತಿಂಥಿಣಿಯಲ್ಲಿ ನೆಲೆಯೂರಿ ಐಕ್ಯರಾದ ಮೌನೇಶ್ವರರು ಶಿವಶರಣರಲ್ಲಿ ಒಬ್ಬರಾಗಿ ಸಮಾಜದ ಸಮಾನತೆಗಾಗಿ ಶ್ರಮಿಸಿದವರು. ೧೬-೧೭ ನೇ ಶತಮಾನದ ಭಾಷಾ ಮಿಶ್ರಣ ಹಾಗೂ ಪುರಾಣ ಮಿಶ್ರಣಗಳ ಕುರಿತಾಗಿ ಇರುವ ಮೌನೇಶ್ವರ ಸಹಜತೆಯಿಂದಲೇ ರೂಢಿಸಿಕೊಂಡವರು. ಕೃಷ್ಣ ಮತ್ತು ತುಂಗಾಭದ್ರೆಯ ಆಸುಪಾಸಿನ ತಾಣವಾಗಿರುವ ಈ ಪ್ರದೇಶ ರಾಜಕೀಯವಾಗಿ ಬಿಜಾಪೂರದ ಆದಿಲ್‌ಷಾಹಿಗಳ ರಾಜ್ಯವಾಗಿ ತನ್ನದೆ ಆದ ಐತಿಹಾಸಿಕ ಮಹತ್ವ ಸಾರಿದೆ. ಈತನ ಕಾಲಕ್ಕೆ ಅನೇಕ ಸಾಧು ಸತ್ಪುರುಷರು, ಸೂಫಿಗಳು ಬದುಕಿ ತಮ್ಮ ಜೀವಮಾನವನ್ನು ಸವೆಸಿದವರು ಕೆಲವರಾದರೆ ಇನ್ನು ಕೆಲವರು ಜೀವಸಮಾಧಿಯಾಗಿದ್ದಾರೆ.

ಇಂತಹ ಮೌನೇಶ್ವರರು ತಿಂಥಿಣಿ ಕ್ಷೇತ್ರವನ್ನು ಅಷ್ಟೇ ಅಲ್ಲದೇ ಕಲ್ಯಾಣ, ಕಲಬುರ್ಗಿ, ಸಗರ, ಗೋಗಿ, ಬಿಜಾಪುರ, ಹಾನಗಲ್ಲು, ಶಿರಹಟ್ಟಿ, ಲಕ್ಷ್ಮಿಲಾಂಬರ, ಹಂಪಿ ಮತ್ತು ಮುದಗಲ್ ಪ್ರದೇಶಗಳಂತಹ ಕೇಂದ್ರಗಳಲ್ಲಿ ಅವತರಿಸಿದ ಇವರು ತನ್ನನ್ನು ತಾನೇ ಬಣ್ಣಿಸಿಕೊಂಡಿರುವುದು ಒಂದು ಕಡೆಯಾದರೆ ಇನ್ನೊಂದೆಡೆ ಜನಪದರು ಮೌನೇಶ್ವರರನ್ನು ಕುರಿತು ಹೀಗೆ.

"ನೀನೆ ಮೌನನು, ನೀನೆ ದೀನನು
ನೀನೆ ಪೀರ ಫಕೀರನು.
ಲುಂಗಿ ಕಫನೀಯ ಟೋಪಿ,
ಪಾದದಲ್ಲಿ ಜಂಗು ನೀ ಧರಿಸಿದ್ದಯೇ"[೧೭]

ಇರುವ ಹಾಡಿನಲ್ಲಿ ಸಾಹಸಿ ಫಕೀರರ ನೀಲುವಂಗಿ, ಲುಂಗಿ, ಟೋಪಿ ಧರಿಸಿದ ಮೌನೇಶ್ವರರು ಫಕೀರರು ಆಗಿದ್ದರು ಎಂಬುದು ವಿಶಿಷ್ಟ. 'ಕಪನಿ' ಎಂದರೆ ಶಿವದುಡಿಗೆ ಎಂಬರ್ಥವನ್ನು ಸೂಚಿಸುತ್ತದೆ. ಮುಸ್ಲಿಂ ದಾಳಿಯಿಂದ ತತ್ತರಿಸಿದ ಕಾಶಿಯ ಉಳಿವಿಗಾಗಿ ಮೌನೇಶ್ವರರು ಭಾವೈಕ್ಯತೆಯನ್ನು ಉಳಿಸಿ ಬೆಳೆಸುವುದಕ್ಕಾಗಿ ತಮ್ಮ ಸೌಹಾರ್ದ ಮನೋಭಾವನೆಯನ್ನು ತುಂಬುವ ರೀತಿಯಲ್ಲಿ ಹೀಗೆ ಹೇಳಿದ್ದಾರೆ.

" ಓಂ ಏಕ್ ಲಾಕ್ ಐಂಸೀ ಹಜಾರ್ ಪಾಂಚೋ
ಪೀರ ಪೈಗಂಬರ್ ಮೌನದೀನ್, ಜೀತ್ ಪೈಗಂಬರ್
ಮೌನದೀನ್। ಕಾಶೀ ಪತಿ ಗಂಗಾಧರ ಹರ ಹರ ಮಹಾದೇವ"[೧೮]

ಕಾಶೀಪತಿಯಾದ ಪಂಚಮುಖಗಳನ್ನು ಹೊಂದಿದ ಪರಮಾತ್ಮನಾದ ವಿಶ್ವಕರ್ಮನು ಐದು ಜನ ಪೈಗಂಬರರಲ್ಲಿ ಒಬ್ಬನು. ಇವನು ಪಂಚಮುಖವುಳ್ಳ ಪರಮಾತ್ಮರಲ್ಲಿ ಒಬ್ಬನು ಎಂದು ಹೇಳಿದ್ದಾರೆ. ೧೭ ನೇ ಶತಮಾನದ ಅಂತ್ಯ ಭಾಗದಲ್ಲಿ ಭಾರತೀಯ ಅದರಲ್ಲೂ ಮುಸ್ಲಿಂ ವಾಸ್ತುಶಿಲ್ಪ ಪ್ರಾರಂಭವಾಯಿತು. ಇದು ಪರ್ಶಿಯನ್ ಹಾಗೂ ಹಿಂದೂ ದೇಶದ ಶಿಲ್ಪ ಶಿಲೆಗಳ ಶೈಲಿಯಲ್ಲಿ ಏಕರೂಪದ ಸೌಹಾರ್ದತೆಯನ್ನು ಬೆಳೆಸುವ ಸಂಘವು ಎನಿಸಿದೆ. ಗೋನಾಳ, ಲಿಂಗನಬಂಡಿ, ವಾರವಿ–ತಿಂಥಿಣಿಗಳಲ್ಲಿ ಹಿಂದೂ ಮುಸ್ಲಿಂ ಧರ್ಮಗಳ ಸಮನ್ವಯತೆಯನ್ನು ಸಾರುವ ಈ ಮಂದಿರಗಳು ದರ್ಗಾ ಶೈಲಿಯ ಹಿಂದೂ ಪ್ರತೀಕವಾಗಿ ಗರ್ಭಗುಡಿಗಳಿದ್ದು, ಮಂದಿರದಲ್ಲಿ ಇಸ್ಲಾಂ ಮಾದರಿಯ ಗುಹೆ ಮತ್ತು ಗದ್ದಿಗೆ ಇರುತ್ತದೆ. ತಳಭಾಗದಲ್ಲಿ ಗದ್ದುಗೆ ಪ್ರಮುಖವಾದರೆ, ಮೇಲ್ಭಾಗದಲ್ಲಿ ಮಜಾರುಗಳಿರುತ್ತವೆ. ಹೀಗಾಗಿ ಇಸ್ಲಾಂ ಹಾಗೂ ಹಿಂದೂ ಭಕ್ತರಿಂದ ಏಕಕಾಲಕ್ಕೆ ಪ್ರಾರ್ಥನಾ ಹಾಗೂ ಪೂಜೆಗಳು ಧಾರ್ಮಿಕ ಭಾವೈಕ್ಯತೆಯ ಪ್ರತೀಕವಾಗಿ ನಡೆಯುತ್ತಿವೆ. ದಾಸೋಹ ಹಾಗೂ ಜಾತ್ರೆಯ ಸಂದರ್ಭದಲ್ಲಿ ಸ್ನೇಹ ಪರತ್ವವನ್ನು ಬಿಂಬಿಸುವ ಈ ಕೇಂದ್ರವು ತನ್ನದೇ ಆದ ವಿಧಿ ವಿಧಾನಗಳನ್ನು ಅನುಸರಿಸಿಕೊಂಡು ಬಂದಿದೆ.

**ಜಾತ್ರೆ ಮತ್ತು ಉತ್ಸವ :**

ಮೌನೇಶ್ವರರು ಜಾತಿ ವ್ಯವಸ್ಥೆಯನ್ನು ನಿಷ್ಠುರವಾಗಿ ಖಂಡಿಸಿದ ಮಹಾ ಪುರುಷ. ಹೀಗಾಗಿ ಎಷ್ಟು ಶತಮಾನಗಳಾದರೂ ಇಂದಿಗೂ ಅವರ ತತ್ವ ಮತ್ತು ಸಿದ್ಧಾಂತಗಳನ್ನು ಎಲ್ಲಾ ಧರ್ಮಿಯರು ಕೂಡಿ ಸಮಭಾವನೆಗಳಿಂದ ಇರುತ್ತಾರೆ. ಜಾತಿ ಮತ್ತು ಪಂಥ ಕುಲ ಗೋತ್ರ ಎಲ್ಲವುಗಳನ್ನು ಮೂಲೆಗಿಟ್ಟು ಶ್ರದ್ಧೆ ಭಕ್ತಿ ಸಡಗರ ಮತ್ತು ಸಂಭ್ರಮದಿಂದ ಆಚರಣೆ ಮಾಡುತ್ತಾರೆ. ಪ್ರತಿ ವರ್ಷದ ಭಾರತ ಹುಣ್ಣಿಮೆಯ ಸುಮಾರು ದಿನಗಳ ಕಾಲ ಜಾತ್ರೆ ಅದ್ದೂರಿಯಾಗಿ ವಿಜೃಂಭಣೆಯಿಂದ ನಡೆಯುತ್ತಿದೆ. ಅಷ್ಟೇ ಅಲ್ಲದೇ ಶ್ರಾವಣ ಮಾಸದಲ್ಲಿ ಮಳೆಗೆ ಸಂಬಂಧಿಸಿದ ಪೂಜೆ ಧಾರ್ಮಿಕ ಆಚರಣೆಗಳೊಂದಿಗೆ ನಡೆದು ಈ ಪೂಜೆಗಾಗಿ ಮೌನೇಶ್ವರರು ಮಳೆತರಿಸುತ್ತಾರೆ ಎಂಬ ನಂಬಿಕೆ ಭಕ್ತಾದಿಗಳಲ್ಲಿ ಒಂದು ಪವಾಡವಾಗಿ ಪರಿಣಮಿಸಿದೆ. ಛಟ್ಟಿ ಅಮವಾಸ್ಯೆ ಐದನೇಯ ದಿನದಂದು ಕಾರ್ತಿಕ ಮಾಸದ ನಿಮಿತ್ಯ ಛಟ್ಟಿ ಪೂಜೆಯನ್ನು ಮಾಡಲಾಗುತ್ತದೆ. ವಿಜಯದಶಮಿಯ ಸಾಂಕೇತಿಕವಾಗಿ ಬನ್ನಿ ಹಬ್ಬವನ್ನು ಆಚರಿಸಲಾಗುತ್ತದೆ. ಪಾಂಡವರ ಆಯುಧಗಳನ್ನು ಪೂಜೆಮಾಡುವಂತಹ ಸಂದರ್ಭದಲ್ಲಿ ಮೌನಪ್ಪಯ್ಯನ ಆಯುಧವಾದ ಕೊಡಲಿಯನ್ನು ವಿಶೇಷವಾಗಿ ಪೂಜೆಮಾಡುತ್ತಾರೆ. ಭಾರತೀಯರ ಹಬ್ಬವಾದ ಸಂಕ್ರಮಣ ದಿನದಂದು ತಿಂಥಿಣಿ ಕ್ಷೇತ್ರದ ಕೃಷ್ಣಾ ನದಿಗೆ ಹೋಗಿ ನಂತರ ಮೌನಪ್ಪಯ್ಯನ ದರ್ಶನ ಪಡೆದುಕೊಂಡು ಎಳ್ಳು ಬೆಲ್ಲದ ಸಾಂಕೇತಿಕವಾಗಿ ಎಲ್ಲರೂ ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಭಾರತ ಹುಣ್ಣಿಮೆಯ ದಿನದಂದು ಜರಗುವ ಮೌನಪ್ಪಯ್ಯನ ಜಾತ್ರೆಯು ತುಂಬ ಅರ್ಥಗರ್ಭಿತವಾಗಿ ಸುಮಾರು ದಿನಗಳ ಕಾಲ ಭಕ್ತರ ಗಮನವನ್ನು ಸೆಳೆಯುತ್ತದೆ. ಜಾತ್ರೆಯಲ್ಲಿ ಪಾಲ್ಗೊಂಡ ಭಕ್ತಾದಿಗಳು ಕಾಶಿನಾಥ, ವಿಶ್ವಕರ್ಮ, ಪೈಗಂಬರ್ ಮತ್ತು ಪರಶಿವನನ್ನು ಮೌನಪ್ಪಯ್ಯನವರಲ್ಲಿ ಕಂಡುಕೊಳ್ಳುತ್ತಾರೆ. ಅಷ್ಟೆ ಅಲ್ಲದೇ ಮೌನೇಶ್ವರರ

ಮಂತ್ರವನ್ನು ಎಲ್ಲರೂ ಹೇಳುವುದರೊಂದಿಗೆ ಮೌನಪ್ಪಯ್ಯನ ಕೊಡಲಿಯನ್ನು ಅರ್ಚಕನಾದವನು ಹಿಡಿದುಕೊಂಡು ದೇವಾಲಯವನ್ನು ಸುತ್ತುತ್ತಾನೆ. ಈತನ ಜೊತೆಗೆ ಭಕ್ತಾದಿಗಳು ತಮ್ಮ ತಮ್ಮ ಸಮಸ್ಯೆಗಳು ಪರಿಹಾರವಾಗಲೆಂದು ಪ್ರದಕ್ಷಿಣೆ ಹಾಕುತ್ತಾರೆ. ಹೀಗೆ ಇರುವ ಮೌನೇಶ್ವರ ದೇವಾಲಯವು ಮೇಲ್ಭಾಗದಲ್ಲಿ ಗೋರಿಯಾಕಾರದ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಕಮಾನುಗಳನ್ನು ಒಳಗೊಂಡರೆ, ಗೋರಿಯ ಕೆಳಗಡೆ ಮೌನೇಶ್ವರರ ಪವಾಡದ ದೃಶ್ಯ ಹಿಂದೂ ಧರ್ಮವನ್ನು ಪ್ರತಿಬಿಂಬಿಸುತ್ತದೆ.

ಇಂತಹ ಮೌನೇಶ್ವರರು ಶಿವ, ವಿಷ್ಣು, ಬ್ರಹ್ಮ, ಇಂದ್ರ ಹಾಗೂ ಸೂರ್ಯರೆಂಬ ಐದು ಜನ ಮಕ್ಕಳನ್ನು ಹಾಗೂ ಅವರನ್ನು ಮಾನಪ್ಪಯ್ಯನವರು ಸುಲೇಮಾನ್ ಪೈಗಂಬರ್ ಎಂಬುದಾಗಿ ಸಮೀಕರಿಸುವುದರ ಮೂಲಕ ಈ ಐದು ಜನರನ್ನು ವಿಶ್ವಕರ್ಮನ ಮಕ್ಕಳು ಎನ್ನುತ್ತಾರೆ.

ಸರ್ವರಲ್ಲಿ ಸಮಾನತೆ, ದಯಾಪರತೆ ಮತ್ತು ಪ್ರೇಮವನ್ನು ಪ್ರತಿಪಾದಿಸಿದ ಮೌನೇಶ್ವರರು ಉತ್ತರ ಭಾರತದ ಜಗದ್ಗುರು ಎಂದು ಪ್ರಸಿದ್ಧಿಯಾದರು. ಅಕ್ಬರನ ದೀನ್ ಇಲಾಹಿ ಎಂಬ ದೈವಿಮತದ ತತ್ವಗಳನ್ನು ಅನುಸರಿಸಿ ಫಕೀರನಾದರು. ಮೌನಪ್ಪಯ್ಯನು ೧೨ನೇ ಶತಮಾನದ ಶಿವಶರಣರ ತತ್ವಗಳನ್ನು ಸಮೀಕರಿಸಿ ಧರ್ಮ ಸಮನ್ವಯದ ಪಂಥವನ್ನು ಸಾರಿದ್ದಾರೆ. ಅಷ್ಟೆ ಅಲ್ಲದೇ ತಾನು ವಿಶ್ವಕರ್ಮವನ್ನು ಆರಾಧಿಸುವ ಮುಸಲ್ಮಾನನೆಂದು ಶಂಭವಿನ ಸಮಾನನೆಂದು ಹೇಳಿಕೊಂಡಿದ್ದಾರೆ. ಅಲ್ಲಮ ಹಾಗೂ ಬಸವಣ್ಣನವರ ಕುರಿತಾಗಿ ಬರೆದ ಮೌನೇಶ್ವರರು ಹಿಂದೂ ಹಾಗೂ ಮುಸ್ಲಿಂ ಎಲ್ಲರೂ ಸರಿ ಸಮಾನರು ಎಂದಿದ್ದಾರೆ. ಇವರಿಬ್ಬರಿಗೆ ಚಂದ್ರ ಸೂರ್ಯರೊಬ್ಬರೆ. ಆದರೆ ಭೇದಮಾಡಿ ಇಬ್ಬರ ನಡುವೆ ವಿರೋಧತ್ವ ಇರುವುದನ್ನು ಕಂಡು ಪ್ರಗತಿಪರ ವಿಚಾರಗಳನ್ನು ಅಂದಿಗೂ ನುಡಿದಿದ್ದಾರೆ. ಕಲ್ಯಾಣ ಬಸವಣ್ಣರ ಅಂಕಿತವನ್ನು ತನ್ನ ವಚನಗಳಲ್ಲಿ ಇಟ್ಟುಕೊಳ್ಳುವುದರ ಮೂಲಕ ದೇಶ ಸಂಚಾರದತ್ತ ತಾನು ಹೋದ ಸ್ಥಳಗಳಲ್ಲಿ ಮಾನವ ಧರ್ಮದ ಸಂದೇಶ ಸಾರಿದ್ದಾರೆ. ಇಂತಹ ಮಹಾಪುರುಷ ಧಾರ್ಮಿಕ ಕ್ಷೇತ್ರವನ್ನು ಆಯ್ದುಕೊಂಡು ಭೇದ ಭಾವವನ್ನು ಮರೆತು ಮಾನವೀಯ ಮೌಲ್ಯಗಳನ್ನು ಮೀರಿ ನಿಂತಿದ್ದಾರೆ. ಇವರು ಸುಮಾರು ೮೧೪ ವಚನಗಳನ್ನು ಕಾಲಜ್ಞಾನಕ್ಕೆ ಸಂಬಂಧಿಸಿದಂತೆ ರಚಿಸಿದ್ದಾರೆ. ಅಪ್ಪಟ ಆಡುಭಾಷೆಯಲ್ಲಿರುವ ವಚನಗಳು ಕೆಲವೊಂದು ಸಂದರ್ಭದಲ್ಲಿ ಮೃದುವಿನ ಪದಗಳೊಂದಿಗೆ ರಚನೆಯಾಗಿವೆ. ಸರ್ವಜ್ಞ ಹಾಗೂ ಮೌನೇಶ್ವರರ ವಚನಗಳು ಒಂದೆ ಪ್ರತಿರೂಪದಲ್ಲಿ ಕಾಣಿಸಿದರೂ, ಅಂತರಂಗದಲ್ಲಿ ಸಮಾಜ ಮತ್ತು ಧರ್ಮಕ್ಕೆ ಸಂಬಂಧಿಸಿದ ಮೌನೇಶ್ವರ ಒಂದು ವಚನ ಹೀಗಿದೆ.

"ಎಲುಬಿನ ಶರೀರವು ತೊಗಲಿನ ಮಡಿತವು,
ಕೀಲುಬಿ ಕೀಟಕದ ರಕ್ತದ ಇದರ ಮೇಲೆ
ಕುಲವೇನು ನಿಮ್ಮ ಫಲವೇನು ಎಂದಿನ್ನು
ಹೇಳಿದೆನು ಸಭೆಮೆಚ್ಚೆ ಕೇಳಿದನು
ಮಲುಹರನ ಮನೆಯ ಪರಿಲೆಂಕ ಬಸವಣ್ಣ"[೧೯]

ಹೀಗೆ ಕುಲವನ್ನು ಟೀಕಿಸಿದ ಮೌನೇಶ್ವರ ಮೇಲು ಕೀಳುಗಳೆಂಬ ತಾರತಮ್ಯ ಸಲ್ಲದು ಎಂಬ ವಿಚಾರವನ್ನು ಮನಗಂಡಿದ್ದಾರೆ. ಅಷ್ಟೇ ಅಲ್ಲದೇ ನಮ್ಮ ಸಮಾಜವನ್ನು ಅಧೋಗತಿಗೆ ತಂದಿರುವ ವೇದ ಶಾಸ್ತ್ರ ಆಗಮ ಹಾಗೂ ಮೂಢನಂಬಿಕೆಗಳನ್ನು ಕಂಡಿಸಿದ ಮೌನೇಶ್ವರರು ಸ್ವತಃ ಅನುಭವಿಯಾಗಿದ್ದರು. ಅಷ್ಟೇ ಅಲ್ಲದೇ ಸುಳ್ಳು, ಮೋಸ, ಅನೀತಿ, ಅಧರ್ಮ ಹಾಗೂ ಅತ್ಯಾಚಾರಗಳನ್ನು ಖಡಾಖಂಡಿತವಾಗಿ ಟೀಕಿಸುವುದರ ಮೂಲಕ ತನ್ನ ನೀತಿವಾಕ್ಯವನ್ನು ತಿಳಿಸಿದ ಅವರು ಡಾಂಭಿಕ ಶರಣರ ತತ್ವವನ್ನು ವಿರೋಧಿಸಿದ್ದಾರೆ. ಹುಟ್ಟುವುದು ಆಕಸ್ಮಿಕ ಸಾವು ಖಚಿತ ಎಂಬ ತತ್ವಗಳನ್ನು ಸಮಾಜದಲ್ಲಿ ತರುವುದರ ಮೂಲಕ ಧರ್ಮ ಸಮನ್ವಯದ ಮೂರ್ತಿಯಾಗಿ ಇಂದಿಗೂ ಉಳಿದುಕೊಂಡಿದ್ದಾರೆ.

**ಮೊಹರಂ ಆಚರಣೆ ಪದ್ಧತಿ :**

ಮೊಹರಂ ಎಂಬುದು ಹುತಾತ್ಮರಾದ ಪ್ರವಾದಿಗಳ ಶೋಕಾಚರಣೆಯ ದಿನಗಳು. ಈ ಹಬ್ಬವನ್ನು ಇಸ್ಲಾಂ ಧರ್ಮದ ಪ್ರಕಾರ ಹಿಜರಿ ಶಕೆ ವರ್ಷದ ಆರಂಭದ ತಿಂಗಳಿನಲ್ಲಿ ಆಚರಿಸುವ ಹಬ್ಬವಾಗಿದೆ. ಇದೊಂದು ರೀತಿಯ ಬಾಲಕರಿಂದ ಹಿಡಿದು ಮುದುಕರವರೆಗೂ ಉತ್ಸಾಹದ ಪ್ರತೀಕವಾಗಿ ಕಾಣಿಸಿಕೊಳ್ಳುತ್ತದೆ. ಇದನ್ನು ಫಿರಲ್ ಹಬ್ಬ ಎಂದು ಕರೆಯುತ್ತಾರೆ. ಮೊಹರಂದ ಕರ್ಬಲ್ ಯುದ್ಧದಲ್ಲಿ ಧರ್ಮದ ಸಿದ್ಧಾಂತಗಳಿಗಾಗಿ ಹಸೇನ ಮತ್ತು ಹುಸೇನ್ ಹೋರಾಡಿ ಹುತಾತ್ಮರಾದರು. ಇವರ ನೆನಪಿಗಾಗಿ ಈ ಹಬ್ಬವನ್ನು ಹಿಂದೂ ಮತ್ತು ಮುಸ್ಲಿಂರೆಲ್ಲರೂ ಶ್ರದ್ಧೆ ಮತ್ತು ಭಕ್ತಿಯಿಂದ ಆಚರಿಸುತ್ತಾರೆ. ಹಜರತ್ ಅಲಿ ಹಾಗೂ ಬೀಬಿ ಫಾತಿಮಾ ಎಂಬ ದಂಪತಿಗಳ ಮಕ್ಕಳಾದ ಹಸಿನ್ ಮತ್ತು ಹುಸೇನರವರು ಖ್ಯಾತಿಯನ್ನು ಸಹಿಸದ ರಾಜರು ಅಜೀದ್ ಎಂಬುವನು ಹಸೀನರವರನ್ನು ಕೊಲೆಮಾಡಿ ಹುಸೇನ್‌ರವರನ್ನು ವಿಷ ಕೊಟ್ಟು ಸಾಯಿಸುತ್ತಾರೆ. ಇಂತಹ ದುಃಖದ ಹಬ್ಬವನ್ನು ತಿಳಿಯದ ಜನರು ಸುಖದ ಹಬ್ಬವನ್ನಾಗಿ ಆಚರಿಸುವದು ಇಂದು ಎಲ್ಲಾ ಹಳ್ಳಿಗಳಲ್ಲಿ ಕಾಣುತ್ತವೆ. ದುಃಖ, ಸುಖವಿರುವಲ್ಲಿ ಎಲ್ಲಾ ಜನಾಂಗದವರು ಸೌಹಾರ್ದತೆಯಿಂದ ಆಚರಿಸುವದೆಲ್ಲಾ ಬಹಳ ಮುಖ್ಯವಾಗುತ್ತದೆ. ಹಿಂದೂ ಮುಸ್ಲಿಂರಿಗೆ ಚಂದ್ರನ ಒಬ್ಬನೇ ಎಂದು ಹೇಳಿದ ಮೌನೇಶ್ವರರು ಹಿಂದೂ, ತುರ್ಕರು ಒಂದಾಗಿ ನಡೆದರು ಎಂಬ ವಚನವನ್ನು ರಚಿಸಿದ್ದಾರೆ. ಈ ಕಾರಣಕ್ಕಾಗಿ ಮೌನೇಶ್ವರರ ತಾಣವು ದರ್ಗಾ ಮತ್ತು ಮಂದಿರ ಸಮನ್ವಯದ ಸಂಕೇತವಾಗಿದೆ. ಮೊಹರಂ ಮೊದಲು ಆಚರಣೆ ಮಾಡುವಂತಹ ಸಂದರ್ಭದಲ್ಲಿ ಐದು ಪಂಜುಗಳನ್ನು ಪ್ರತಿಷ್ಠಾಪಿಸಿ ಫಕೀರನ ವೇಷವನ್ನು ಧರಿಸುತ್ತಾರೆ. ಹಬ್ಬದಂದು ಖಿಚಡಿ, ಮಾದಲಿ, ಸಕ್ಕರೆ, ಚೊಂಗಿಯನ್ನು ನೈವೇದ್ಯ ಅರ್ಪಿಸಲಾಗುತ್ತದೆ. ಕತ್ತಲರಾತ್ರಿ ದಿನದಂದು ಹಸೇನ್ ಮತ್ತು ಹುಸೇನ್‌ರಿಬ್ಬರು ದರ್ಗಾದಿಂದ ಕೆಳಗೆ ಇಳಿದಾಗ ಹಾಡುವಂತಹ ಸವಾಲು ಪದಗಳು ಸಮಾಜದ ಕಳಂಕವನ್ನು ಹೊಡೆದೋಡಿಸಿ ಕಳಕಳಿಯನ್ನು ಬಿಂಬಿಸುವ ನಿಟ್ಟಿನಲ್ಲಿ ರಚನೆಯಾಗಿದೆ. ದಫ್ನಾ ದಿನ ಮೌನಪ್ಪಯ್ಯನ ಶಿಷ್ಯ ಗಂಗಪಯ್ಯನು ಅರ್ಚಕ ಬಿಚ್ಚುಗತ್ತಿಯಿಂದ ಹರಕೆಯ ಸ್ಥಳಗಳಿಗೆ ಭೇಟಿಕೊಡುತ್ತಾನೆ. ವಿವಿಧ ಸಂಪ್ರದಾಯ ಮತ್ತು ಪಲ್ಲಕಿಗಳೊಂದಿಗೆ ನದಿಗೆ ಹೋಗಿ ದಫ್ನಮಾಡಿ ಬರುತ್ತಾರೆ.

**ಸವಾಲು ಪದಗಳ ಉದ್ದೇಶ :**

ಮೊಹರಂ ಹಾಗೂ ಉರುಸುಗಳಲ್ಲಿ ರಾತ್ರಿಯಿಡಿ ಹಾಡಲಾಗುವ ಸವಾಲ್ ಜವಾಬ್ ಪದಗಳು ತುಂಬಾ ಜನಾಕರ್ಷಣೆ ಪಡೆದಿವೆ. ಕಲ್ಲಿತೂರ ಸಂಪ್ರದಾಯದಲ್ಲಿ ಒಂದು ವಕ್ರ ಹಿಡಿದು ವಾದ ನಡೆಯುತ್ತದೆ. ಅದರೆ ಇಲ್ಲಿ ತತ್ವದ ಗಂಟನ್ನು ಎದುರಾಳಿಯ ಮುಂದೆ ಇಟ್ಟು ಅದನ್ನು ಬಿಡಿಸಲು ಸವಾಲು ಹಾಕಲಾಗುತ್ತದೆ. ಎದುರಾಳಿ ಅದನ್ನು ಎತ್ತಿಕೊಂಡು ಬಿಡಿಸಿ ಜವಾಬು ಕೊಡಬೇಕು. ಈ ಹಾಡುಗಾರಿಕೆ ಬೆಡಗಿನ ಭಾಷೆ ಯಾವತ್ತೂ ಅನುಭವಿ ಪಂಥಗಳ ಲಕ್ಷಣ ಸವಾಲು ಜವಾಬು ಪದ ಹಾಡುವ ತಾತ್ವಿಕ ವಾಗ್ವಾದದಂತೆಯೇ ಇದೆ.

ಮೊಹರಂ ಸಂದರ್ಭದಲ್ಲಿ ಹಾಡುವ ಹಾಡು ಸಮಾಜದ ಕಳಕಳಿಯನ್ನು ಬಿಂಬಿಸುವ ಇಲ್ಲವೇ ಊರಿನ ಗೌಡನ ಸೊಕ್ಕು ಮುರಿಯುವಂತೆ ಪ್ರಸಂಗವನ್ನು ಬಿಂಬಿಸುವವು. ಇಲ್ಲವೇ ಒಬ್ಬ ರಾಜ ಯಾವುದಾದರೂ ಸೈನ್ಯವನ್ನು ಗೆದ್ದಂತಹ ಸಂಧರ್ಭವನ್ನು ಕುರಿತಾಗಿರುತ್ತದೆ. ಹಾಗೆಯೇ ಒಗಟುಗಳನ್ನು ಸವಾಲ್ ರೂಪದಲ್ಲಿ ಹಾಕುವುದು. ಅದನ್ನು ಜವಾಬ್ ರೂಪದಲ್ಲಿ ಬಿಡಿಸುವುದು. ರಾತ್ರಿಯಲ್ಲೂ ಇಂತಹ ಸವಾಲ್ ಜವಾಬ್ ನಡೆಯುತ್ತವೆ.

ಸವಾಲ್ ಜವಾಬ್ ಹಾಡುವಿಕೆ ಕನ್ನಡ – ಉರ್ದು, ತೆಲುಗು – ಉರ್ದು ಕನ್ನಡ – ಮರಾಠಿ, ಉರ್ದು, ಹೀಗೆ ಬಹುಭಾಷಿತವಾಗಿರುತ್ತದೆ. ಆರಂಭದಲ್ಲಿ ಸಂತರಿಗೆ ಸಂಬಂಧಿಸಿದ ಪದಗಳನ್ನು ಹಾಡುಲಾಗುತ್ತದೆ. ಆ ನಂತರ ಶಾಹೀರರು ಇಸ್ಲಾಂ ಮತ್ತು ಹಿಂದೂ ಪುರಾಣಗಳತ್ತ ಹೋಗುತ್ತಾರೆ. ಕೊನೆಗೆ ತಮ್ಮ ಸುತ್ತ ಮುತ್ತಲಿನ ಜನ ಬದುಕಿನಲ್ಲಿ ನಡೆದ ವಿಚಿತ್ರ ಹಾಗೂ ದುರಂತದ ಘಟನೆಗಳನ್ನು ಕುರಿತು ಹಾಡಲು ಶುರುಮಾಡುತ್ತಾರೆ. ಈ ಹಂತದಲ್ಲಿ ಸೂಫಿ ಸಂತನಿಗೂ ಹಾಡಿಕೆಗೂ ಯಾವ ಸಂಬಂಧವು ಇರುವುದಿಲ್ಲ. ತನ್ನ ಮಾಲೀಕನ ಜೀವ ಉಳಿಸಿದ ಎತ್ತುಗಳ ಕಥೆ, ನಿಧಿ ಆಸೆಗಾಗಿ ಮಗುವನ್ನು ಬಲಿಕೊಟ್ಟ ಕಥೆ ಹಾಡಿನ ಮೂಲ ವಾಸ್ತವವಾಗಿರುತ್ತದೆ. ಹಡಗಲಿಯ ರಾಜ ಭಾಗಮರಸನ ಉರುಸೀನಲ್ಲಿ ಶಾಹೀರರು ಕೆಲವೇ ದಿನಗಳ ಹಿಂದೆ ತುಂಗಭದ್ರ ಹೊಳೆ ದಾಟಲು ಹೋಗಿ ಮದುವೆ ತಂಡ ಮುಳುಗಿದ ಧಾರುಣ ಘಟನೆಯನ್ನು ಪದಕಟ್ಟಿ ಹಾಡುತ್ತಿದ್ದರು.

ಇಂತಹ ಹಾಡುಗಳನ್ನು ಅನೇಕ ಕಡೆ ಹಾಡುವುದನ್ನು ನೋಡಬಹುದು. ಕರ್ನಾಟಕದ ಮಟ್ಟಿಗೆ ಹೇಳಬೇಕೆಂದರೆ ಮೊಹರಂ ಆಚರಣೆ ಒಂದು ಮನೋರಂಜನೆಯ ಹಬ್ಬ. ಪ್ರತಿಯೊಂದು ಹಳ್ಳಿಗಳಲ್ಲಿ ಆಚರಿಸುವ ಈ ಹಬ್ಬವು ಹಿಂದೂ – ಮುಸ್ಲಿಂರನ್ನು ಒಂದೆ ಎಂದು ಸಾರುವ ಹಬ್ಬ. ಹಾಗೆಯೇ ಕೋಮು ಸೌಹಾರ್ದತೆಯನ್ನು ಸೃಷ್ಟಿಸುವ ಹಬ್ಬ. ಈ ತರಹದ ಹಬ್ಬಗಳಿಂದ ಹಿಂದೂಗಳು ಹಾಗೂ ಮುಸ್ಲಿಂರ ಮನಸುಗಳು ಕೋಮು ಸೌಹಾರ್ದತೆಯನ್ನು ಬೆಳೆಸಲು ದಾರಿಮಾಡಿಕೊಡುತ್ತವೆ ಎಂದು

ಹೇಳಬಹುದು. ಇಂತಹ ಹಬ್ಬಗಳಿಗೆ ಧರ್ಮಸಮನ್ವಯ ಸಹಕಾರ ಮೂರ್ತಿಯಾದ ತಿಂಥಿಣಿ ಮೌನಪ್ಪಯ್ಯ ನಂತಹ ಸಂತರು ಕಾರಣೀಕರ್ತೃರಾಗುತ್ತಾರೆ.

ಮೌನಪ್ಪಯ್ಯ ಎಲ್ಲರಂತೆ ಸರ್ವಧರ್ಮವನ್ನು ಹಿಯ್ಯಾಳಿಸದೇ ಗೌರವವಾಗಿ ಕಂಡಂತಹ ಮಹಾಪುರುಷ. ಹೀಗಾಗಿ ಇವರನ್ನು ಸೂಫಿಸಂತ, ಫಕೀರನೆಂಬುದಾಗಿ ಕರೆದು ಜನಪದ ಹಾಡುಗಳನ್ನು ಕಟ್ಟಿ ಹಾಡಿದ್ದಾರೆ. ಇವರ ಕುರಿತ ಮಠ ಮಂದಿರಗಳು ಹಾಗೂ ಸ್ಮಾರಕಗಳು ರಾಜ್ಯಾದ್ಯಂತ ಹುಟ್ಟಿಕೊಂಡಿವೆ. ಗುಲ್ಬರ್ಗಾ ಜಿಲ್ಲೆಯ ಅಳ್ಳಳ್ಳಿ, ಗೋನಾಳ್ ಮತ್ತು ತಿಂಥಿಣಿ. ಬಿಜಾಪುರ ಜಿಲ್ಲೆಯ ಗದ್ದಿನಕೇರಿ, ಧಾರವಾಡ ಜಿಲ್ಲೆಯ ಹಲಗೂರು ಮತ್ತು ವರವೀ, ಕೊಪ್ಪಳ ಜಿಲ್ಲೆಯ ಕೊಪ್ಪಳ ಹಾಗೂ ಕಾರಟಗಿ ಗ್ರಾಮಗಳಲ್ಲಿ ಇಂದಿಗೂ ಪೂಜಾ ವಿಧಾನಗಳು ಆಚರಿಸಲ್ಪಡುತ್ತವೆ.

**ದೇಶ ಸಂಚಾರ :**

ಗುರುಗಳಿಂದ ಹರಕೆ ಪಡೆದ ಮೌನೇಶ್ವರರು ಗೋನಾಳದಲ್ಲಿ ನಿಲ್ಲದೆ ದೇಶ ಸಂಚಾರಕ್ಕೆ ನಿರ್ಧರಿಸಿದನು. ತಂದೆ – ತಾಯಿಗಳಿಗೆ ಮಗನು ಊರಲ್ಲಿ ಇರುವುದಕ್ಕೆ ಸೀಮಿತವಾಗಿಲ್ಲ. ದೇಶ ಸಂಚಾರ ಮಾಡಿ ಜನರ ಕಷ್ಟ ಸುಖಗಳನ್ನು ಅರಿಯಬೇಕಾಗಿದೆ. ನನ್ನಷ್ಟಕ್ಕೆ ನನಗೆ ಬಿಡಿ. ನಾನು ಬದುಕುವುದು ದೊಡ್ಡದಲ್ಲ, ಜನರನ್ನು ಬದುಕಿಸುವುದು ದೊಡ್ಡವರು, ಜ್ಞಾನಿಗಳು ಮಾಡುವ ಕೆಲಸ ಎಂದು ಸ್ಪಷ್ಟವಾಗಿ ಹೇಳಿದನು. ಮೌನೇಶನ ಮಾತು ಕೇಳಿ ತಂದೆ – ತಾಯಿಗೆ ಮಾತೇ ಬರಲಿಲ್ಲ. ನಿನ್ನ ಇಚ್ಛೆಯಂತೆ ಆಗಲಿ, ಆದರೆ ನಾವು ಕರೆದಾಗ ತಪ್ಪದೆ ಬರುವೆನೆಂದು – ಹೇಳಿದೇಶ ಸಂಚಾರಕ್ಕೆ ಹೊರಟನು. ಮನೆ ಬಿಟ್ಟು ನಿಸರ್ಗ ಸುಂದರ ತಾಣವಾದ ಶಹಾಪುರದ ಬೆಟ್ಟಕ್ಕೆ ಬಂದನು, ಅಲ್ಲಿಯ ಪ್ರಶಾಂತ ಸ್ಥಳದಲ್ಲಿ ಧ್ಯಾನಕ್ಕೆ ಕುಳಿತನು. ಅವನಲ್ಲಿ ಯೋಗಿಯಾಗುವದು ಸರಿಯೆನಿಸಿತು. ಸಾಧನೆಗಾಗಿ ಸಾಮಾಜಿಕ ಜೀವನದಲ್ಲಿ ಕಾಣುವ ಮೌಢ್ಯತೆಗಳನ್ನು ಹಾಗೂ ವರ್ಣಾಶ್ರಮದ ಜಾತಿ ಪದ್ಧತಿಯನ್ನು ಹೋಗಲಾಡಿಸಲು ಶರಣರ ಮಾರ್ಗದರ್ಶನದಲ್ಲಿ ಮುನ್ನೆಡೆಯಲು ನಿಶ್ಚಯಿಸಿದನು. ತನ್ನ ಹತ್ತಿರ ಬರುವ ಜನರಿಗೆ ಯೋಗ್ಯ ಮಾರ್ಗದರ್ಶನ ನೀಡಿ ಒಳ್ಳೆಯವರಾಗಿ ಹಾಗೂ ಸಹಬಾಳ್ವೆಯಿಂದ ಬದುಕಲು ಕಲಿಸಿದನು.

**ಪವಾಡಗಳು :**

1. ಪರ್ವತಪ್ಪನ ಬಡತನ ನಿವಾರಣೆ
2. ರಾಜೋಟಿ ವೀರಭದ್ರ ದೇವರಿಗೆ ಊಟ ಮಾಡಿಸಿದ್ದು.
3. ದೇವದುರ್ಗದಲ್ಲಿ ಮಳೆ ತರಿಸಿದ್ದು.
4. ತಾವರಗೇರೆಯಲ್ಲಿ ಶಿಲಾ ಪ್ರತಿಮೆಯೊಂದಿಗೆ ಮಾತನಾಡಿದ್ದು.
5. ಲಿಂಗನ ಬಂಡಿಯಲ್ಲಿ ಹುರಿದ ಬೀಜ ಬಿತ್ತಿ ಬೆಳೆದದ್ದು.
6. ಬಿಜಾಪೂರದ ಬಾದಶಾಹನಿಗೆ ತತ್ವ ಬೋಧಿಸಿದ್ದು.

7. ಸಿರಸಂಗಿಯ ಸ್ವಭಾಂಧವರಿಗೆ ತೋರಿಸಿದ ಮಹಿಮೆ.

8. ಲಕ್ಷ್ಮೇಶ್ವರದಲ್ಲಿ ಪಿಡ್ಡವನಿಂದ ಹಣ ಪಡೆದದು.

9. ವರವಿಯಲ್ಲಿ ಅಂಬಲಿಗೊಂಡ ನಿರ್ಮಿಸಿ ಲಿಂಗ ಪ್ರತಿಷ್ಠಾಪನೆ ಮಾಡಿದ್ದು.

10. ತಿಂಥಿಣಿಯಲ್ಲಿ ಮೌನೇಶ್ವರರು ಗುಹಾಂತರರಾದದ್ದು.

ಈ ಎಲ್ಲಾ ಪವಾಡಗಳಲ್ಲಿ ಪ್ರಮುಖವಾದ ಪವಾಡಗಳನ್ನು ಗಮನಿಸಬಹುದು. ಮೌನೇಶನು ಹುಟ್ಟಿದ ಗೋನಾಳದ ಪರ್ವತಪ್ಪ – ಮೇನಕಮ್ಮ ಎಂಬ ವೀರಶೈವ ಸದ್ಭಕ್ತ ದಂಪತಿಗಳಿದ್ದರು. ಪರ್ವತಪ್ಪನು ತನ್ನ ಮನೆತನದ ವೃತ್ತಿಯಾದ ಗಾಣ ಹೊಡೆದು ತೆಗೆದ ಎಣ್ಣೆ ಮಾರಿ, ಬಂದ ಹಣದಲ್ಲಿ ಸಂಸಾರ ನಡೆಸುತ್ತಿದ್ದನು. ಪರ್ವತಪ್ಪನ ಮನೆಯ ಹತ್ತಿರವೇ ಮೌನೇಶನ ಮನೆ ಇರಲು, ಬಾಲಕ ಮೌನೇಶ ಹೆಚ್ಚಾಗಿ ಪರ್ವತಪ್ಪನ ಮನೆಯಲ್ಲಿಯೇ ಆಟವಾಡುವುದು, ಊಟ ಮಾಡುವುದು ಮಾಡುತ್ತಿದ್ದನು. ಪರ್ವತಪ್ಪ ಮತ್ತು ಮೇನಕಮ್ಮನು ಅತೀ ಪ್ರೀತಿಸುವದರಿಂದಲೇ ಬಾಲಕ ಮೌನೇಶನು ಅಜ್ಜ – ಅಜ್ಜಿಯಿಂದ ಕರೆಯುತ್ತಿದ್ದನು. ಶೇಷಮ್ಮ, ಶೇಷಪ್ಪರೂ ಕೂಡ ಅವರಿಗೆ ಚಿಕ್ಕಮ್ಮ – ಚಿಕ್ಕಪ್ಪರೆಂದೇ ಕರೆಯುತ್ತಿದ್ದರು. ಎರಡೂ ಮನೆತನಗಳಲ್ಲಿ ಬಹಳ ಅನ್ಯೋನ್ಯತೆ ಇತ್ತು. ಹೀಗಾಗಿ ಮೌನೇಶನು ಪರ್ವತಪ್ಪನ ಮನೆಯಲ್ಲಿಯೇ ಹೆಚ್ಚು ಕಾಲ ಕಳೆಯುತ್ತಿದ್ದನು.

"ಗಾಣ ಹೊಡೆದು ಬಂದ ಎಣ್ಣೆ ಮಾರಿ ಜೀವನ ಸಾಗಿಸುವುದು ಪರ್ವತಪ್ಪನಿಗೆ ಕಷ್ಟದ್ದಾಗಿತ್ತು. ವಾರದಲ್ಲಿ ಒಂದೆರಡು ದಿನವಾದರೂ ಗಂಡ – ಹೆಂಡತಿ ಉಪವಾಸ ಬೀಳದೆ ಗತಿ ಇರಲಿಲ್ಲ. ಇಂಥ ಬಡತನದ ಪರಿಸ್ಥಿತಿಯಲ್ಲಿ ಬಾಲಕ ಮೌನೇಶನು "ಅಜ್ಜ – ಅಜ್ಜಿ ನನಗೆ ಬಹಳ ಹಸಿವಾಗಿದೆ ರೊಟ್ಟಿ ಕೊಡಿ, ಅಂಬಲಿ ಕೊಡಿ". ಎಂದು ಹೊತ್ತು ಗೊತ್ತಿಲ್ಲದೆ ದಿನಾಲು ಪೀಡಿಸುವನು. ಆದರೆ ಪರ್ವತಪ್ಪ ಮೇನಕಮ್ಮನವರು ಬಾಲಕ ಮೌನೇಶನಿಗೆ ಎಂದೂ ಇಲ್ಲವೆನ್ನದೆ ಉಣ ಬಡಿಸುತ್ತಿದ್ದರು. ಒಂದೊಂದು ದಿನ ಅವನಿಗೆ ಊಟ ಮಾಡಿಸಿ ತಾವು ಉಪವಾಸ ಮಲಗುತ್ತಿದ್ದರು. ಬಾಲಕ ಮೌನೇಶನು ಮನೆಯಲ್ಲಿ ಏನೂ ದವಸ–ಧಾನ್ಯಗಳು ಇಲ್ಲದಾಗ ಕೇಳಿ ಅಡ್ಡಿ ಪಡಿಸಿದರೂ, ಆ ದಂಪತಿಗಳು ಬೇಸರಪಟ್ಟುಕೊಳ್ಳದೆ, "ಇವತ್ತು ಮೌನೇಶನ ಬೇಡಿಕೆ ಈಡೇರಿಸಲಿಲ್ಲವಲ್ಲ ಎಂದು ಚಿಂತಿಸುತ್ತಿದ್ದರು. ದೇವರು ನಮಗೆ ಶ್ರೀಮಂತಿಕೆ ಕೊಡುವುದು ಬೇಡ. ಬಾಲಕ ಮೌನೇಶನಿಗಾದರೂ ಎರಡು ಹೊತ್ತು ಉಣಿಸುವಷ್ಟಾದರೂ ಸಂಪತ್ತು ಕೊಡಬಾರದೆ?"[20] ಎಂದು ಮರುಗುವರು. ಅವರ ಕಡು ಬಡತನ ನೋಡಿ ಬಂಧುಗಳು ಸಹ ದೂರ ಸರಿದರು.

ಒಂದು ದಿನ ಗಾಣದ ಎಣ್ಣೆ ಮಾರದೆ ಉಳಿದು, ಕೂಲಿಯೂ ಸಿಗದೆ ಉಪವಾಸ ಇರುವ ಪ್ರಸಂಗ ಬಂದಿತು. ಮೂರು ದಿನ ವ್ಯಾಪಾರವಿಲ್ಲದೆ ಉಪವಾಸ ಇದ್ದರು. ಅಂದಿನ ರಾತ್ರಿ ಹರಕು ಚಾಪೆಯ ಮೇಲೆ ಮಲಗಿ ಎಷ್ಟೊತ್ತು ಉರುಳಾಡಿದರೂ ಪರ್ವತಪ್ಪನಿಗೆ ನಿದ್ದೆಯೇ ಹತ್ತಲಿಲ್ಲ. ಹೊಟ್ಟೆಗೆ

ಅನ್ನವಿಲ್ಲದ ಮೇಲೆ ನಿದ್ದೆ ಬರಲು ಸಾಧ್ಯವೆ? "ಅಯ್ಯೋ ದೇವರೆ, ನಮಗೆ ಎಷ್ಟೊಂದು ಪರೀಕ್ಷಿಸುವೆ, ದಿನಾಲೂ ನಿಮ್ಮ ಪೂಜೆ ಮಾಡಿದರೂ ಒಂದು ಹೊತ್ತಿನ ಊಟಕ್ಕೆ ಗತಿ ಇಲ್ಲದವನಾಗಿರುವೆ. ನಮಗೆ ಸಿರಿತನ ಬೇಡ, ಬದುಕುವದಕ್ಕಾದರೂ ಸಾಕು, ಅಷ್ಟಾದರು ದಯಪಾಲಿಸು ಶಿವನೇ" ಎಂದು ಬೇಡಿಕೊಂಡನು. ಪರ್ವತಪ್ಪನ ಮನೆಯ ಪರಿಸ್ಥಿತಿ ಹಾಗೂ ಉಪವಾಸದಿಂದ ಬಳಲುವುದನ್ನು ಅರಿತರೂ ಮೌನೇಶನು ತೋರದೆ, ಅಂದು ರಾತ್ರಿಯೇ ಪರ್ವತಪ್ಪನ ಮನೆಗೆ ಬಂದು ಅಜ್ಜ, ಅಜ್ಜಿ ಎದ್ದೇಳಿ, ನನಗೆ ಬಹಳ ಹಸಿವಾಗಿದೆ. ಹೋಳಿಗೆ ಮಾಡಿ ಕೊಡಿ ಊಟ ಮಾಡುವೆನೆಂದು ಹಠ ಹಿಡಿದನು.

ಮೌನೇಶನ ಮಾತು ಕೇಳಿ ಪರ್ವತಪ್ಪ ಗಾಬರಿಯಾಗಿ ಎದ್ದು ನೋಡಿದನು. ಸುತ್ತಲು ಕತ್ತಲು ಕವಿದಿತ್ತು. ಇನ್ನೂ ಬೆಳಗಾಗಿರಲಿಲ್ಲ. ಈಗ ಏನು ಮಾಡುವುದು ಮೌನೇಶ ನಾವು ಮೂರು ದಿನದಿಂದ ಉಪವಾಸವಿದ್ದೇವೆ. ಇಂತಹ ರಾತ್ರಿಯಲ್ಲಿ ನೀನು ಹೋಳಿಗೆ ಮಾಡಿ ಕೊಡಿರೆಂದು ಕೇಳಿದರೆ ಎಲ್ಲಿಂದ ತರುವುದು, ಈಗ ಮಲಿಗಿಕೋ ಬೆಳಗಾದ ಕೂಡಲೆ ಯಾರ ಮನೆಯಲ್ಲಾದರೂ ಹಿಟ್ಟು ಕೇಳಿ, ತಂದು ನಿನಗೆ ಹೋಳಿಗೆ ಮಾಡಿ ಉಣಿಸಿವೆ ಎಂದು ಸಾಂತ್ವನಗೊಳಿಸಲು ಪ್ರಯತ್ನಿಸಿದನು.

"ಅಜ್ಜಾ, ನೀನು ಬಡವನಲ್ಲ, ಇಂದಿನಿಂದ ನಿನ್ನ ಮನೆಗೆ ಲಕ್ಷ್ಮಿಯೇ ಬರುವಳು. ನೀನು ಸಂಪತ್ತಿನ ಒಡೆಯನಾಗುವೆ. ಯಾಕೆ ಚಿಂತೆಯಿಂದ ಬಳಲುವೆ? ಎಂದು ಮೌನೇಶನು ಹರಸಿದನು. 'ಅಪ್ಪಾ, ಮೌನೇಶ ನಿನ್ನ ಬಾಲ ಲೀಲೆಗಳನ್ನು ನೋಡಿರುವೆ. ನಿನ್ನ ಹರಕೆಯಂತೆ ಆಗುವುದಾದರೆ ಒಳಿತಾಯಿತು. ಆದರೆ ನನಗೆ ಸಂಪತ್ತಿನ ವ್ಯಾಮೋಹವಿಲ್ಲ ಸಂಪತ್ತಿಗಿಂತಲೂ ಮೋಕ್ಷ ದೊರಕಿದರೆ ಸಾಕು ಎಂದು ಕೇಳಿಕೊಂಡನು. ಪರ್ವತಪ್ಪನ ಸರಳ ವಿಚಾರವನ್ನು ಕೇಳಿ ಮೌನೇಶನು' ಅಜ್ಜಾ, ದೇವರು ನಿನ್ನಂಥವರಿಗೆ ಸಂಪತ್ತು ಕೋಟ್ಯೂ ಪಡೆಯುವುದಿಲ್ಲ. ಆದರೆ ನೀವು ಜೀವಿಸುವರಿಗಾದರೂ ಉಪಜೀವನಕ್ಕೆ ಬೇಕಾಗುವಷ್ಟಾದರೂ ಬೇಕಲ್ಲವೆ? ಅದಕ್ಕಾಗಿ ಇನ್ನು ಮುಂದೆ ನಿನ್ನ ಉದ್ಯೋಗ ಸರಿಯಾಗಿ ನಡೆದು, ಸಕಲ ಸಂಪತ್ತು ನಿನಗೆ ಲಭ್ಯವಾಗಲಿ ಎಂದು ಹರಸಿದನು.

ಪರ್ವತಪ್ಪನು ಮುಂದೆ ಉದ್ಯೋಗದಲ್ಲಿ ಲಾಭಗಳಿಸಿ ಶ್ರೀಮಂತನಾದನು. ಮೌನೇಶನ ಹರಕೆಯಿಂದ ನನಗೆ ಸಿರಿತನ ಬಂತೆಂದು ಕೊಂಡಾಡಿದನು. ಬಂದ ಸಂಪತ್ತಿನಲ್ಲಿ ದಾನ, ಧರ್ಮ ಮಾಡುತ್ತ ಸುಖವಾಗಿದ್ದನು."[20]

**ಮೌನೇಶ್ವರರ ವಚನಗಳು:**

ತಿಂಥಣಿ ಮೌನೇಶ್ವರರು ಜೀವಿಸಿದ್ದ ಕಾಲದಲ್ಲಿಯೇ ಕೊಡೆಕಲ್ಲ ಬಸವಣ್ಣನವರು ತಮ್ಮ ಅಪಾರ ಶಿಷ್ಯರ ಸಮೂಹದೊಂದಿಗೆ ಕೊಡೆಕಲ್ಲ ಬಸವಣ್ಣನವರು ತಮ್ಮ ಅಪಾರ ಶಿಷ್ಯರ ಸಮೂಹದೊಂದಿಗೆ ಆರೂಢ ಪಥದ ಸಾಧಕರಾಗಿ, ಶರಣ ತತ್ವಗಳನ್ನು ಪ್ರಚಾರ ಮಾಡುತ್ತಿದ್ದರು. ಆಚರಣೆಯಲ್ಲಿ ಆರೂಢರಾದರೂ ಧರ್ಮ ಪ್ರಚಾರದಲ್ಲಿ ಕೊಡೆಕಲ್ಲ ಬಸವಣ್ಣ ವೀರಶೈವ ಧರ್ಮೀಯರಾಗಿದ್ದರು. ಆಗ

ಸಗರನಾಡು ಬಿಜಾಪೂರದ ಅದಿಲಶಾಹನ ಆಡಳಿತಕ್ಕೆ ಸೇರಿತ್ತು. ಮುಸ್ಲಿಮ್ ಅರಸರಿಗೂ, ವಿಜಯನಗರದ ಅರಸರಿಗೂ ಅನೇಕ ಯುದ್ದಗಳು ಆಗಾಗ ನಡೆದು, ಸಗರನಾಡು ಒಮ್ಮೆ ವಿಜಯನಗರ, ಒಮ್ಮೆ ಬಿಜಾಪುರದ ಅರಸರಿಗೆ ಸೇರುತ್ತಿತ್ತು. ಸ್ಥಳಿಯ ನಾಯಕ ಅರಸರು ಮಾಂಡಳಿಕರಾಗಿ ಆಡಳಿತ ನಡೆಸುತ್ತಿದ್ದರು. ಮುಸ್ಲಿಂರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಾಗ ಹಿಂದೂ – ಮುಸ್ಲಿಮರಲ್ಲಿ ಜನಾಂಗೀಯ ಘರ್ಷಣೆಗಳು ನಡೆಯುತ್ತಿದ್ದವು. ಮುಸ್ಲಿಮರ ಆಡಳಿತಕ್ಕೆ ಎದುರಾಗಿ ಬಾಳುವುದು ಮತ್ತು ಹೋರಾಡುವುದು ಕಷ್ಟದ ಕೆಲಸವೇ ಆಗಿತ್ತು. ಅಂತಹ ಸಂದರ್ಭದಲ್ಲಿ ಕೊಡೇಕಲ್ಲ ಬಸವಣ್ಣನು ತನ್ನದೇ ಆದ ಸಂಜ್ಞೆಯಲಿಪಿಯನ್ನು ರೂಡಿಸಿ, ಅಂದಿನ ದಿನಮಾನದ ಸಂಗತಿಗಳನ್ನು ಹಾಗೂ ಮುಂದಿನ ಆಗು-ಹೋಗುಗಳನ್ನು ವಚನಗಳಲ್ಲಿ ಹೇಳಿರುವನು. ಅವುಗಳಿಗೆ ಕೊಡೇಕಲ್ಲ ಬಸವಣ್ಣನ ಕಾಲಜ್ಞಾನದ ವಚನಗಳೆಂದೇ ಕರೆಯುವರು ಕೊಡೇಕಲ್ಲ ಬಸವಣ್ಣನು ಬಿಜಾಪೂರದ ಅರಸನಿಗೆ ಪವಾಡ ತೋರಿಸಿ ಕಾಣಿಕೆ ಪಡೆದಿರುವನು.

**ಜಾತ್ಯಾತೀತ ಭಾವನೆ :**

ಮೌನೇಶ್ವರರ ಮೇಲೆ ಶರಣರ ಪ್ರಭಾವ ಆಗಿರುವದನ್ನು ಅವರ ಜಾತ್ಯಾತೀತ ಭಾವನೆಯ ವಚನಗಳಲ್ಲಿ ಕಾಣುತ್ತೇವೆ. ಯಾವುದೇ ವಿಷಯವನ್ನು ಮುಲಾಜಿಲ್ಲದೆ ನೇರ ಹಾಗೂ ನಿಷ್ಠುರವಾಗಿ ಹೇಳುವರು. ಜನಮುಖಿ ಹಾಗೂ ಸಮಾಜಮುಖಿಯಾಗಿ ಹೇಳುವುದರಿಂದ ಮೌನೇಶ್ವರರ ವಚನಗಳು ಸರ್ವಜ್ಞನ ತ್ರಿಪದಿಗಳಂತೆ ಪ್ರಖರವಾದ ಜ್ಞಾನವನ್ನೇ ಸಾರುತ್ತವೆ. ಅವರು ವಿಶ್ವಕರ್ಮ ಜನಾಂಗದಲ್ಲಿ ಜನಿಸಿದರೂ, ಜಾತ್ಯಾತೀತ ಭಾವನೆಯನ್ನೇ ಸಾರಿರುವರು.

"ತಂದೆಯಾದರೇನು ತಾಯಿಯಾದರೇನು
ಯಾವನಾದರೇನು ನಾ ನನ್ನ
ನ್ಯಾಯವಿದ್ದಂತೆ ಸಾರುವೆನು ಬಸವಣ್ಣ.
ಅಕ್ಕನಾದರೇನು ತಂಗಿಯಾದರೇನು
ಚಿಕ್ಕಮ್ಮನಾದರೇನು ನನಗೇನು ನಾ ನನ್ನ
ಲೆಕ್ಕವಿದ್ದಂತೆ ಸಾರುವೆನು ಬಸವಣ್ಣ."[೨೨]

ಎನ್ನುವಲ್ಲಿ ಮೌನೇಶ್ವರರು ಕುಟುಂಬದ ಮಿತಿಗೂ ಸೇರದೆ, ಒಂದು ಜಾತಿ, ಮತ, ಪಂಥಕ್ಕೆ ಸೇರದೆ, ಜಾತ್ಯಾತೀತರಾಗಿ ಅಂದಿನ ಸಮಾಜದಲ್ಲಿ ಕಂಡುಬರುವ ಕುಲಾಚಾರದ ವಿಚಾರವನ್ನು ಖಂಡಿಸುತ್ತಾರೆ.

"ಎತ್ತು ಎಮ್ಮೆಗೆ ಕುಲವು
ಕತ್ತೆ ಕುದುರೆಗೆ ಕುಲವು
ಸತ್ಯ ಶರಣರಿಗೆ ಯಾತರ ಕುಲವಯ್ಯಾ
ಇದರ ನಿಕ್ಕರವನರಿದು ಬಾಳಬೇಕು ಬಸವಣ್ಣ.

ಹಸಿಯ ತೊಗಲೊಳಗಣ ತುಪ್ಪ
ಬಸಿದುಂಡ ಮೇಲೆ
ಕೊಸರಾಡಬಹುದೆ ಕುಲಛಲಕೆ ?
ಮುಸರೆಗೆ ಹತ್ತಿದ ನೊಣದಂತೆ
ನಿಮ್ಮ ಪಿಸರು ಶಾಸ್ತ್ರದ ಬಿಡಬೇಕು ಬಸವಣ್ಣ.
ಹಿಂದೂ – ತುರುಕರಿಗೆ ಚಂದ್ರನೊಬ್ಬನೆ
ನಿಂದಿಸಿದವನೇ ಅಧಮನು, ಕಾಣದ
ಅಂಧರಿಗೇಕೆ ದರ್ಪಣವು ಸಕಲವು
ಒಂದೇ ಎಂದು ಕಂಡ ಗುರು ಬಸವಣ್ಣ."[31]

ಎನ್ನುವ ವಚನಗಳಲ್ಲಿ ಜಾತಿ ಒಂದು ಸೂತಕವಾಗಿದೆ. ಅದು ದೇವರು ನಿರ್ಮಿಸಿದ್ದಲ್ಲ. ಮಾನವನೇ ನಿರ್ಮಿಸಿದ್ದು ಆದ್ದರಿಂದ ಒಳ್ಳೆಯ ಆಚಾರದಿಂದ ನಡೆಯುವುದೇ ಮಾನವ ಧರ್ಮವೆಂದು ಸಾರುವರು.

**ಆಶೆ :**

ಆಶೆ ಮಾನವನಿಗೆ ಸಹಜವಾದದ್ದು, ಆದರೆ ಬದುಕಿಗೆ ಪೂರಕವಾಗುವ ಆಶೆ ಇರಬೇಕೇ ಹೊರತು ಅತೀ ಆಶೆ ಇರಬಾರದು. ಅತೀ ಆಶೆಯಿಂದ ಮಾನವನು ಕೆಟ್ಟತನಕ್ಕೆ ಮುಂದಾಗುತ್ತಾನೆ. ಅಧಿಕ ಹಣ, ಭೂಮಿ ಗಳಿಸುವುದು ಮನದಾಸೆಯ ಮಾಯೆ ಎಂದು ಹೇಳುವರು. ಅತೀಯಾದ ಆಶೆ – ವೇಶ್ಯೆಗೆ ಸಮಾನವೆಂದು ಸಾರುವರು.

"ಆಶೆಯೆಂಬ ವೇಶ್ಯೆ ಘಾಸಿ ಮಾಡುತ್ತಾಳೆ
ಮಾಯದ ಮಮತೆಯ ಪಾಶಕ್ಕೆ ಬಲಿಯಾಗಿ
ಆಚಾರಿಯನಿಸಿದವನ ಪಾಪದ
ಕಾಚಿನ ಕಲೆಯ ತೊಳೆಯದು ಬಸವಣ್ಣ"[32]

ಎಲೆಯಲ್ಲಿ ಬಳಸಿದ ಕಾಚಿನ ತಲೆ ಎಷ್ಟು ತೊಳೆದರು ಹೋಗಲಾರದು. ಹಾಗೆಯೇ ಅತೀಯಾಶೆಯಿಂದ ಗಳಿಸಿದ ಹಣ, ವಸ್ತು ಮಾನವನಿಗೆ ಅಂಟಿದ ಪಾಪ ಎಂಬ ಕಾಚಿನ ಕಲೆಯೆಂದು ಹೇಳುವರು.

ಸನ್ಯಾಸಿಯಾದವನು ಹೆಣ್ಣು, ಹೊನ್ನು, ಮಣ್ಣಿನ ಆಶೆಯಿಂದ ದೂರವಿರುಬೇಕು. ಆದರೆ ಬಾಹ್ಯಾಡಂಬರಕ್ಕೆ ಸನ್ಯಾಸಿ ವೇಷ ಹಾಕಿ ಸದಾ ಹೆಣ್ಣು, ಹೊನ್ನು, ಮಣ್ಣಿಗಾಗಿ ಚಿಂತಿಸುವವನು ಸನ್ಯಾಸಿ ಹೇಗೆ ಆಗಲು ಸಾಧ್ಯ ಎಂದು ಖಂಡಿಸುತ್ತಾರೆ.

"ಹೆಣ್ಣು ಬಿಟ್ಟೆನೆಂದು ಮುಖಕ್ಕೆ ಮಣ್ಣು ಹಚ್ಚಿಕೊಂಡು
ಬಣ್ಣದ ತೊಗಲನು ಬಿಗಿದುಟ್ಟು ಜಗದೊಳಗೆ
ಹೆಣ್ಣಿಗೆ ಕನ್ನವ ಹಾಕುವ ಈ ಪಾಪಿ ಮನುಜರಿಗೆ

ಸನ್ಯಾಸಿಯೆಂಬ ಬಿರುದೇಕೆ ಬಸವಣ್ಣ.

ಮಾಯೆಯೊಳಗೆ ಹುಟ್ಟಿ
ಮಾಯೆಯೊಳಗೆ ಬೆಳೆದು
ಮಾಯೆ ಮುದ್ದಾಡಿದ ಪಾಪಿಗೆ
ಸನ್ಯಾಸಿಯೆಂಬ ಬಿರುದೇಕೆ ಬಸವಣ್ಣ."[೨೫]

**ಸನ್ನಡತೆ :**

ಯಾವುದೇ ಸಮಾಜದಲ್ಲಿ ಆಚಾರ ವಿಚಾರದಿಂದ ನಡೆಯುವ ಜನರಿದ್ದಂತೆ. ನೀತಿಗೆಟ್ಟವರು ಇರುತ್ತಾರೆ. ಅಜ್ಞಾನದಿಂದ ದುರಾಚಾರಕ್ಕೆ ಬಿದ್ದು ತಾವು ಕೆಡುವುದಲ್ಲದೆ ಸಮಾಜವನ್ನು ಕೆಡಿಸುವವರೆ ಪಾತಕರು. ಅಂಥವರನ್ನು ಕುರಿತು. –

"ಹಲವು ಪರಿಯ ಗರ್ವದಲ್ಲಿ ಮೆರೆಯುತ
ಧರ್ಮವು ದಾರಿಯಿಂದ ದೂರವಿದ್ದು
ಬಾಧೆ ಬಂಧನದಲ್ಲಿ ಬಿದ್ದು ನರಳಾಡುವ
ಪಾತಕ ಮನುಜರ ಮೂತಿ ನೋಡಬಾರದು ಬಸವಣ್ಣ.
ಕಾಯದೊಳು ಕಪಟ ಜೀವದೊಳು ಕಳವಳ
ಬಾಯಲಿ ಬೆಲ್ಲ, ಎದೆಯಲ್ಲಿ ಕತ್ತರಿ
ಇದ್ದಂತಹ ಪಾತಕ ಮನುಜರ ಗೊಡವೆ
ಸತ್ಯವುಳ್ಳ ಶರಣರಿಗೇಕೆ ಬಸವಣ್ಣ."[೨೬]

**ಕಾಯಕದ ಮಹತ್ವ :**

ವೀರಶೈವರ ಮುಖ್ಯ ಬೋಧನೆಯಾಗಿದ್ದ ಕಾಯಕದ ಪ್ರಭಾವ ಮೌನೇಶ್ವರರು ಮೇಲೆ ಸಾಕಷ್ಟು ಆಗಿದೆ. ಮೌನೇಶ್ವರರು ತಮ್ಮ ವಚನಗಳಲ್ಲಿ ಕಾಯಕದ ಮಹತ್ವವನ್ನು ಸಾರಿ ಹೇಳಿ, ಕಾಯಕ ಜೀವಿಗಳಲ್ಲಿರುವ ಕೀಳರಿಮೆಯನ್ನು ಕಿತ್ತಿಹಾಕಿ, ದುಡಿದು ಉಣ್ಣುವವರೇ ದೊಡ್ಡವರು, ತಾವೆ ದುಡಿದು ಸಂಪಾದಿಸಿದ ಹಣದಿಂದ ದಾಸೋಹ ಮಾಡುವವರು ಕೈಲಾಸಕ್ಕೆ ಹೋಗುವದಕ್ಕಿಂತಲೂ ಶ್ರೇಷ್ಠರು. ಆದ್ದರಿಂದ ಜನಹಿತದಲ್ಲಿಯೇ ಪರಮಾತ್ಮನ ಕಾಣಬೇಕೆಂದು ಹೇಳುವರು.

"ಒಕ್ಕಲು ಮಗನೆಂಬುವಾತನು
ಲೋಕವನ್ನು ರಕ್ಷಿಪನು
ರಕ್ಷಿಸುವಾತನೆ ಭಿಕ್ಷುಕನಾದರೆ
ದಿಕ್ಕು ದಿಕ್ಕಿಗೆ ಉಳಿಯುವದೇನಯ್ಯ

ಒಕ್ಕಲು ಮಗನಿಗೆ ತೊತ್ತಿನವನಾಗಿರಬೇಕು ಬಸವಣ್ಣ
ಕೋಟಿ ಬದುಕ ಮಾಡಿದರೂ
ತೋಟಿಗನ ಸಮವಲ್ಲ
ಬೇಟೆಯಿಂದ ತೀಟೆ ತೀರಿಸಿಕೊಂಬ
ಬೇಟೆಗಾರನ ಬದುಕು ಬದುಕಲ್ಲ ಬಸವಣ್ಣ."[೨೭]

ದಾನ :

ದಾನ ಮಾಡುವುದು ಮಾನವನ ಧರ್ಮ ಹಾಗೂ ಮೌಲ್ಯ. ಆದರೆ ಎಂಥವರಿಗೆ ದಾನ ಮಾಡಬೇಕೆಂಬುದು ವಿಚಾರ ಮಾಡುವಂಥದ್ದು. ಅಗತ್ಯವಿದ್ದವರಿಗೆ ದಾನ ಮಾಡಿದರೆ ಉಪಯೋಗವಾಗುತ್ತದೆ. ಅದು ಧರ್ಮ ಹಾಗೂ ಸತ್ಪಾತ್ರಕ್ಕೆ ಸಲ್ಲುತ್ತದೆ. ಅವಶ್ಯಕತೆ ಇಲ್ಲದವರಿಗೆ ದಾನ ಕೊಡುವದರಿಂದ ಏನೂ ಪ್ರಯೋಜನವಿಲ್ಲ. ಅಲ್ಲದೆ ದಾನ ಮಾಡಿದೆನೆಂದು ಹೇಳುವುದು ಕೂಡ ಅಹಮ್ಮಿಕೆಯಾಗುತ್ತದೆ. ದಾನ ಮಾಡುವದು ತೋರಿಕೆಗಾಗಲಿ, ಪ್ರತಿಷ್ಠೆಗಾಗಲಿ ಆಗಬಾರದು. ಮಾನವೀಯ ಮೌಲ್ಯ ಹಾಗೂ ದೀನರ ಉದ್ಧಾರಕ್ಕಾಗಿ ದಾನ ಮಾಡಬೇಕೆಂದು ಸ್ಪಷ್ಟಪಡಿಸುತ್ತಾರೆ.

"ಪುಟ್ಟಿ ಹೊನ್ನನೆ ತಂದು
ವ್ಯರ್ಥ ಮಾನವರಿಗೆ ಕೊಡುವದಕ್ಕಿಂತ
ಹಚ್ಚಡಾ ಕಾಣದ ಪರದೇಶಿಗೆ ಕೊಟ್ಟರೆ
ಅದಕ್ಕಿಂತ ಪುಣ್ಯವುಂಟೆ ಧರೆಯೊಳಗೆ ಬಸವಣ್ಣ.
ಮನೆಯೊಳಗಣ ತಂದೆ – ತಾಯಿಗಳಿಗೆ
ಕಕ್ಕುಲಾತಿಯಿಂದ ಉಣ ಬಡಿಸಿ
ಮಿಕ್ಕಿದುದನು ಅಂಧಕರಿಗಿಕ್ಕಿದರೆ
ಹನ್ನೊಂದು ಕೋಟಿ ಜಂಗಮರಿಗಿಕ್ಕಿದ ಫಲವಲ್ಲದೆ
ಲೆಂಡ ಪುಂಡರಿಗಿಕ್ಕಿದರೆ ಫಲವೇನು ಬಸವಣ್ಣ."[೨೮]

ಸಾಮಾಜಿಕ ವಿಡಂಬನೆ :

ಅಂದಿನ ಸಮಾಜದಲ್ಲಿ ಹಲವಾರು ಜಾತಿಗಳು, ಧರ್ಮದ ಆಚರಣೆಗಳಿದ್ದವು. ಸಂಪ್ರದಾಯದಿಂದ ಬಂದ ಆಚರಣೆಗಳ ಮೌಢ್ಯತೆಯ ಕುರಿತು ಮೌನೇಶ್ವರರು ಖಂಡಿಸುವರು. ಸರ್ವರು ಭಾವೈಕ್ಯತೆಯಿಂದ ಬಾಳಬೇಕೆಂಬುವುದು ಅವರ ಹೆಬ್ಬಯಕೆಯಾಗಿದೆ. ಆದ್ದರಿಂದ ಅಂದಿನ ಸಮಾಜದಲ್ಲಿ ಕಾಣುವ ವೈಪರೀತ್ಯಗಳನ್ನು ಮತ್ತು ಡಾಂಭಿಕ ವ್ಯಕ್ತಿಗಳನ್ನು ತಮ್ಮ ವಚನಗಳಲ್ಲಿ ವಿಡಂಬಿಸಿದ್ದಾರೆ.

"ಅಡದಾಸು ಕೇಳದ ಅರಸು
ಷಡು ಶಾಸ್ತ್ರಗಳನರಿಯದ ಗುರುವು
ಬಡತನಕ್ಕೆ ಒದಗದ ಸತಿಯು
ಬಡತನಕ್ಕೆ ಬಾರದ ಮಗನು
ಈ ನಾಲ್ವರು ಕಡೆತನಕ ಲೋಕದ ಪೀಡೆಗಳು ಬಸವಣ್ಣ.
ಎಲುವಿಲ್ಲದ ನಾಲಿಗೆ
ಹಲವು ಶಾಸ್ತ್ರಗಳನ್ನೋದಿ
ಫಲವಿಲ್ಲದೆ ಕೆಲದಾಡಿ ಸತ್ತಂತಹ
ಹೊಲೆಯರಗೊಡವಿ ನಮಗೇಕೆ ಬಸವಣ್ಣ
ಅರವಟ್ಟಿಗೆ ಇಕ್ಕಿಸಿ ಕೆರೆಬಾವಿ ಕಟ್ಟಿಸಿ
ಕರುವಿನ ಮೊಲೆ ಹಾಲು ಉಣಬಿಟ್ಟರೆ
ಸುರಿವ ಪುಣ್ಯದ ಧಾರೆಗೆ ಮಿತಿಯಿಲ್ಲ ಬಸವಣ್ಣ."[೨೫]

**ಮಂಟೇಸ್ವಾಮಿ :**

ಮಂಟೇಸ್ವಾಮಿ ಪರಂಪರೆಯ ತಾತ್ವಿಕತೆಯ ಹಿಂದೆ ಬಹುದೊಡ್ಡ ಶೈವತಾತ್ವಿಕತೆಯಿದೆ. ಹಾಗೆಯೇ ಅದೊಂದು ನಾಥ ಸಿದ್ಧಪರಂಪರೆಯೂ ಆಗಿದ್ದು, ತನ್ನೊಳಗೆ ಬೌದ್ಧಸಿದ್ಧ, ಶೈವಸಿದ್ಧ ಪಂಥಗಳನ್ನು ಒಳಗೊಂಡಿದೆ. ಮಂಟೇಸ್ವಾಮಿಗಳ ಪವಾಡ ಮತ್ತವರ ಚಟುವಟಿಕೆಗಳನ್ನು ಗಮನಿಸಿದರೆ, ಈ ಅಂಶ ಸ್ಪಷ್ಟವಾಗುತ್ತದೆ. ಅಸ್ಪೃಶ್ಯ ಜಾತಿಗೆ ಸೇರಿದ ಮಂಟೇಸ್ವಾಮಿ ಹೊಸದೊಂದು ಕಲ್ಯಾಣವನ್ನು ನಿರ್ಮಿಸುವುದೇ ಬಹುಮುಖ್ಯ ಅಂಶ. ಇಲ್ಲಿ ಜಾತಿಗಳ ನಡುವಿನ ಸಂಘರ್ಷವು ಮಂಟೇದರ ಒಕ್ಕಲಾಗುವ ಮೂಲಕ ಕರಗಿ ಹೋಗಿ ಪರಸ್ಪರ ಅವಲಂಬನೆಯ ಕುಲಸ್ಥಾಪನೆಯಾಗುವ ಪವಾಡವಿದೆ. ಈ ಹಿನ್ನೆಲೆಯಿಂದ ಮಂಟೇಸ್ವಾಮಿಯವರ ಬದುಕಿದ ಕಾಲದ ಬಗೆಗೆ ಬಿನ್ನಾಭಿಪ್ರಾಯಗಳನ್ನು ಗಮನಿಸಬಹುದು. ಮಂಟೇಸ್ವಾಮಿ ಬದುಕಿದ್ದ ಕಾಲ ೧೫-೧೬ನೇ ಶತಮಾನಗಳಾಗಿದ್ದರೂ, ಅವರು ೧೨ನೇ ಶತಮಾನದ ಕಲ್ಯಾಣವನ್ನು ಪರೀಕ್ಷೆಗೆ ಒಳಪಡಿಸುವ ವಿಧಾನ ಬಹಳ ಕುತೂಹಲಕಾರಿಯಾದುದು. ಆ ಬಸವಣ್ಣ ೧೨ನೇ ಶತಮಾನದವನಲ್ಲ. ಕೊಡೇಕಲ್ಲ ಬಸವಣ್ಣನನ್ನೇ ಮಂಟೇದರು ಪರೀಕ್ಷಿಸಿದ್ದು ಎಂಬ ವಾದಗಳಿದ್ದರೂ, ಆ ಸನ್ನಿವೇಶ ತನ್ನ ರೂಪಕಾರ್ಥದಲ್ಲಿ ವರ್ತಮಾನದಲ್ಲಿ ನಿಂತು, ಭೂತವನ್ನು ಪುನರ್ ವಿಮರ್ಶೆಗೆ ಒಳಪಡಿಸುವ (ಆಧುನಿಕ) ದೃಷ್ಟಿಕೋನವನ್ನು ಹೊಂದಿದೆ. ಭಾರತದ ಜಡಗೊಂಡ ಭೂತಕ್ಕೆ ಬಸವಣ್ಣ ಆಧುನಿಕವಾಗಿ ಕಾಣುವಂತೆಯೇ, ಮಂಟೇಸ್ವಾಮಿ ಚಳವಳಿ ಆಧುನಿಕೋತ್ತರ ನೆಲೆಯಲ್ಲಿ ನಿಲ್ಲುತ್ತದೆ. ಇಲ್ಲಿ ನಾವು ಬಹುಮುಖ್ಯವಾಗಿ ಗಮನಿಸಲೇಬೇಕಾದ ಅಂಶವೆಂದರೆ ಕಾಲ-ಸ್ಥಳಗಳ ಸಂಶೋಧನೆಯೆಂಬುದೇ ಮನುಷ್ಯ ಕಾಲದ ಏಂಗಡಣೆಗೆ ಶರಣಾಗಿರುವ ಮಿತಿಯದ್ದು. ಆದರೆ ಇಲ್ಲಿ ಮಂಟೇಸ್ವಾಮಿ ಪರಂಪರೆಯನ್ನು ಶತಮಾನಗಳ ಆಚೆಗೂ ಹೊತ್ತು ತಿರುಗುವವರಿಗೆ ಕಾಲ ಮುಖ್ಯ

ಅಲ್ಲವೇ ಅಲ್ಲ. ಮಂಟೇಸ್ವಾಮಿಯಂಥ ವ್ಯಕ್ತಿಪರಂಪರೆಯ ಕಾಲವನ್ನು ಸರಳರೇಖಾತ್ಮಕವಾಗಿ ಗ್ರಹಿಸಲಾಗುವುದಿಲ್ಲ. ಇಂಥ ಪರಂಪರೆಗಳು ಭೂತ-ಭವಿಷ್ಯ-ವರ್ತಮಾನಗಳನ್ನು ಏಕೀಕರಿಸಿ ವಾಸ್ತವ ಮತ್ತು ರೂಪಕಗಳನ್ನು ಹೆಣೆದು ಕಾಲಾತೀತ ಜೀವದ್ರವ್ಯವೊಂದನ್ನು ಹುಡುಕುವ ಅಥವಾ ಸೃಷ್ಟಿಸುವ ಹಂಬಲದಲ್ಲಿರುತ್ತವೆ.

“ಮಂಟೇಸ್ವಾಮಿಯನ್ನು ಧರೆಗೆ ದೊಡ್ಡವರು ಎಂದು ಕರೆಯಲಾಗುತ್ತದೆ. ವಚನ ಕಾಲಗಟ್ಟದ ಅಲ್ಲಮ ಪ್ರಭುವಿನ ಜೊತೆಗೆ ಸಮೀಕರಿಸುವ ಪ್ರಯತ್ನಗಳು ಕಂಡುಬರುತ್ತವೆ. ಉತ್ತರ ದೇಶದಿಂದ ಇವರಿಬ್ಬರು ದಕ್ಷಿಣ ದೇಶಕ್ಕೆ ಬಂದರೆಂಬ ಮಾತು ಕೂಡ ಮಹಾಕಾವ್ಯದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅದೇನೇ ಇದ್ದರೂ ಈ ಕಾಡು ಜೀವಗಳು ಬಂಡುಕೋರ, ಆಧ್ಯಾತ್ಮಿಕವಾದಿಗಳಾಗಿದ್ದಲ್ಲದೇ ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳ ಅಸ್ತಿತ್ವವನ್ನು ಪುನರ್‌ಸ್ಥಾಪಿಸುವ ಪ್ರತಿ ಸಂಸ್ಕೃತಿಯಂದರ ನಿರ್ಮಾಣ ಇವರ ಉದ್ದೇಶವಾಗಿದ್ದಂತೆ ತೋರುತ್ತದೆ. ಈ ಉದ್ದೇಶದಿಂದಾಗಿಯೇ ಇಬ್ಬರು ಆರಿಸಿಕೊಂಡಿದ್ದು ಬುಡಕಟ್ಟುಗಳು ಮತ್ತು ಶೂದ್ರಾತಿಶೂದ್ರರೇ ಅಧಿಕವಾಗಿದ್ದ ಕರ್ನಾಟಕದ ದಕ್ಷಿಣ ತುದಿಯನ್ನೇ”[೩೦]

ಇಂತಹ ಮಂಟೇಸ್ವಾಮಿಯವರನ್ನು ‘ನೀಲಗಾರರ ಪ್ರಕಾರ ಅವತಾರ ಪುರುಷನೆಂದು, ಬಸವೇಶ್ವರರಿಗಿಂತ ದೊಡ್ಡವರೆಂದು ಕರೆಯಲಾಗಿದೆ. ಇವರು ಬಸವೇಶ್ವರ ಹಾಗೂ ನೀಲಮ್ಮನವರ ‘ಧೃಢವನ್ನು ಪರೀಕ್ಷಿಸಲು ಭೂಮಿಗೆ ಬಂದ ಮಹಾ ಪುರುಷರು. ಕೈಲಾಸದಿಂದಲೇ ನೇರವಾಗಿ ಬಂದ ಪರಂಜ್ಯೋತಿ ಸ್ವರೂಪರೆಂದು ಚಿತ್ರಿಸಲ್ಪಟ್ಟವರು. ತಮ್ಮ ಮಹಿಮೆಯಿಂದ ಜಗತ್ತನ್ನು ಬೆಳಗಿದವರು.

ಭೂಮಿ ಲೋಕದ ಲಿಂಗವನ್ನೆತ್ತಿ ಎದೆಗೆ ಧರಿಸಿ ಮಹಾಪ್ರಭುವಾಗಿ ನಿಂತುದರಿಂದ ಭೂಮಿಲೋಕದ ಲಿಂಗವನ್ನೆತ್ತಿದರೂ ಅಲುಗಾಡದೆ ಅಂದರೆ ‘ಮಂಟಗೋಳದೇ’ ಅಚಲವಾಗಿ ನಿಂತುಕೊಂಡಿದ್ದುದರ ಪರಿಣಾಮವಾಗಿ ಧರೆಗೆ ದೊಡ್ಡವರು ಮಂಟೇಲಿಂಗಯ್ಯ ಎಂದು ನಾಮಕರಣವಾಗಿದೆಂಬ ಅಂಶ ತಿಳಿದುಬಂದಿದೆ.

ಮಂಟೇಸ್ವಾಮಿಯ ಹೆಸರಿನ ‘ಮಂಟ’ ಎಂಬ ಶಬ್ಬವು ತೆಲುಗು ಮೂಲದ್ದು. ಮಂಟ ಎಂದರೆ ಉರಿ, ಕಿಚ್ಚು ಮತ್ತು ಜ್ಯೋತಿಗಳನ್ನು ಪ್ರತಿನಿಧಿಸುತ್ತದೆ. ಇಂತಹ ತೆಲುಗು ಮೂಲದ ಹೆಸರುಳ್ಳ ಮಂಟೆಸ್ವಾಮಿ ಕೃಷ್ಣಾ ನದಿ ದಂಡೆಯ ಶ್ರೀಶೈಲದಿಂದ ಹೊರಟು, ಅದೇ ಕೃಷ್ಣಾ ನದಿ ತೀರದ ಕೊಡೇಕಲ್ ಪ್ರಾಂತ್ಯಕ್ಕೆ ಬಂದಿರುವುದು ಸಂಭವನೀಯ. ಕಾವ್ಯದಲ್ಲಿ ಮಂಟೇಸ್ವಾಮಿ ಕೈಲಾಸದಿಂದ ಕಲ್ಯಾಣಕ್ಕೆ ಬಂದವರು ಎಂಬುದಕ್ಕೆ “ಶ್ರೀಶೈಲ ಪರ್ವತವನ್ನು ದಕ್ಷಿಣ ಕೈಲಾಸವೆಂದು ಕರೆಯುತ್ತಾರೆ. ಇದು ೫೧ ಶಕ್ತಿ ಪೀಠಗಳಲ್ಲಿ ಒಂದು. ದಕ್ಷಿಣ ಕೈಲಾಸವೆಂದು, ಭೂಕೈಲಾಸವೆಂದು ಶೈವ ಪುರಾಣಗಳಲ್ಲಿ ಕೀರ್ತಿಸಲ್ಪಡುವ ಶ್ರೀಶೈಲ ಪರ್ವತದ ಮಲ್ಲಿಕಾರ್ಜುನನು ಜ್ಯೋತಿರ್ಲಿಂಗ ರೂಪವಾಗಿ ಅಲ್ಲಿ ಕಾಣಿಸಿಕೊಂಡಿದ್ದಾನೆ. ಜ್ಯೋತಿರ್ಲಿಂಗ ಸ್ವರೂಪ ಶಿವನೇ ಶ್ರೀಶೈಲದ ಮುಖ್ಯದೈವ. ಕಾವ್ಯದಲ್ಲಿ ಮಂಟೇಸ್ವಾಮಿಗೆ ಪರ್ಯಾಯ

ನಾಮವಾಗಿ ಜ್ಯೋತಿಲಿಂಗಯ್ಯ ಎಂದು ಕರೆಯಲಾಗಿದೆ. ಮಂಟೇಲಿಂಗ ಎಂಬ ಹೆಸರೇ ಜ್ಯೋರ್ತಿಲಿಂಗಕ್ಕೆ ತೆಲುಗು ಅನುವಾದವಾಗಿದೆ. ಜ್ಯೋತಿಲಿಂಗದ ತತ್ಸಮಾನವೇ ಮಂಟೇಲಿಂಗಯ್ಯ."[೩೧]

ಮಂಟೇಸ್ವಾಮಿಗಳು ಸಿದ್ದಿಪುರುಷರು. ಅದರ ಮೂಲಕ ಸಿದ್ಧರಾದರು. ಹಾಗೆಯೇ ಲೀಲಾಪುರಷರಾಗಿದ್ದಾರೆ. .ಮಂಟೇಸ್ವಾಮಿ ದಕ್ಷಿಣ ಕರ್ನಾಟಕ ಒಂದು ಮುಖ್ಯ ಜಾನಪದ ಅನುಭವಿ ಕಾವ್ಯದ ನಾಯಕ. ಅಂತೆಯೇ ಚಾರಿತ್ರಿಕ ವ್ಯಕ್ತಿಯು ಹೌದು. ಈತನ ಗದ್ದುಗೆ ಮಂಡ್ಯ ಜಿಲ್ಲೆಯಲ್ಲಿ ಇವತ್ತಿಗೂ ಇದೆ. ಈತನು ಬದುಕಿದ ಕಾಲವನ್ನು ವಿದ್ವಾಂಸರು ನಿಖರವಾಗಿ ಗುರುತಿಸಿಲ್ಲವಾದರೂ ಎಲ್ಲರು ಒಮ್ಮತಾಭಿಪ್ರಾಯದಿಂದ ಹದಿನಾರು ಅಥವಾ ಹದಿನೇಳನೇ ಶತಮಾನದಲ್ಲಿ ಬಾಳಿದವನೆಂದು ಊಹಿಸಿದ್ದಾರೆ.

"ಮಂಟೇಸ್ವಾಮಿಯ ಜೀವನ ಕಲ್ಯಾಣದಿಂದ ಪ್ರಾರಂಭವಾಗುತ್ತದೆ. ಈತನು ಕಲ್ಯಾಣವನ್ನು ಪ್ರವೇಶ ಮಾಡುವಂತಹ ಸಂದರ್ಭದಲ್ಲಿ ಅಸಹ್ಯಕರ ರೋಗಿಯ ಪ್ರವೇಶಮಾಡಿ ಎಲ್ಲರನ್ನು ದಿಗ್ಭ್ರಮೆಗೊಳಿಸುತ್ತಾನೆ. ಅಷ್ಟೇ ಅಲ್ಲದೇ 'ರಂಡ ಪ್ರಚಂಡ' ಜಂಗಮರು ಕಟ್ಟಿದ ಲಿಂಗಗಳನ್ನು ಕಲ್ಯಾಣಿಯಲ್ಲಿ ಮಾಯ ಮಾಡುವವರೆಗಿನ ದೃಶ್ಯ ಅನೇಕ ಸಾಂಸ್ಕೃತಿಕ ಚರ್ಚೆಗಳಿಂದ ದಾರಿಮಾಡಿಕೊಡುತ್ತದೆ. ಇಲ್ಲಿ ಎರಡು ವಿಚಾರಗಳು ಬಹಳ ಪ್ರಮುಖವಾಗಿರುತ್ತವೆ. ಆತ್ಮದಲ್ಲಿ ಶುದ್ಧಿಯಿಲ್ಲದ ಕೆಲವರು ಕಟ್ಟಿದ ಲಿಂಗದ ಕಲ್ಪನೆಯನ್ನು ಹುಸಿಗೊಳಿಸುವ ಆಸೆ ಒಂದನೆಯದಾದರೆ, ಕಲ್ಯಾಣದಲ್ಲಿ ಉಳಿಯಲು ಯೋಗ್ಯವಾದ ಶರಣರೆಂದರೆ ಕೇವಲ ಕೆಳವರ್ಗದವರು ಮಾತ್ರ ಎಂಬ ಆಶಯ ಎರಡನೇಯದು."[೩೨] ಇಂತಹ ಆಶಾ ಮನೋಭಾವನೆಯನ್ನಿಟ್ಟುಕೊಂಡು ಮಂಟೇಸ್ವಾಮಿಯು ಸಾಮಾಜಿಕ ಕ್ರಾಂತಿಕಾರತೆಗೆ ಪ್ರೇರಕ ಶಕ್ತಿಯಾಗಿ ಕಾಣಿಸಿಕೊಳ್ಳುತ್ತಾರೆ.

ಮಂಟೇಸ್ವಾಮಿಯು ಕೊಡೇಕಲ್ ಪರಂಪರೆಯಲ್ಲಿ ಒಬ್ಬನಾಗಿದ್ದರಿಂದಲೇ ಸಿದ್ದಿ ಸಾಧನೆಗಳ ಸ್ವರೂಪ ಹಾಗೂ ಕಾರ್ಯಸಿದ್ದಿಯ ನೆಲೆಗಳನ್ನು ಅರಿತುಕೊಳ್ಳತ್ತಾನೆ. ಹಾಗೆಯೇ ಈ ಪರಂಪರೆಯನ್ನು ಸೇರಿಕೊಳ್ಳುತ್ತಾನೆ. ಕೊಡೇಕಲ್ ನೆಲೆಯಲ್ಲಿ ಒಂದು ಅನುಭಾವಿ ಸ್ಕೂಲಿನ ಸಂರಚನೆಯಲ್ಲಿ ತಾನೂ ಭಾಗಿಯಾಗಿ ಉತ್ತರದ ಸಾಧನ ಫಲಿತಗಳನ್ನು ದಕ್ಷಿಣದತ್ತ ಕೊಂಡೊಯ್ಯುವ ಮಹಾಪುರುಷ ಮಂಟೇಸ್ವಾಮಿ ಆಗಿದ್ದಾನೆ. ಅಷ್ಟೇ ಅಲ್ಲದೆ ಕೊಡೇಕಲ್ ಗುರುಪರಂಪರೆ ಕೊಂಡಿಯಾಗಿರುವ ಪರಮಾನಂದ, ಆರೂಢ ಸಂಗಮನಾಥ, ಕೊಡೇಕಲ್ ಬಸವಣ್ಣ ಮತ್ತು ರಾಚಪ್ಪಯ್ಯರ ಸಂಸರ್ಗದಿಂದ ತಾನೂ ಕೂಡ ಸಾಹಿತ್ಯ ಹಾಗೂ ಸಾಧನಾ ವ್ಯಕ್ತಿತ್ವಗಳನ್ನು ರೂಢಿಸಿಕೊಂಡು ಜಂಗಮ ಬದುಕನ್ನು ಸಾಗಿಸಿದಂತಹವನು.

ಕಾಲಜ್ಞಾನ ಹಾಗೂ ವಚನಗಳಿಗೆ ಸಂಬಂಧಿಸಿದಂತೆ 'ಮಂಟೆದಲಿಂಗ' ಎಂಬ ಅಂಕಿತದೊಂದಿಗೆ ಸುಮಾರು ರಚನೆಗಳನ್ನು ರಚಿಸಿದ್ದಾನೆ. ಈತನು ಕೊಡೇಕಲ್‌ನಲ್ಲಿ ಪ್ರಾರಂಭದಲ್ಲಿ ತನ್ನ

ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ಮಂಟೆಸ್ವಾಮಿ ಕೊಡೇಕಲ್‌ನ್ನು ಬಿಟ್ಟು ಮೈಸೂರಿನಡೆಗೆ ಪ್ರಯಾಣ ಬೆಳೆಸುತ್ತಾರೆ. ರಾಚಪ್ಪಯ್ಯ ಹಾಗೂ ಮಂಟೆಸ್ವಾಮಿಯ ಪರಮ ಶಿಷ್ಯರಾದ ನೀಲಗಾರರು ಅವರ ಸಾಂಸ್ಕೃತಿಕ ಬದುಕಿನ ಮೌಖಿಕ ಕಥಾನಕಗಳನ್ನು ಕಟ್ಟಿಕೊಟ್ಟಿದ್ದಾರೆ.

"ಜನಪದ ಕಾವ್ಯದ ಪ್ರಕಾರ ಮೈಸೂರು ಪ್ರದೇಶದಲ್ಲಿ ಮಂಟೇಸ್ವಾಮಿಯು ಮೊದಲ ಕುರುಬಗೌಡನಾದ ಬೋಪ್ಪೆಗೌಡನಿಂದ ಹಟ್ಟಿಯನ್ನು ಪಡೆದುಕೊಂಡು ಅಲ್ಲಿ ತನ್ನ ನೆಲೆಯನ್ನು ಕಟ್ಟಿಕೊಳ್ಳುತ್ತಾನೆ. ಇಂದಿಗೂ ಮೈಸೂರು ಜಿಲ್ಲೆಯ ಬೊಪ್ಪೆಗೌಡನ ಪುರದಲ್ಲಿ ಮಂಟೇಸ್ವಾಮಿಯ ಗದ್ದುಗೆ ಇದ್ದು, ಮೈಸೂರು ಅರಸು ಮನೆತನದ ಸಂಬಂಧ ಹೊಂದಿದ ಗುರುವರ್ಗವು ಈ ಪರಂಪರೆಯ ಆಚರಣೆಗಳನ್ನು ನಡೆಸಿಕೊಂಡು ಹೋಗುತ್ತಾರೆ"[೩೩]

ಈತನ ಜಂಗಮ ಬದುಕನ್ನು ರೂಢಿಸಿಕೊಂಡ ಸಂಚಾರಗೈದ ಸಾಧಕರೆನಿಸಿಕೊಂಡ ರಾಚಪ್ಪಾಜಿಯು ಕಪ್ಪಡಿಯಲ್ಲೂ, ದೊಡ್ಡಮ್ಮತಾಯಿ ಮುಟ್ಟನಳ್ಳಿ ತೋಪಿನಲ್ಲಿಯೂ, ಸಿದ್ದಪ್ಪಾಜಿ ಚಿಕ್ಕನೂರಿನಲ್ಲಿಯೂ, ಚೆನ್ನಮ್ಮಾಜಿಯು ರಾಜಾಪ್ಪಾಜಿಯೊಟ್ಟಿಗೆ ಕಪ್ಪಡಿಯಲ್ಲೂ ಫಲಹಾರದಯ್ಯ ಮಂಟೇಸ್ವಾಮಿಯೊಟ್ಟಿಗೆ ಬೋಪ್ಪೆಗೌಡನ ಪುರದಲ್ಲಿಯೂ ವಾಸವಾಗಿದ್ದರು. ಅಲ್ಲಮಪ್ರಭು ಮತ್ತು ಮಂಟೇಸ್ವಾಮಿಯವರ ಸಮೀಕರಣವಾಗಿ ಇಡೀ ಕಾವ್ಯದ ಉದ್ಧಕ್ಕೂ ಪಲ್ಲವಿಯಂತೆ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತದೆ. ಮಂಟೇಸ್ವಾಮಿಯು ಶಿಷ್ಯರೊಡನೆ ದಕ್ಷಿಣಾಭಿಮುಖವಾಗಿ ಬಂದ ವಿಷಯವನ್ನು ನೀಲಗಾರರು ರೋಮಾಂಚಕವಾಗಿ ವರ್ಣಿಸಿದ್ದಾರೆ.

"ಗುರುವೆ ಸಿದ್ಧು ಸಿದ್ಧುರಿಗೆಲ್ಲ
ನೀವು· ಅತಿಮುದ್ದು ಘನನೀಲಿ
ಸಿದ್ಧಯ್ಯ ಸ್ವಾಮಿ ಬನ್ನಿ
ಮಂಟೇದ ಲಿಂಗಯ್ಯ ನೀವೇ ಬನ್ನಿ
ಇಂತಹ ಜ್ಯೋತಿ ತಂದವರು ಗುರುವು
ಜ್ಯೋತಿರ್ಲಿಂಗಪ್ಪ
ಅಲ್ಲಮಪ್ರಭು
ಮಂಟೇದ ಲಿಂಗಯ್ಯ
ಕಂಡಾಯ್ದ ಜ್ಯೋತಿ
ಇಂಥ ಧರೆಗೆ ದೊಡ್ಡವರ ಮಹಿಮೆ
ಎಷ್ಟು ಕೊಂಡಾಡಲಪ್ಪ"[೩೪]

ಇಲ್ಲಿ ಇಷ್ಟಲಿಂಗದ ಕಲ್ಪನೆಯಾಗದೆ, ಜ್ಯೋತಿರ್ಲಿಂಗದ ತತ್ವದ ಪ್ರತಿಮೆಯಾಗವಂತಹ ರೀತಿಯಲ್ಲಿ ಕಾವ್ಯವು ಮೈದಾಳಿದೆ.

"ಈ ಬೆಳಕಿನ ಹುಳದ ಸ್ವರೂಪದ ಮಾದರಿಯಾದರೂ ಏನು?
ಅಯ್ಯಾ ಬೆಳಕನ್ನೆ ಪಡೆಕ್ಕಂಡೂ
ಬಂದಂತಹ ಪ್ರಾಣಿಗೆ
ಇದ ಬೆಳಕಿನ ಹುಳ ಅಂತ ಕರೆದಾರು ॥ ಸುವ್ವಾ, ಬಾ ಚನ್ನಬಸವಣ್ಣ ॥
ಅಯ್ಯಾ ಕಣ್ಣಿಗೇ ಕಾಣುವುದಿಲ್ಲ
ಇದು ಕೈಗೇ ಸಿಕ್ಕುವುದಿಲ್ಲ
ಇದರ ಬೆಳಕ ಕಂಡವರೋ ಮೊದಲಿಲ್ಲ॥ ಸಾವ್ವಾ ಬಾ ಚನ್ನಬಸವಣ್ಣ॥
ಕೈಗೆ ಸಿಕ್ಕುವುದಿಲ್ಲ ಗುರುವು
ಈಗಲೀಗ ಬೆಳಕು ಇಲ್ಲದೇ ಹೋದ್ರೆ ಈ ಪ್ರಾಣೀನೇ ಗೊತ್ತಾಗುವುದಿಲ್ಲ
ಇದೋ ಇದರಲ್ಲಿ ಗುರುವು ಬೆಳಕಿರೊ ಪ್ರಕಾರ
ಇದು ಮಿಣಕಿನುಳ ಅಂತ ಅದಕೆ
ನಾಮಕರಣ ಕರೆದರಂತೆ ಸಿದ್ಧಯ್ಯಾ
ಈ ಮಿಣುಕುನುಳ
ಎನ್ನುತೇಳಿ ನನ್ನ ಗುರುವು ನಾಮಕರಣ ಪಡೆದು
ಅವರು ಭೂಮಿ ಭೂಲೋಕಕ್ಕೇ
ಬುಟ್ಟರೊ ಮಾಯಿಕಾರ ಸಿದ್ದಯ್ಯ."[೫೫]

ಅಲ್ಲಮರೋ ಮಂಟೇಸ್ವಾಮಿಯವರೊ ಬೆಳಕಿನ ಹುಳುವಾಗಿ ಲೋಕಕ್ಕೆ ಬಂದ ಮೇಲೆ ಅದಕ್ಕೆ ಸಾಂಸ್ಥಿಕ ಜಂಜಡಗಳಿಲ್ಲ. ಬಿರುದುಗಳನ್ನು ಪಡಕೊಂಡು ಗುರುಗಳು ತಾವೆಲ್ಲಿಗೆ ಹೊಗುಬೇಕು ಎಂಬ ಗುರಿಯನ್ನು ಸ್ಪಷ್ಟಪಡಿಸಿದರು.

"ಉತ್ತರ·ದೇಸವನೆ ಬಿಟ್ಟು ಬಿಟ್ಟು ಗುರುವು
ಇಷ್ಟೊಂದು ಬಿರುದು ಲಾಂಚಾಣಗಳನೆ ಧರಿಸಿಕೊಂಡು
ಈಗಾ ಎಲ್ಲಿಂದ ಎಲ್ಲಿಗೆ ನಾನು ಹೋಗಬೇಕು ಎನುತ ಹೇಳಿ
ಜಗಂಜ್ಯೋತಿಯವರು
ಪರಂಜ್ಯೋತಿಯವರು ಪಾತಾಳ ಜ್ಯೋತಿಯವರು
ಅಲ್ಲಮ ಪ್ರಭು ಮಂಟೇದ ಲಿಂಗಪ್ಪ
ಈಗ ಆದಿ ಕಲ್ಯಾಣಕೆ ನಾನು
ಹೋಗಬೇಕು ಎಂದರಲ್ಲಾ ಸಿದ್ಧಯ್ಯ"[೫೬]

ಮಂಟೇಸ್ವಾಮಿಯಲ್ಲೂ ಗುರುವಿನ ಯಾತ್ರೆ ಕಲ್ಯಾಣದ ಕಡೆಗೆ, ಶೂನ್ಯ ಸಂಪಾದನೆಯಲ್ಲೂ ಕಲ್ಯಾಣದ ಕಡೆಗೆ. ಮಂಟೇಸ್ವಾಮಿಗೆ ಅದೊಂದು ಆತ್ಮ ಪರೀಕ್ಷಾ ಯಾತ್ರೆಯೂ ಹೌದು.

ಕೋಮು ಸೌಹಾರ್ದತೆಯ ಕುರಿತು ಅವಲೋಕನ ಮಾಡಿದಾಗ ಹಿಂದೂ ಮತ್ತು ಮುಸ್ಲಿಂ ಸಂಬಂಧಗಳ ಪರಿಕಲ್ಪನೆ ಗೋಚರಿಸುತ್ತದೆ. ಈಗಾಗಲೇ ಅಧ್ಯಯನ ಹಾಗೂ ಅಧ್ಯಾಪನ ದೃಷ್ಟಿಯಿಂದ ಗಮನಿಸಿದಾಗ ಕೋಮು ಸಾಮರಸ್ಯಗಾಗಿ ದುಡಿದ ಸೂಫಿ ಸಂತರ ವೈಚಾರಿಕತೆ ಬಹಳ ಮುಖ್ಯವಾಗಿ ಕಾಣಿಸುತ್ತದೆ. ಹಲವಾರು ಧರ್ಮಗಳಲ್ಲಿ ಕಾಣುವ ಮಾನವೀಯ ಮೌಲ್ಯಗಳು ಮೇಲ್ನೋಟಕ್ಕೆ ಒಂದೇ ಎನಿಸಿದರೂ, ಅಂತರಂಗದಲ್ಲಿ ಇರುವ ಭಿನ್ನತೆಯನ್ನು ಅಲ್ಲಗಳೆದ ಶರಣರು ತಮ್ಮದೇ ಆದ ಸಿದ್ಧಾಂತವನ್ನು ಪ್ರತಿಪಾದಿಸಿದರು. ಇವರು ತಾವಿದ್ದ ಸ್ಥಳವನ್ನಷ್ಟಲ್ಲದೇ ದೇಶ ಸಂಚಾರವನ್ನು ಕೈಗೊಂಡು ಸೌಹಾರ್ದತೆಯ ಮನೋಭಾವನೆಯನ್ನು ತುಂಬಿದರು. ಯಾವುದೇ ಧರ್ಮದಲ್ಲಿ ಹುಟ್ಟಿದರೂ ಧರ್ಮಗಳಲ್ಲಿರುವ ಕಂದಕವನ್ನು ಅಲ್ಲಗಳೆದರು.

## ಅಡಿ ಟಿಪ್ಪಣಿ

೧. ಹಸನ್ ನಯೀಂ ಸುರಕೋಡ, (ಅನು) ಕೋಮು ಗಲಭೆಗಳು ಹಾಗೂ ಭಾರತದ ಪೊಲೀಸರು ಪುಟ– ೧

೨. ವಿ. ರಾಘವೇಂದ್ರ ರಾವ್, ಹಿಂದುಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರುಗಳು ಪುಟ–೩೪

೩. ನಾ ದಿವಾಕರ, (ಅನು) ಕೋಮುವಾದ: ಒಂದು ಸಚಿತ್ರದರ್ಶನ – ಪುಟ – ೬೧

೪. ಬಸವರಾಜ ಪೋಲಿಸ್ ಪಾಟೀಲ್, ಜಾನಪದ ಕರ್ನಾಟಕ ಲೇಖನ ಪುಟ – ೧೨–೧೩

೫. ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೨೩

೬. ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೪೨

೭. ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೪೫

೮. ಶಿವಾನಂದ ಎಸ್.ವಿರಕ್ತಮಠ,ಅಮರಕಲ್ಯಾಣ ಪುಟ– ೫೮

೯. ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೨೦

೧೦ ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ.ಪುಟ – ೨೧

೧೧ ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ. ಪುಟ – ೪೩

೧೨ ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ. ಪುಟ – ೪೩

೧೩ ಎಂ ಶಂಕರಪ್ಪ ಸಿದ್ದರಾಮಪುರ, ಕೊಡೇಕಲ್ಲ ಬಸಪ್ಪಯ್ಯ ಮತ್ತು ವಿರುಪಯ್ಯನವರ ಜೀವನ ಚರಿತ್ರೆ ಪುಟ – ೧೭–೧೮

೧೪ ಎಂ ಶಂಕರಪ್ಪ ಸಿದ್ದರಾಮಪುರ, ಕೊಡೇಕಲ್ಲ ಬಸಪ್ಪಯ್ಯ ಮತ್ತು ವಿರುಪಯ್ಯನವರ ಜೀವನ ಚರಿತ್ರೆ ಪುಟ – ೩೦

೧೫ ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೪೬

೧೬ ಚಂದ್ರಕಾಂತ ಕರದಳ್ಳಿ, ಖ್ವಾಜಾ ಬಂದಾನವಾಜರು ಪುಟ–೩೪–೩೫

೧೭ ಶಿವಾನಂದ ಎಸ್.ವಿರಕ್ತಮಠ, ಅಮರಕಲ್ಯಾಣ ಪುಟ – ೫೦

೧೮ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ–೨೨–೨೩

೧೯ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೧೨
೨೦ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೦
೨೧ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೧
೨೨ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೪೯
೨೩ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೦
೨೪ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೧
೨೫ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೧-೫೨
೨೬ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೨
೨೭ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೩
೨೮ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೪
೨೯ ಸೂಗಯ್ಯ ಹಿರೇಮಠ, ತಿಂಥಿಣಿ ಮೋನಪ್ಪಯ್ಯ ಪುಟ-೫೬
೩೦ ಸುಭಾಷ ಭರಣಿ, ಧರೆಗೆ ದೊಡ್ಡವರು ಪುಟ-೫೦
೩೧ ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಪುಟ-೧೩೦
೩೨ ಸುಭಾಷ ಭರಣಿ, ಧರೆಗೆ ದೊಡ್ಡವರು ಪುಟ-೫೧
೩೩ ಶಿವಾನಂದ ಎಸ್.ವಿರಕ್ತಮಠ, ಅಮರ ಕಲ್ಯಾಣ ಪುಟ- ೫೪
೩೪ ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಪುಟ - ೧೭
೩೫ ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಪುಟ - ೧೯
೩೬ ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಪುಟ - ೧೯

# ಅಧ್ಯಾಯ ೪

## ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು

ಕೊಪ್ಪಳ ಜಿಲ್ಲೆಯು ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಧಾರ್ಮಿಕವಾಗಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಈ ಭಾಗದಲ್ಲಿ ಪುರಾತನ ಕಾಲದಿಂದ ಇಲ್ಲಿಯವರೆಗೆ ಹಿಂದೂ, ಮುಸ್ಲಿಂ ಮತ್ತು ಇತರೆ ಧರ್ಮಗಳ ನಡುವೆ ಐಕ್ಯತೆ ಕಾಣಿಸಿಕೊಂಡು ಸೌಹಾರ್ದತೆ ಭಾವನೆಯಿಂದ ಇಲ್ಲಿನ ಜನರು ಬದುಕುತ್ತಿರುವುದು ಕಂಡು ಬಂದಿದೆ. ಯಲಬುರ್ಗಾ, ಕುಷ್ಟಗಿ, ಗಂಗಾವತಿ ಮತ್ತು ಕೊಪ್ಪಳ ತಾಲ್ಲೂಕಗಳನ್ನೊಳಗೊಂಡ ಜಿಲ್ಲೆಯು ಹಲವಾರು ತಾಣಗಳಲ್ಲಿ ಸೌಹಾರ್ದತೆ ಹೊಂದಿ, ಬೇರೆ ಜಿಲ್ಲೆಗಳಿಗಿಂತ ಭಿನ್ನತೆ ಹಾಗೂ ವೈಶಿಷ್ಟತೆಯನ್ನು ಪಡೆದುಕೊಂಡಿದೆ.

"ಕ್ರಿ.ಪೂ ೨೭೨ರ ಕಾಲದ ಅಶೋಕನ ಇಲ್ಲಿನ ಎರಡು ಶಾಸನಗಳು ಗವಿಮಠದ ಅಡ್ಡಣಗಿ ಗುಂಡಿನಡಿಯಲ್ಲಿ ಇನ್ನೊಂದು ಮಳೆಮಲ್ಲೇಶ್ವರ ಬೆಟ್ಟದ ಪಾಲ್ಕಿ ಗುಂಡಿನಡಿಯಲ್ಲಿವೆ. ಇದರ ಪಾದದಲ್ಲಿ ವರಾಂಗ ಚರಿತೆಯ ಕರ್ತೃ ಜಟಾಸಿಂಹ ನಂದಿಯ ಪಾದಗಳನ್ನು ಚಾವಯ್ಯನೆಂಬ ಶಿಷ್ಯ ಕೆತ್ತಿಸಿದ್ದಾನೆ. ಬಹದ್ದೂರಬಂಡಿ, ಕೊಪ್ಪಳ, ಇರಕಲ್ಲಗಡಾದ ಕೋಟೆಗಳು ಈಗಲೂ ಆಕರ್ಷಕವಾಗಿವೆ. ಮಳೆಮಲ್ಲೇಶ್ವರ ಬೆಟ್ಟದ ನೆತ್ತಿಯ ಮೇಲೆ ಆದಿಮಾನವರ ಕಲ್ಗೋರಿ (ಡಾಲ್ಮನ್)ಗಳಿವೆ. ಇಲ್ಲಿ ಬಣ್ಣದ ಗವಿ ಚಿತ್ರಗಳಿವೆ. ಜೈನರ ಕಾಶಿಯೆಂದು ಕರೆಯಲ್ಪಟ್ಟ ಕೊಪ್ಪಳ ಎಂಟನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಜೈನರ ತೀರ್ಥ ಕ್ಷೇತ್ರವಾಗಿತ್ತು. ಇಲ್ಲಿ ಪಾರ್ಶ್ವನಾಥ ಬಸದಿ ಇದೆ. ಹುಲಿಕೆರೆ, ಚಾಂದ್‌ಬಾವಡಿ, ದೇವಾಂಗಮಠ, ಸಿರಸಪ್ಪಯ್ಯನಮಠ, ಸೈಲಾನ ಬಾದೇಶಾ ದರ್ಗಾ, ಹಿರೇಮಸೀದಿ, ರಾಜಾಬಕ್ಷಿ ದರ್ಗಾ ಹಾಗೂ ಮರ್ದಾನ್‌ಗೈಬ ದರ್ಗಾಗಳಿವೆ. ಕೊಪ್ಪಳದ ಗವಿಮಠವು ಜೈನ, ಬುದ್ಧ, ಶೈವ, ವೈಷ್ಣವ, ವೀರಶೈವ ಸಂಸ್ಕೃತಿಯ ತಾಣವಾಗಿದೆ. ಗವಿಸಿದ್ದೇಶ್ವರ ಜಾತ್ರಾ ಮಹೋತ್ಸವ ವಿಜೃಂಭಣೆಯಿಂದ (ಜನವರಿ) ಬನದ ಹುಣ್ಣಿಮೆಯ ಎರಡನೆಯ ದಿವಸದಂದು ನೆರವೇರುವುದು. ಅಂದು ಲಕ್ಷಾಂತರ ಭಕ್ತರು ನೆರೆಯುತ್ತಾರೆ."[೧]

ಮೇಲಿನ ಮಾತುಗಳಿಂದ ಕೊಪ್ಪಳ ಜಿಲ್ಲೆಯ ಬೇರೆ ಬೇರೆ ಭಾಗಗಳ ಸೌಹಾರ್ದತಾ ತಾಣಗಳನ್ನು ಅವಲೋಕಿಸಿದಂತಾಗುತ್ತದೆ. ಇವುಗಳ ಸಮಗ್ರ ಅಧ್ಯಯನವು ಈ ಭಾಗದ ಜನಪದರ ಬದುಕನ್ನು ಗ್ರಹಿಸಲು ಸಹಾಯಕವಾಗಬಲ್ಲದು. ಆ ನಿಟ್ಟಿನೆಡೆಗೆ ಈ ಅಧ್ಯಯನವು ತನ್ನ ಪ್ರಯತ್ನವನ್ನು ಮಾಡಿದೆ.

ಹಿಂದೂ ಧರ್ಮಕ್ಕೆ ಸಂಬಂಧಿಸಿದ ಅನೇಕ ದೇವಾಲಯಗಳು ಹಾಗೂ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಅನೇಕ ಮಸೀದಿಗಳು, ದರ್ಗಾಗಳು ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಇವುಗಳಲ್ಲಿಯ ಆಚರಣಾ ಪದ್ಧತಿ ಬೇರೆ ಬೇರೆಯಾಗಿದ್ದರೂ, ಅವುಗಳಿಂದ ಹೊರಸೂಸುವ ವಿಶಾಲ

ಮನೋಭಾವವು ಜನಪದರ ಒಳಿತನ್ನೆ ಒಳಗೊಂಡತಾಗಿ ಕಂಡು ಬರುತ್ತದೆ. ಅದು ಅಂತರಂಗದಲ್ಲಿ ಒಂದಲ್ಲ ಒಂದು ರೀತಿಯಿಂದ ಜನರ ಸಂಸ್ಕೃತಿಗೆ ಪೂರಕವಾಗಿದೆ. ಇಂತಹ ಭಿನ್ನ ಸಂಸ್ಕೃತಿಗಳೂ ಒಂದಾಗಿ ಬಾಳಿದ ಕೊಪ್ಪಳ ಜಿಲ್ಲೆ ಕೋಮುಸೌಹಾರ್ದತಾ ತಾಣಗಳೆಂದು ಪರಿಚಯ ಮಾಡಿಕೊಳ್ಳುವುದು ಮುಖ್ಯವಾಗಿದೆ.

**ಕೊಪ್ಪಳ ತಾಲೂಕು:-**

೧) ಸಿರಸಪ್ಪಯ್ಯನ ಮಠ (ಕೊಪ್ಪಳ ನಗರ)

೨) ಹಜರತ್ ಮರ್ದಾನ್ ಗೈಬ್ ದರ್ಗಾ (ಕೊಪ್ಪಳ ನಗರ)

೩) ರಾಜಭಕ್ಷಿ ದರ್ಗಾ (ಯಮನೂರಪ್ಪ-ಕೊಪ್ಪಳ ನಗರ)

೪) ಖಾದರಲಿಂಗ (ಕೊಪ್ಪಳ ನಗರ)

೫) ಜಡೆತಾತ (ಯಮನೂರಸಾಬ್-ಹಾಲವರ್ತಿ)

೬) ಸೈಯದ್ ಷರಾಜ್ ಅಲಿ ಖಾದ್ರಿ (ಬಿಸರಳ್ಳಿ)

೭) ಯಮನೂರಸಾಬ್ (ಬಹದ್ದೂರ ಬಂಡಿ)

೮) ಹಜರತ್ ಮುಸ್ತಾ ಖಾದ್ರಿ (ಬೆಳಗಟ್ಟಿ)

೯) ಗ್ಯಾನಪ್ಪಜ್ಜ (ಗ್ಯಾನೇಶ್ವರ ಗುನ್ನಳ್ಳಿ)

**ಯಲಬುರ್ಗಾ ತಾಲೂಕು:**

೧) ಹುಸೇನ್ ಷಾಹವಲಿ (ತಳಕಲ್ಲ)

೨) ಮೃತ್ಯುಂಜಯ ಖಾದ್ರಿ (ಮಂಗಳೂರು)

೩) ಬಾಬ ಹಸರಫ್ ಅಲಿ (ಯಲಬುರ್ಗಾ)

೪) ಹಜರತ್ ಹುಸೇನಿ ಆಲಮ್ ದರ್ಗಾ (ಕುದ್ರಿಮೋತಿ)

೫) ಯಮನೂರಸ್ವಾಮಿ (ಮುರಡಿ)

**ಗಂಗಾವತಿ ತಾಲ್ಲೂಕು :**

೧) ಸೈಯದ್ ಮುಸ್ತಾಪ್ ಖಾದ್ರಿ (ಕಾರಟಗಿ)

೨) ಮೈಬುಸುಬಾನಿ ದರ್ಗಾ (ಚಿಕ್ಕ ಜಂತಕಲ್ಲ)

**ಕುಷ್ಟಗಿ ತಾಲ್ಲೂಕು :**

೧) ಸೈಯದ್ ಷಾಹ ಅಬ್ದುಲ್ ಹಸನ್ ಖಾದ್ರಿ (ಹನುಮಸಾಗರ)

೨) ಸೈಯದ್ ಷಾಹ ಹಮಿನುದ್ದೀನ್ ಖಾದ್ರಿ (ತಾವರೆಗೇರ)

**ಸಿರಸಪ್ಪಯ್ಯ ಮಠ:**

ನಮ್ಮ ನಾಡಿನ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಅನುಭಾವಿಗಳಲ್ಲಿ ಸೂಫಿಗಳು ಪ್ರಮುಖರು. ಅಂತಹ ಸೂಫಿಸಂತರಲ್ಲಿ ಒಬ್ಬರಾದ ಸಿರಸಪ್ಪಯ್ಯ ಸ್ವಾಮಿಗಳು ತಮ್ಮ ಭಾವೈಕ್ಯತೆಯನ್ನು ಮೆರೆಯುವದರ ಮೂಲಕ ಕೊಪ್ಪಳವನ್ನು ಸೌಹಾರ್ದತಾ ತಾಣವನ್ನಾಗಿ ಮಾಡಿದ್ದಾರೆ. ಹಿಂದು ಸಂಸ್ಕೃತಿಗೆ ಸೇರಿದ ಈ ಮಠವು ಕೊಪ್ಪಳದಿಂದ ಕಾತರಕಿಗೆ ಹೊಗುವ ರಸ್ತೆಯ ಬಲಭಾಗದಲ್ಲಿದೆ. ಮಠದ ಪ್ರವೇಶಕ್ಕೆ ಮುಖ್ಯದ್ವಾರವಿದೆ. ಅದು ಚಿಕ್ಕದಾಗಿದೆ. ಆ ದ್ವಾರದ ಮೂಲಕ ಒಳಗೆ ಹೋದಾಗ ಅಲ್ಲಿ ಎರಡು ಕಟ್ಟೆಗಳಿವೆ. ಇವುಗಳಿಗೆ ಆಡು ಭಾಷೆಯಲ್ಲಿ ಮದರ್ ಅಥವಾ ಮಜಾರ ಎಂದು ಕರೆಯುತ್ತಾರೆ. ಈ ಮಜಾರದಲ್ಲಿ ದೇವಸ್ತಾನದ ಕುರಿತಂತೆ ಚರ್ಚೆ ನಡೆಯುತ್ತಿತ್ತೆಂದು ತಿಳಿದು ಬರುತ್ತದೆ.

ಗುಡಿಯ ಮುಂಭಾಗದಲ್ಲಿ ಎಡಕ್ಕೆ ಗ್ವಾನಾ ಗಿಡದ ಕಟ್ಟೆ ಇದ್ದರೆ, ಬಲಗಡೆ ಬೇವಿನ ಮರದ ಕಟ್ಟೆ ಇದೆ. ಈ ಕಟ್ಟೆಯ ಮತ್ತು ಮಜಾರದ ನಡುವೆ ಒಂದು ಹಲಾಯಿ ಕುಣಿ ಇದೆ. ಮೊಹರಂ ಸಂದಂರ್ಭದಲ್ಲಿ ಎಲ್ಲರೂ ಜಾತಿಭೇದವನ್ನು ಮರೆತು ಸೌಹಾರ್ದತೆಯನ್ನು ಮೆರೆಯುತ್ತಾರೆ. ಅಲ್ಲದೇ ಈ ಹಲಾಯಿ ಕುಣಿಯಲ್ಲಿ ಅಗ್ನಿಕುಂಡ ಹಾರುವದರ ಜೊತೆಗೆ ಹಲಾಯಿ ಕುಣಿದು ಮೊಹರಂ ಹಬ್ಬದ ಆಚರಣೆಯಲ್ಲಿ ತೊಡಗುತ್ತಾರೆ. ಈ ಮಠದ ವಿಶೇಷವೆಂದರೆ ಕೊಪ್ಪಳ ನಗರದಲ್ಲಿರುವ ಎಲ್ಲಾ ದರ್ಗಾದ ಮೊಹರಂ ದೇವರುಗಳು ಈ ಮಠಕ್ಕೆ ಬರುತ್ತವೆ. ಹಾಗೆಯೇ ತಮ್ಮ ಧರ್ಮತ್ವವನ್ನು ಮೆರೆಯುವುದು ಇಂದಿಗೂ ಕಂಡು ಬರುತ್ತದೆ. ಕತ್ತಲ್ ರಾತ್ರಿಯ ದಿನ ಕವ್ವಾಲಿ ಹಾಡುತ್ತಾರೆ. ಇಂತಹ ಸಂದರ್ಭದಲ್ಲಿ ಅಜ್ಜನ ಕಾರಣಿಕ ನಡೆಯುತ್ತದೆ. ಆ ಅಜ್ಜನು ಆಗ ಬೇವಿನ ಮರದ ಕಟ್ಟೆಯ ಮೇಲೆ ಮಲಗಿರುತ್ತಾನೆ. ಅಜ್ಜನ ಹೇಳಿಕೆ ಆಗುವವರೆಗೂ ಜನರು ಕುಳಿತಿರುತ್ತಾರೆ. ಅಜ್ಜನಿಗೆ ದೇವರು ಪ್ರತ್ಯಕ್ಷವಾಗಿ ಒಗಟಿನ ರೂಪದ ಕಾರಣಿಕವನ್ನು ನೀಡುತ್ತಾನೆ. ಅಲ್ಲಿ ನೆರೆದಿದ್ದ ಜನಕ್ಕೆ ಅಜ್ಜ ಹೇಳುವ ಒಗಟನ್ನು ಬಿಡಿಸಿ ಹೇಳುತ್ತಾರೆ. ಈ ಒಗಟಿನಲ್ಲಿ ಮಳೆ – ಬೆಳೆ ಜನರ ಹಿತಾಸಕ್ತಿ ಎಲ್ಲವು ಒಳಗೊಂಡಿರುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಇದು .ಜನಪದರು ದೈವದ ಹೇಳಿ ಕೆಯಲ್ಲಿ ಇಟ್ಟಿರುವ ನಂಬಿಕೆಯನ್ನು ಎತ್ತಿ ತೋರಿಸುತ್ತದೆ.

ಶಿರಸಪ್ಪಯ್ಯನ ಮಠದ ಮುಖ್ಯ ಬಾಗಿಲ ಹತ್ತಿರ ಬಂದಾಗ ಒಳಗಡೆ ಹೋಗುತ್ತಿದ್ದಂತೆಯೇ, ಎರಡು ಕಂಬಗಳು ಕಾಣಿಸುತ್ತವೆ. ಇವು ಮುಸ್ಲಿಂ ಧರ್ಮದ ಕಮಾನುಗಳೊಂದಿಗೆ ಹಿಂದೂ ಧರ್ಮದ ಗೋಪುರ ಮತ್ತು ಕಳಸವನ್ನು ಹೊಂದಿವೆ. ಎರಡು ಧರ್ಮಗಳ ವಿಭಿನ್ನ ಆಚರಣೆಗಳು ಏಕಕಾಲಕ್ಕೆ ಒಂದೇ ಕಡೆ ಮೇಳೈಸಿರುವುದು ಇಲ್ಲಿ ಕಾಣಬಹುದಾಗಿದೆ. ಗುಡಿಯ ಒಳಗಡೆ ಸಿರಸಪ್ಪಯ್ಯನ ಗದ್ದುಗೆ ಇದ್ದರೆ, ಎಡಭಾಗದಲ್ಲಿ ವೀರಭದ್ರೇಶ್ವರ ದೇವಸ್ಥಾನವಿದೆ. ಗುಡಿಯ ಸುತ್ತ ಬಲಕ್ಕೆ ಹಾಗೂ ಎಡಕ್ಕೆ ಎರಡು

ಗದ್ದುಗೆಗಳಿದ್ದು, ಅದೇ ವಂಶಜರ ಸಮಾಧಿ ಸ್ಥಳಗಳಾಗಿ ಆರಾಧಿಸಲ್ಪಡುತ್ತಿವೆ. ಈ ಮಠದ ಬಲಕ್ಕೆ ಒಂದು ಭಾವಿ ಇದೆ.

ಸುಮಾರು ೮ ನೂರು ವರ್ಷಗಳ ಚರಿತ್ರೆಯುಳ್ಳ ಈ ದರ್ಗಾವು ರಾಜ್ಯದ ಹಲವಾರು ಜಾತಿಯ ಜನಮನವನ್ನು ತನ್ನತ್ತ ಸೆಳೆದು ಜನಪದರನ್ನು ಭಾವೈಕ್ಯದಿಂದಿರುವಂತೆ ಮಾಡಿದೆ. ಈ ಮಠಕ್ಕೆ ಸೋಮವಾರ, ಗುರುವಾರ ಮತ್ತು ವಿಶೇಷ ದಿನಗಳಲ್ಲಿ ಜನರು ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಸಿರಸಪ್ಪಯ್ಯ ಅನುಭಾವಿಯ ಕುರಿತು ಅವಲೋಕನ ಮಾಡುವಂಥ ಸಂದರ್ಭದಲ್ಲಿ ಇವರ ಮೂಲ ಕ್ರಿ.ಶ. ೧೨ ನೇ ಶತಮಾನದಿಂದಲೇ ಪ್ರಾರಂಭವಾಗುತ್ತದೆ. ಇವರ ಮೂಲ ಬೀದರಕೋಟೆ ಸಂಸ್ಥಾನದ ವಿಶ್ವಕರ್ಮ ಜನಾಂಗದ ಶೇಷಗಿರಿರಾಯರು ಎಂಬುವರಿಂದ ಪ್ರಾರಂಭವಾಗಿರುವ ಪ್ರತೀತಿ ಇದೆ. ಇವರ ಮಕ್ಕಳು ಕ್ಯಾದಗೆಯಪ್ಪಯ್ಯ ಮತ್ತು ಅಯ್ಯಪ್ಪಯ್ಯ ಎಂಬುವವರು. ಕ್ಯಾದಗೆಯಪ್ಪಯ್ಯ ಸ್ವಾಮಿಗಳಿಗೆ ಶೇಷಪ್ಪಯ್ಯ, ಅಯ್ಯಪ್ಪಯ್ಯನವರಿಗೆ ಹಾವಪ್ಪಯ್ಯ ಎಂಬ ಪುತ್ರರು ಜನಿಸುತ್ತಾರೆ. ಹಾವಪ್ಪಯ್ಯನವರು ಸುರಪುರ ತಾಲೂಕಿನ ದೇವರಗೋನಾಳ ಗ್ರಾಮಕ್ಕೆ ಬಂದು ನೆಲೆಸುತ್ತಾರೆ. ಹಾವಪ್ಪನವರ ಮಗನಾದ ಪವಾಡ ಪುರುಷರಾಗಿರುವ ಮೌನೇಶ್ವರರು ಕೋಮು ಸೌಹಾರ್ದತೆಯ ತಾಣವನ್ನಾಗಿ ತಿಂಥಿಣಿ ಕ್ಷೇತ್ರವನ್ನು ಆಯ್ದುಕೊಳ್ಳುತ್ತಾರೆ. ಇವರ ವಂಶಾವಳಿ ಪ್ರಕಾರ ನಾಲ್ಕನೇ ತಲೆಮಾರಿಗೆ ಸಂಬಂಧ ಪಡುತ್ತಾರೆ. ಕ್ಯಾದಿಗೆಪ್ಪಯ್ಯ ಸ್ವಾಮಿಯ ಮಗನಾದ ಶೇಷಪ್ಪಯ್ಯ ಸ್ವಾಮಿ ಅವರಿಂದ ವಂಶ ಬೆಳೆದು ಅವರಿಗೆ ವಿರುಪಣ್ಣ ಸ್ವಾಮಿ ಎಂಬ ಮಗ ಜನಿಸುತ್ತಾನೆ. ವಿರುಪಣ್ಣ ಸ್ವಾಮಿಗೆ ನಾಗಪ್ಪಯ್ಯ ಸ್ವಾಮಿ, ನಾಗಪ್ಪಯ್ಯ ಸ್ವಾಮಿಗೆ ಧರಣಪ್ಪಯ್ಯ ಸ್ವಾಮಿ ಹಾಗೂ ಶ್ರೀ ಶೈಲಸ್ವಾಮಿ ಎಂಬ ಇಬ್ಬರು ಮಕ್ಕಳು. ಈ ಶ್ರೀ ಶೈಲಸ್ವಾಮಿಯೇ ಪ್ರಸಿದ್ಧ ಕೊಪ್ಪಳ ಸಿರಸಪ್ಪಯ್ಯನ ಮಠದ ಸ್ಥಾಪಕ. ಇವರು ಕೊಪ್ಪಳಕ್ಕೆ ಬಂದುದರ ಬಗೆಗೆ ಪ್ರತೀತಿ ಹೀಗಿದೆ. ಶ್ರೀ ಮೋನಪ್ಪಯ್ಯನವರ ಶ್ರೀಶೈಲ ಸ್ವಾಮಿಗಳು ವಿವಿಧ ಪುಣ್ಯ ಕ್ಷೇತ್ರಗಳಲ್ಲಿ ಸಂಚರಿಸುತ್ತ ಲಿಂಗಸಗೂರು ತಾಲೂಕಿನ ಅಕ್ಕಿಹಾಳ ಗ್ರಾಮದಿಂದ ಕೊಪ್ಪಳಕ್ಕೆ ಸಂಚಾರಗೈಯುತ್ತಾರೆ. ಅವರು ಗುಡ್ಡಗಾಡುಗಳಲ್ಲಿ ಸಂಚರಿಸುತ್ತಿರುವಾಗ ಒಬ್ಬ ಹೂಗಾರನ ಹೊಲಕ್ಕೆ ನೀರಿನ ಸೌಕರ್ಯ ಇರಲಿಲ್ಲ. ಆಗ ಹೂಗಾರನು ಶ್ರೀಗಳವರಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ಆಗ ಸ್ವಾಮಿಗಳು ನಿನ್ನ ಹೊಲಕ್ಕೆ ನೀರು ಬರುವಂತೆ ಮಾಡುತ್ತೇನೆ. ನನಗೆ ಕಂಬಳಿ ಹಾಸಿದಷ್ಟು ಭೂಮಿಯನ್ನು ಬಿಡಬೇಕೆಂದು ಹೇಳುತ್ತಾರೆ. ಆ ಭೂಮಿಯಲ್ಲಿ ಮಠವನ್ನು ಸ್ಥಾಪಿಸಿದ ಶ್ರೀಶೈಲ ಸ್ವಾಮಿಗಳು ಕೊಪ್ಪಳವನ್ನು ಕೋಮುಸೌಹಾರ್ದತೆಯ ತಾಣವನ್ನಾಗಿ ಆಯ್ದುಕೊಳ್ಳುತ್ತಾರೆ.

ಶ್ರೀಶೈಲ ಎಂಬುದು ಸಂಸ್ಕೃತ ಶಬ್ದ ಅದೇ ಕನ್ನಡದಲ್ಲಿ 'ಸಿರಸ' ಅಥವಾ 'ಸಿರಸಪ್ಪ' ಎಂಬುದಾಗಿದೆ. ಉತ್ತರ ಕರ್ನಾಟಕದಲ್ಲಿ ನಾಮಪದದ ಕೊನೆಗೆ ಅಪ್ಪಾ ಅವ್ವಾ ಎಂಬ ಶಬ್ದಗಳಿಂದ ಕರೆಯುವ ರೂಢಿಯಿದೆ. ಹೀಗಾಗಿ ಶ್ರೀಶೈಲ ಸ್ವಾಮಿಗಳು ಕನ್ನಡದ ಸಿರಸಪ್ಪಯ್ಯ ಸ್ವಾಮಿಗಳಾಗಿ ಕೊಪ್ಪಳದಲ್ಲಿ ಪವಾಡ ಮೆರೆದಿದ್ದಾರೆ. ಅವರ ವಂಶವೃಕ್ಷದ ಸಮಗ್ರ ಚಿತ್ರಣ ಇಂತಿದೆ.

ವಂಶ ಮತ್ತು ಮೂಲಸ್ಥಾನ :



ಶೇಷಗಿರಿರಾಯರು
ಕ್ಯಾದಿಗಪ್ಪಯ್ಯಸ್ವಾಮಿ
ಶೇಷಪ್ಪಯ್ಯಸ್ವಾಮಿ
ವಿರುಪಣ್ಣಸ್ವಾಮಿ
ನಾಗಪ್ಪಯ್ಯಸ್ವಾಮಿ
ಅಯ್ಯಪ್ಪಸ್ವಾಮಿ
ಹಾವಪ್ಪಯ್ಯಸ್ವಾಮಿ
ಮೌನೇಶ್ವರಸ್ವಾಮಿ (ತಿಂಥಿಣಿ ಮಠ)
ಧರಣಪ್ಪಯ್ಯಸ್ವಾಮಿ
ಶ್ರೀಶೈಲಸ್ವಾಮಿ (ಕೊಪ್ಪಳ ಮಠ)
ನಾಗಪ್ಪಯ್ಯಸ್ವಾಮಿ
ಕ್ಯಾದಿಗಪ್ಪಯ್ಯಸ್ವಾಮಿ (ಲೆಕ್ಕಿಹಾಳ ಮಠ)
ಹೊನ್ನಿನ ಕ್ಯಾದಿಗಪ್ಪಯ್ಯಸ್ವಾಮಿ
ಶೇಷಪ್ಪಯ್ಯ
ವಿರುಪಣ್ಣಯ್ಯ
ಹಂಪಯ್ಯಸ್ವಾಮಿ
ರಣಪ್ಪಯ್ಯ
ನಾಗಪ್ಪಯ್ಯ
ಶೇಷಪ್ಪಯ್ಯ
ಕ್ಯಾದಿಗಪ್ಪ
ದೊಡ್ಡಕ್ಯಾದಿಗಪ್ಪ
ಸಣ್ಣಕ್ಯಾದಿಗಪ್ಪಯ್ಯ
ವಿರುಪಯ್ಯ
ಅಯ್ಯಪ್ಪಯ್ಯ
ಶಿರಸಪ್ಪಯ್ಯ
ಶೇಷಪ್ಪಯ್ಯ
ಕ್ಯಾದಿಗೆಪ್ಪಯ್ಯ
ಅಯ್ಯಪ್ಪಯ್ಯ
ನಾಗಪ್ಪಯ್ಯ
ದೊಡ್ಡಹಂಪಯ್ಯ
ಶಿರಸಪ್ಪಯ್ಯ
ಹಂಪಯ್ಯ
ಸಣ್ಣಹಂಪಯ್ಯ
ಧರಣಪ್ಪಯ್ಯ
ಶೇಷಪ್ಪಯ್ಯ
ದೊಡ್ಡಕ್ಯಾದಿಗಪ್ಪಯ್ಯ
ಅಯ್ಯಪ್ಪ
ಸಣ್ಣಕ್ಯಾದಿಗೆಪ್ಪ
ನಾಗಪ್ಪಯ್ಯ
ಶಿರಸಪ್ಪಯ್ಯ
ಪಂಪಯ್ಯ
ಅಯ್ಯಪ್ಪ
ಹಂಪಯ್ಯ
ಕ್ಯಾದಿಗೆಪ್ಪ
ನಾಗಪ್ಪಯ್ಯ
ಶಿರಸಪ್ಪಯ್ಯ (ಕೊಪ್ಪಳ ಮಠ)
ಸಣ್ಣಶಿರಸಪ್ಪ
ಕ್ಯಾದಿಗೆಪ್ಪ
ಪಂಪಯ್ಯ
ಹಂಪಯ್ಯ
ನಾಗಪ್ಪಯ್ಯ
ಹಂಪಯ್ಯ
ಮೌನೇಶ್ವರ
ಅಯ್ಯಪ್ಪಯ್ಯಸ್ವಾಮಿ (ಅಳ್ಳಳ್ಳಿ ಮಠ)
ಶೇಷಪ್ಪಯ್ಯ
ಧರಣೇಂದ್ರ
ಕ್ಯಾದಿಗೇಂದ್ರ
ಅಯ್ಯೇಂದ್ರ
ಅಯ್ಯಪ್ಪ
ಶ್ರೀಶೈಲಸ್ವಾಮಿ
ಕ್ಯಾದಿಗೆಪ್ಪಯ್ಯಸ್ವಾಮಿ
ನಾಗಪ್ಪಯ್ಯಸ್ವಾಮಿ
ಹಂಪಯ್ಯಸ್ವಾಮಿ
ಅಯಪ್ಪಯ್ಯಸ್ವಾಮಿ

**ಶ್ರೀ ಶೈಲಸ್ವಾಮಿಗಳು ಸಿರಸಪ್ಪಯ್ಯ ಆದದ್ದು :**

ಕೊಪ್ಪಳ ನಗರದ ಸಿರಸಪ್ಪಯ್ಯನ ಮಠದ ಒಳಗಡೆ ಮೂರು ದೇವರುಗಳಿದ್ದವು. ಯಾವುದೋ ಕಾರಣಕ್ಕೆ ಒಂದು ದೇವರು ಹಿರೇಮಸೂತಿ ದರ್ಗಾಕ್ಕೆ ಹೋಯಿತಂತೆ. ಈ ದೇವರಿಗೆ ದರ್ಗಾದಿಂದ ವರ್ಷಕೊಮ್ಮೆ ಬರುವ ಮೊಹರಂ ಹಬ್ಬದ ಕತ್ತಲ್ ರಾತ್ರಿಯ ದಿನ ಶರಬತ್ ಒಯ್ಯುವ ಸಂಪ್ರದಾಯವಿತ್ತು. ಈ ಶರಬತ್ತನ್ನು ಒಯ್ಯುವ ಸಂದರ್ಭದಲ್ಲಿ ಶ್ರೀಶೈಲ ಸ್ವಾಮಿಗಳು ಬಲಗೈಯಲ್ಲಿ ಹರಿತವಾದ ಕತ್ತಿ, ಎಡಗೈಯಲಿ ಶರಬತ್ ಹಿಡಿದುಕೊಂಡು ಹೋಗುವಾಗ ಈ ಝುಳಪಿಸುವ ಕತ್ತಿಯಿಂದ ಗ್ರಾಮದ ಕಾಳಮ್ಮನ ಮಗುವಿನ ರುಂಡ – ಮುಂಡ ಬೇರೆ ಬೇರೆಯಾಯಿತು. ಈ ಪರಿಸ್ಥಿತಿಯನ್ನು ಕಂಡ ಕಾಳಮ್ಮ ಈ ಸ್ವಾಮಿಗಳಿಗೆ ಶಪಿಸುತ್ತಾಳೆ. ತಕ್ಷಣ ಸ್ವಾಮಿಗಳು ಬೇರೆಯಾದ ರುಂಡ–ಮುಂಡವನ್ನು ಜೋಡಿಸಲು ಹೇಳಿ ಆ ಮಗುವಿಗೆ ಮೌನೇಶ್ವರರ ಹಸಿರು ಶಾಲನ್ನು ಹೊದಿಸಿ ಮಂತ್ರ ಪಠಿಸಿದರು. ಆಗ ಆ ಮಗು ಬದುಕಿತು. ಇದನ್ನು ಕಂಡ ಜನರು ರುಂಡ–ಮುಂಡವನ್ನು ಒಂದುಗೂಡಿಸಿ ಬದುಕಿಸಿದ್ದಕ್ಕಾಗಿ, ಶ್ರೀ ಶೈಲಸ್ವಾಮಿಗಳನ್ನು ಜನರು ಸಿರಸಪ್ಪಯ್ಯ ಸ್ವಾಮಿ ಎಂದು ಕರೆದರಂತೆ. ಹೀಗೆ ಸಿರಸಪ್ಪಯ್ಯ ಸ್ವಾಮಿಗಳು ತಮ್ಮ ಜೀವಂತ ಸಂದರ್ಭದಲ್ಲಿ ಅನೇಕ ರೀತಿಯ ಪವಾಡಗಳನ್ನು ಮಾಡಿ ಕೊನೆಗೆ ಜೀವಂತ ಸಮಾಧಿಯಾದರು. ಅಂದಿನಿಂದ ಇವರು ನೆಲೆಸಿದ್ದ ಮಠಕ್ಕೆ ಸಿರಸಪ್ಪಯ್ಯನ ಮಠ/ದರ್ಗಾವೆಂದು ಕರೆಯುತ್ತಾರೆ.

"ಇಲ್ಲಿ ಪ್ರತೀ ವರ್ಷದ ಮೊಹರಂ ಹಬ್ಬದಲ್ಲಿ ಕಾರಣಿಕ ನಡೆಯುತ್ತದೆ. "ಕಾರಣಿಕ ವೆಂದರೆ ಮಳೆ, ಬೆಳೆ, ರಾಜಕೀಯ ವ್ಯವಸ್ಥೆ ಮುಂತಾದ ಪ್ರಮುಖ ಘಟನೆಗಳನ್ನು ಕುರಿತಾಗಿರುವ ಒಂದು ಸಾಂಕೇತಿಕ ಪೂಜೆ. ಕಾರಣಿಕ ಹೇಳುವ ಸ್ವಾಮಿಗಳ ಸ್ವಪ್ನದಲ್ಲಿ ಸಿರಸಪ್ಪಯ್ಯಸ್ವಾಮಿ ಬಂದು ಹೇಳಿಕೆಯನ್ನು ನೀಡುತ್ತಾರೆಂಬ ನಂಬಿಕೆ ಈ ಭಾಗದ ಜನಪದರಲ್ಲಿದೆ. ಈ ಸಂಪ್ರದಾಯ ಇಲ್ಲಿ ಇಂದಿಗೂ ನಡೆದುಕೊಂಡು ಬಂದಿದೆ. ಇಂತಹ ಸಂದರ್ಭದಲ್ಲಿ ಮಧ್ಯರಾತ್ರಿ ೧೨ ಗಂಟೆವರೆಗೂ ಕಂಬಳಿ ಹೊದ್ದು ಮಲಗಿದ ಸ್ವಾಮಿಗಳು ಕಾರಣಿಕವನ್ನು ಹೇಳುತ್ತಾರೆ"[೨]

**ಶಾಖಾಮಠಗಳು :**

ಕೊಪ್ಪಳ ಸಿರಸಪ್ಪಯ್ಯನ ಮಠದ ಎರಡು ಮೂಲ ಶಾಖೆಗಳು ಇವೆ. ಒಂದು ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಅಳ್ಳೊಳ್ಳಿ ಕ್ಷೇತ್ರ. ಇದು ಗದ್ದುಗೆ ಮಠ ಎಂದು ಪ್ರಸಿದ್ದಿ ಪಡೆದಿದೆ. ಇಲ್ಲಿ ೧೧ನೇ ತಲೆಮಾರಿನ ೨೫ನೇ ಯತಿಗಳಾದ ಶ್ರೀ ಅಯ್ಯಪ್ಪಸ್ವಾಮಿಗಳ ಜೀವಂತ ಸಮಾಧಿ ಇದೆ. ಶ್ರೀ ಅಯ್ಯಪ್ಪಸ್ವಾಮಿಗಳು ಮೂಲ ಮಠ ಕೊಪ್ಪಳದಿಂದ ಶ್ರೀ ಸಿರಸಪ್ಪಯ್ಯ ಸ್ವಾಮಿಗಳ ಅಪ್ಪಣೆಯೊಂದಿಗೆ ಲೆಕ್ಕಿಹಾಳದಿಂದ ತಿಂಥಿಣಿ ಕ್ಷೇತ್ರಕ್ಕೆ ಬಂದು ಅಲ್ಲಿಂದ ಅಳ್ಳೋಳ್ಳಿಗೆ ಬರುತ್ತಾರೆ. ಅಲ್ಲಿ ಶ್ರೀಗಳು ಅವರು ಅನೇಕ ಪವಾಡಗಳನ್ನು ಮಾಡಿದ್ದಾರೆ. ಇಲ್ಲಿ ಅವರಾತ್ರಿಯ ಅಮವಾಸೆಯಿಂದ ೫ ದಿನಕ್ಕೆ ಜಾತ್ರೆ ಪ್ರಾರಂಭವಾಗುತ್ತದೆ. ಈ ಜಾತ್ರೆಯು ಶಿವರಾತ್ರಿ ಅಮವಾಸೆಯವರೆಗೂ ನಡೆಯುತ್ತದೆ. ಬಹಳ ಪ್ರಸಿದ್ದಿ

ಪಡೆದ ಜಾತ್ರೆಯು ಇದಾಗಿದೆ. ಈ ಮಠದ ನಿರ್ವಹಣೆಯನ್ನು ಇದೆ ವಂಶಜರಾದ ಶ್ರೀ ಹಂಪಯ್ಯಸ್ವಾಮಿಗಳು ಹಾಗೂ ನಾಗಪ್ಪಯ್ಯಸ್ವಾಮಿಗಳೂ ನಡೆಸಿಕೊಂಡು ಹೋಗುತ್ತಾರೆ. ಈ ಅಳ್ಳೊಳ್ಳಿ ಕ್ಷೇತ್ರದಿಂದ ಶ್ರೀ ದೊಡ್ಡ ಹಂಪಯ್ಯಸ್ವಾಮಿಗಳೆಂಬುವರು ಸಂಚಾರಗೈಯುತ್ತಾ ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ ಬಂದು ಐಕ್ಯಗೊಂಡಿದ್ದಾರೆ. ಇವರ ಗದ್ದುಗೆಯು ಬಳ್ಳಾರಿ ರಸ್ತೆಯಲ್ಲಿ ಗೂಳಿ ಕ್ಯಾದಿಗಪ್ಪನವರ ಹೊಲದಲ್ಲಿದೆ. ಆಗ ಅವರಿಗೆ ಸುಮಾರು ಎರಡು ಎಕರೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದಾರೆ. ಈಗ ಇಲ್ಲಿ ಕಾಂಪ್ಲೆಕ್ಸ ಬಂಗಲೆಗಳು ತುಂಬಿ ತುಳುಕುತ್ತಿವೆ. ಇಂದಿಗೂ ಈ ಗದ್ದುಗೆಗೆ ನಡೆದುಕೊಳ್ಳುವವರು ಬಹಳ ಭಕ್ತರಿದ್ದಾರೆ.

ಇನ್ನೊಂದು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲೂಕಿನ ಲೆಕ್ಕಿಹಾಳ ಗ್ರಾಮದಲ್ಲಿದೆ. ಇದು ಶ್ರೀ ಮೌನೇಶ್ವರ ಮಠ ಎಂದು ಪ್ರಸಿದ್ದಿ ಪಡೆದಿದೆ. ಇಲ್ಲಿ ಶ್ರೀ ಮೌನೇಶ್ವರರು ಅನುಷ್ಠಾನಗೊಳಿಸಿದ ಗವಿ ಇದೆ. ಶ್ರೀ ಕಳ್ಳಳ್ಳಿ ಮಠದ ಹರಕೆ ಹೊತ್ತ ಕ್ಯಾದಿಗಯ್ಯ ಸ್ವಾಮಿಗಳ ಗವಿ ಕೊಪ್ಪಳದಿಂದ ಬಂದ ಶ್ರೀ ಕ್ಯಾದಿಗೆಯ್ಯ ಸ್ವಾಮಿಗಳ ಗದ್ದುಗೆ ಕೂಡ ಇದೆ. ಇವರು ಅನೇಕ ಪವಾಡಗಳನ್ನು ಕೂಡ ಮಾಡಿದ್ದಾರೆ. ಇವರೇ ಹೈದ್ರಾಬಾದ ನಿಜಾಮರಿಂದ ಇನಾಮು ಪಡೆದವರಾಗಿದ್ದಾರೆ. ಇವರ ನಾಲ್ಕನೆ ಯ ಪುತ್ರರಾದ ಶ್ರೀ ಹಂಪಯ್ಯ ಸ್ವಾಮಿಗಳ ಗದ್ದುಗೆ ಕೂಡ ಇಲ್ಲಿ ಇದೆ. ಈ ಮಠದ ನಿರ್ವಹಣೆಯನ್ನು ಶ್ರೀ ಹಂಪಯ್ಯ ಸ್ವಾಮಿಗಳ ಹಿರಿಯ ಪುತ್ರರಾದ ಶ್ರೀ ಸಣ್ಣ ಶಿರಸಪ್ಪಯ್ಯಸ್ವಾಮಿಗಳು ನಡೆಸುತ್ತಿದ್ದಾರೆ. ಇಲ್ಲಿ ಶ್ರೀ ಮೌನೇಶ್ವರರ ಜಾತ್ರೆಯು ದವನದ (ಹಂಪಿ ಹುಣ್ಣಿಮೆಗೆ) ಹುಣ್ಣಿಮೆಗೆ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಸುತ್ತಮುತ್ತಲಿನ ಹಳ್ಳಿಯ ಭಕ್ತಾದಿಗಳು ಈ ಜಾತ್ರೆಗೆ ಬಂದು ಹೋಗುತ್ತಾರೆ. ಶ್ರೀ ಮೌನೇಶ್ವರರು ಲಿಂಗಸಗೂರು ತಾಲೂಕಿನ ಅಡವಿಭಾವಿಯ ಗುಡ್ಡದಲ್ಲಿ ತಪಸ್ಸು ಮಾಡುತ್ತಾರೆ.

**ಪವಾಡ ಮತ್ತು ನಂಬಿಕೆಗಳು:**

೧. "ಸಣ್ಣ ಕ್ಯಾದಿಗೆಪ್ಪ ಅವರು ಶಿರಸಪ್ಪಯ್ಯನ ಮೂರು ಮಕ್ಕಳಲ್ಲಿ ಒಬ್ಬರು. ಇವರು ಆಂಧ್ರದ ಹೆಬ್ಬಟ ಎಂಬ ಸ್ಥಳಕ್ಕೆ ಭೇಟಿಕೊಟ್ಟಾಗ ಅಲ್ಲಿರುವಂತಹ ಜನ ಇವರನ್ನು ನೋಡಿ ಮೊದಲು ನಕ್ಕರು. ಆಗ ಈ ಸ್ವಾಮಿಗಳು ಅಲ್ಲೇ ಹರಿಯುತ್ತಿದ್ದ ಹಳ್ಳದ ನೀರನ್ನು ಹೊತ್ತುಕೊಂಡು ಬರುವ ಜನರನ್ನು ಕುಡಿಯಲು ನೀರು ಕೇಳಿದರಂತೆ, ಆಗ ಆ ಜನರು ನೀರು ಉಪ್ಪು ಇವೆ ಎಂದು ಹೇಳಿದ ತಕ್ಷಣ ಈ ಸ್ವಾಮಿಗಳು ಒಂದು ಫರ್ಲಾಂಗು ಬಿಟ್ಟು ತಮ್ಮ ಪವಾಡವನ್ನು ತೋರಿಸಿ ಸಿಹಿನೀರು ಆಗಲಿ ಎಂದರಂತೆ ಅಂದಿನಿಂದ ಜನರು ಇವರಿಗೆ ಭಕ್ತಿಯಿಂದ ಪೂಜೆ ಸಲ್ಲಿಸುತ್ತಿದ್ದಾರೆ."[೩]

೨. ಅದೇ ರಾಜ್ಯದ ಎರಕೊಂಡೆ ಎನ್ನುವ ಗ್ರಾಮದಲ್ಲಿ ಸ್ವಾಮಿಗಳು ಕುದುರೆ ಮೇಲೆ ಹೋಗುತ್ತಿರುವಾಗ ಜನರು ಸ್ವಾಮಿಗಳ ಹತ್ತಿರ ಪ್ರಸಾದ ಕೇಳಿದರಂತೆ. ಸಣ್ಣ

ಜೋಳಿಗೆಯಲ್ಲಿರುವ ಉತ್ತತ್ತಿ ಕೊಡುವುದನ್ನು ಕಂಡು ಮೇಲ್ವರ್ಗದ ಲಿಂಗಾಯಿತರು "ಎಷ್ಟು ಜನಕ್ಕೆ ಉತ್ತತ್ತಿ ಕೊಡುತ್ತಾನೋ ನೋಡೋಣವೆಂದು" ಜನರೆಲ್ಲರನ್ನು ಕರೆದುಕೊಂಡು ಹೋಗುತ್ತಾರೆ. ಅಲ್ಲಿ ನೆರೆದಿರುವಂತಹ ಎಲ್ಲರಿಗೂ ಉತ್ತತ್ತಿ ಕೊಟ್ಟರೂ ಜೋಳಿಗೆಯಲ್ಲಿನ ಉತ್ತತ್ತಿಗಳು ಇನ್ನೂ ಉಳಿದುಕೊಂಡಿದ್ದವಂತೆ. ಸ್ವಾಮಿಗಳ ಈ ಪವಾಡವನ್ನು ಗಮನಿಸಿದ ಲಿಂಗಾಯತ ಸಮುದಾಯವು ಈ ಸ್ವಾಮಿಯನ್ನು ಪವಾಡ ಪುರುಷನೆಂದು ವಿನಮ್ರವಾಗಿ ನಮಸ್ಕರಿಸಿದರಂತೆ.

೩. ಇದೇ ವಂಶಕ್ಕೆ ಸಂಬಂದಿಸಿದ ಪಂಪಯ್ಯ ಸ್ವಾಮಿಯವರು ಆಂಧ್ರದ ಆಧೋನಿ ಗ್ರಾಮದಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಮಸೀದಿ ಮುಂದೆ ತಿರುಗಾಡುವಾಗ ಅಲ್ಲಿನ ಜನರು ಮಸೀದಿಗೆ ಶಬ್ದವಾಗುತ್ತದೆ ಎಂದು ವಿರೋಧಿಸಿದರು. ತಿರುಗಿ ಬರುವುದರೊಳಗಾಗಿ ಮಸೀದಿ ದಾಟುವವರೆಗೂ ಕಾಲೊಳಗಿರುವ ಗೆಜ್ಜೆ ನಿಶ್ಯಬ್ದವಾಗಿತ್ತಂತೆ. ಇದನ್ನು ಕಂಡು ಜನರು ಆಶ್ಚರ್ಯಚಕಿತರಾದರು."[೪]

ಹೀಗೆ ಹಲವಾರು ಕಥೆ ಮತ್ತು ಪವಾಡಗಳನ್ನು ಹುಟ್ಟು ಹಾಕಿಕೊಂಡು ಬಂದಿರುವ ಈ ದರ್ಗಾದಲ್ಲಿ ಶಿವರಾತ್ರಿಯ ದಿನದಂದು, ರಾತ್ರಿಯಿಂದ ಬೆಳಕು ಹರಿಯುವವರೆಗೂ ಐದು ಸಲ ಪೂಜೆಗೈಯುತ್ತಾರೆ. ಎಲ್ಲಾ ದರ್ಗಾದಂತೆ ಇಲ್ಲಿಯೂ ಎಲ್ಲಾ ಧರ್ಮೀಯರು ಕಲ್ಲುಸಕ್ಕರೆ, ಉತ್ತತ್ತಿ, ಕಾಯಿ, ಕರ್ಪೂರ ಪೂಜೆಗೆ ತರುತ್ತಾರೆ. ತಂತ್ರ, ಮಂತ್ರ, ತಾಯಿತ ಕಟ್ಟುವ ಕೆಲಸ ಹಲವು ವರ್ಷಗಳಿಂದಲೂ ನಡೆದುಕೊಂಡು ಬಂದಿದೆ. ಪ್ರಸ್ತುತ ಅಯ್ಯಪ್ಪಸ್ವಾಮಿಯ ಮಗನಾದ ಶಿರಸಪ್ಪಯ್ಯನವರು ಈ ಮಠದ ಕಾರ್ಯವೈಖರಿಯನ್ನು ನೋಡಿಕೊಂಡು ಹೋಗುತ್ತಾರೆ. ತಮ್ಮ ತಾತನ, ತಮ್ಮ ತಂದೆಯ, ತಮ್ಮ ವಂಶದ ಯಂತ್ರ ಮಂತ್ರ ಕೆಲಸವನ್ನು ಇತ್ತೀಚೆಗೆ ೧೦-೧೫ ವರ್ಷಗಳಿಂದ ಮಾಡುತ್ತಲೇ ಬಂದಿದ್ದಾರೆ. ಇಲ್ಲಿ ಶಿರಸಪ್ಪಯ್ಯನ ವಂಶಸ್ಥರು ಇರುವುದರಿಂದ ಯಾವುದೇ ರೀತಿಯ ಈ ಮಠದ ಕುರಿತು ಅಭಿವೃದ್ಧಿಯ ಸಮಿತಿಗಳು ರಚನೆಯಾಗಿಲ್ಲ. ಮೊದಲಿದ್ದ ಮಠದ ಶಿಲೆ ಇಂಡೋ-ಇಸ್ಲಾಂಗೆ ಸೇರಿದ ಶೈಲಿಯನ್ನು ಬಿಟ್ಟರೆ, ಆಧುನಿಕರಣದ ಸೋಂಕು ತಾಗದೇ ಇರುವುದು ಇಂದಿಗೂ ನಾವು ಗಮನಿಸಬಹುದಾಗಿದೆ. ಸ್ಥಳೀಯ ಶಾಸಕರ ಅನುದಾನದಲ್ಲಿ ಒಂದು ಕಲ್ಯಾಣಮಂಟಪ ಇತ್ತೀಚೆಗೆ ನಿರ್ಮಾಣಗೊಂಡಿದೆ.

ಈ ಮಠವಿರುವ ಎಂಟು ಎಕರೆ ಜಮೀನಿನ ಸುತ್ತ ಕೆರೆ, ಗುಡ್ಡ ಸೇರಿದಂತೆ ಇಪ್ಪತ್ತೈದು ಎಕರೆಯ ಭೂಮಿಯನ್ನು ಒಳಗೊಂಡಿದೆ. ಹೀಗೆ ಇರುವ ಹಿಂದೂ ಮತ್ತು ಮುಸ್ಲಿಂರ ಈ ತಾಣವು ಮೊಹರಂ ಹಬ್ಬದ ನಿಮಿತ್ಯ, ಬೇರೆ ಬೇರೆ ಭಾಗದಿಂದ ಭಕ್ತರನ್ನು ಆಕರ್ಷಿಸುತ್ತದೆ. ಭಕ್ತರಿಂದ ಪಡೆದ ದೇಣಿಗೆಯಿಂದ ಪ್ರಸಾದವನ್ನು ಉಣಬಡಿಸುತ್ತಾರೆ. ಅಷ್ಟೆ ಅಲ್ಲದೇ ಈ ಮಠದಲ್ಲಿ ಮೊಹರಂ ಅನ್ನು ಹೊರತು ಪಡಿಸಿದರೆ ಯಾವುದೇ ರೀತಿಯ ಉರುಸ್ ಜರಗುವುದಿಲ್ಲ. ಹಿರೇಮಸೀದಿ ದರ್ಗಾಕ್ಕೆ ಹೋದ ಒಂದು ದೇವರನ್ನು

ಬಿಟ್ಟರೆ ಉಳಿದೆರಡು ದೇವರುಗಳು ಅಲ್ಲಿಂದ ಇಲ್ಲಿಯವರೆಗೂ ಗುಡಿ ಒಳಗಡೆ ಇವೆ. ನಾವು ಅಲ್ಲಿರುವಂತಹ ಈಗಿನ ಶಿರಸಪ್ಪಯನವರನ್ನು ಭೇಟಿಯಾದಾಗ "ನನಗೆ ಇನ್ನೂ ಅಜ್ಜ ಕನಸಿನಲ್ಲಿಯೇ ಬಂದು ಹೇಳುವವರೆಗೂ ಒಳಗೆ ಇರುವ ಈ ಎರಡೂ ದೇವರನ್ನು ಹೊರಗೆ ಕೂಡಿಸುವುದಿಲ್ಲ."[೫] ಎಂದು ಹೇಳಿದರು.

**ಸಿರಸಪ್ಪಯ್ಯನ ಮಠದ ವೈಶಿಷ್ಟ್ಯಗಳು**

೧. ಸಿರಸಪ್ಪಯ್ಯನ ಮಠವು ಕೋಮುಸೌಹಾರ್ದತೆಯ ತವರಮನೆ ಎಂದರೆ ತಪ್ಪಾಗಲಾರದು. ಏಕೆಂದರೆ ಎಲ್ಲಾ ಕೋಮಿನ ಜನರು ಪ್ರತಿನಿತ್ಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅಲ್ಲದೇ ಸೋಮವಾರ, ಗುರುವಾರ ಮತ್ತು ವಿಶೇಷ ದಿನಗಳಲ್ಲಿ ಮಠಕ್ಕೆ ನಡೆದುಕೊಳ್ಳುತ್ತಾರೆ.

೨. ಈ ಮಠಕ್ಕೆ ನಡೆದುಕೊಂಡರೆ ತಮ್ಮ ಸಮಸ್ಯೆಗಳು ಬಗೆಹರಿಯುತ್ತವೆಂಬ ನಂಬಿಕೆ ಹಿಂದಿನ ಕಾಲದಿಂದಲೂ ಬಂದಿದ್ದು ಗಮನಾರ್ಹವಾದ ವಿಷಯವಾಗಿದೆ.

೩. ಈ ಮಠವು ತಿಂಥಿಣಿ ಮೌನೇಶ್ವರರ ಮಠದಷ್ಟು ಪ್ರಚಾರ ಪಡೆಯದಿದ್ದರೂ, ಸಿರಸಪ್ಪಯ್ಯನ ಪವಾಡಗಳಿಂದ ಜನರ ಮನಸ್ಸಿನ ಮೇಲೆ ಪರಿಣಾಮ ಬೀರಿದೆ. ಇವರ ಪವಾಡಗಳು ಈ ಭಾಗದ ಜನರ ನಾಲಿಗೆಯ ಮೇಲೆ ಪ್ರತಿನಿತ್ಯ ಹರಿದಾಡುತ್ತವೆ.

೪. ಇವರ ಪವಾಡಗಳು ಜನಪದರ ಉಸಿರಾಗಿ ಉಳಿದುಬಂದಿವೆ.

೫. ಮಕ್ಕಳ ಸಂತಾನವಿಲ್ಲದ ದಂಪತಿಗಳು ಈ ಮಠಕ್ಕೆ ಹನ್ನೊಂದು ಅಮವಾಸ್ಯೆ ನಡೆದುಕೊಂಡರೆ ಮಕ್ಕಳ ಸಂತಾನ ಆಗುತ್ತದೆ ಎಂಬ ನಂಬಿಕೆ ಉಳಿದುಕೊಂಡು ಬಂದಿದೆ.

೬. ಯಾವುದೇ ರೋಗ-ರುಜಿನ ಬಂದಾಗ ವೈದ್ಯರ ಹತ್ತಿರ ತೋರಿಸಿದಾಗ ಗುಣಮುಖವಾಗದ ಖಾಯಿಲೆಗಳು ಈ ಮಠಕ್ಕೆ ಮೂರು ವಾರ ನಡೆದುಕೊಂಡರೆ ಗುಣಮುಖವಾಗುತ್ತದೆ.

೭. ಸಿರಸಪ್ಪಯ್ಯನ ವಂಶಜರು ಎಲ್ಲರೂ ಒಂದಲ್ಲ ಒಂದು ಪವಾಡ ಮಾಡಿದ ಇತಿಹಾಸ ಕಂಡುಬಂದಿದೆ.

೮. ಕೌಟುಂಬಿಕ ಸಮಸ್ಯೆ, ಭೂಮಿಯ ಸಮಸ್ಯೆ, ಗಂಡ-ಹೆಂಡರ ನಡುವೆ ಇರುವ ಜಗಳ ಇನ್ನೂ ಮುಂತಾದ ಸಮಸ್ಯೆಗಳು ಬಗೆಹರಿದು ಕೂಡಿ ಬಾಳನ್ನು ನಡೆಸಿದ ಉದಾಹರಣೆಗಳಿವೆ ಎಂದು ಜನರು ಸಂದರ್ಶನ ಸಮಯದಲ್ಲಿ ಹೇಳಿದ್ದಾರೆ.

**ಹಜರತ್ ರಾಜಭಕ್ಷಿ ದರ್ಗಾ :**

ಈ ದರ್ಗಾವು ೫೫೦ ವರ್ಷಗಳ ಕಾಲ ಹಿಂದೆ ಇತ್ತೆಂದು ತಿಳಿದು ಬಂದಿದೆ. ಕೊಪ್ಪಳ ನಗರದಲ್ಲಿರುವ ದರ್ಗಾದ ಮೂಲ ತಿಳಿದು ಬಂದಿಲ್ಲ. ಇಲ್ಲಿರುವ ಸೂಫಿ ಹೆಸರು ಹಜರತ್ ರಾಜಭಕ್ಷಿ. ಇತನ ತಂದೆ ತಾಯಿಗಳು ಯಾರು? ಎಲ್ಲಿಯವರು ಎಂಬುದು ತಿಳಿದು ಬಂದಿಲ್ಲ. ಅಲ್ಲದೇ ಈ ದರ್ಗಾದ

ಬಯಲು ಭೂಮಿಯನ್ನು ನೀಡಿದವರು ಯಾರು? ಈ ಜಾಗ ಯಾರದ್ದು? ಎಂಬ ವಿಚಾರ ಕೂಡ ಸ್ಪಷ್ಟವಾಗಿ ಗೋಚರಿಸಿಲ್ಲ. ಸಾರ್ವಜನಿಕರೇ ಈ ದರ್ಗಾದ ಕಟ್ಟಡಕ್ಕೆ ಸಹಾಯ ಮಾಡಿದ್ದು ಸಂದರ್ಶನದ ಸಂದರ್ಭದಲ್ಲಿ ತಿಳಿದು ಬಂದಿದೆ.

ಸುಮಾರು ೧೦೫ ವರ್ಷಗಳ ಕಾಲ ಉರುಸ್ ನಡೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಈ ದರ್ಗಾದ ಆರ್ಚಕರಾದ ಮುತುವಲ್ಲೀಯವರನ್ನು ಭೇಟಿಯಾದಾಗ, ಅವರು ಪ್ರಸ್ತುತ ದಿನಗಳಲ್ಲಿ ದರ್ಗಾದ ಧಾರ್ಮಿಕ ವಿಧಿ ವಿಧಾನಗಳನ್ನು ನಡೆಸಿಕೊಂಡು ಹೋಗುತ್ತಾರೆ. ಕಾಲೇಸಾಬ, ಅವರ ಮಗ ಸೈಯ್ಯದ ದಾದಾಸಾಬ, ಅವರ ಮಗ ಸೈಯ್ಯದ ಮೈಬೂಸಾಬು ಹುಸೇನ್ ಅವರ ಮಗ ಸೈಯ್ಯದ್ ಮರ್ದಾನ ಅಲಿ ಹೀಗೆ ವಂಶಾಪರಂಪರಾಗವಾಗಿ ಈ ದರ್ಗಾವನ್ನು ನಡೆಸಿಕೊಂಡು ಬಂದಿರುವ ಮುತುವಲ್ಲಿಯ ವಂಶಸ್ಥರು ಸುಮಾರು ವರ್ಷಗಳಿಂದ ಇದರ ಪೂಜಾ–ವಿಧಾನಗಳನ್ನು ನಡೆಸಿಕೊಂಡು ಬಂದಿದ್ದಾರೆ.

ಈ ದರ್ಗಾದಲ್ಲಿ ಯಾವುದೇ ರೀತಿಯ ಭಿನ್ನಾಭಿಪ್ರಾಯ ಕಂಡುಬಂದಿಲ್ಲ. ಹಿಂದೂ, ಸಿಖ್ಖ್ ಮತ್ತು ಕ್ರಿಶ್ಚಿಯನ್ ಎಲ್ಲಾ ಧರ್ಮದವರು ಈ ದರ್ಗಾಕ್ಕೆ ಬಂದು ಪೂಜೆ ಪುನಸ್ಕಾರಗಳನ್ನು ಕೈಗೊಂಡು ಪುನೀತರಾಗುತ್ತಾರೆ. ಪ್ರತಿ ಗುರುವಾರ ಹಾಗೂ ಪ್ರತೀ ಅಮವಾಸೆಯ ದಿನದಂದು ವಿಶಿಷ್ಟವಾಗಿ ವಿಜೃಂಭಣೆಯಿಂದ ಆಚರಣೆಗಳು ನಡೆಯುತ್ತವೆ. ಏಕೆಂದರೆ ಇತರ ಧರ್ಮಿಯರು ರಾಜಭಕ್ಷರವರ ದರ್ಗಾದ ಮೇಲೆ ಪ್ರಭಾವ ಆಗಿದೆ ಎಂಬ ನಂಬಿಕೆ ಜನರಲ್ಲಿ ಮೂಡಿದೆ. ಈ ದರ್ಗಾದ ಇನ್ನೊಂದು ಮುಖ್ಯ ಶಕ್ತಿ ಎಂದರೆ ಮಂತ್ರಶಕ್ತಿ. ಇದು ಜನರ ಆಶೋತ್ತರಗಳಿಗನುಗುಣವಾಗಿ ನಡೆಯುತ್ತಿದೆ. ಎಲ್ಲಾ ಧರ್ಮದವರಿಗೂ ಮುಕ್ತ ಅವಕಾಶವನ್ನು ನೀಡಿರುವ ಈ ದರ್ಗಾ ಪ್ರತೀ ವರ್ಷದ ಹೋಳಿ ಹುಣ್ಣಿಮೆ ಆದ ೫ ದಿವಸಕ್ಕೆ ಉರುಸ್ ನಡೆಯುತ್ತದೆ. ಇದೇ ತಿಂಗಳಲ್ಲಿ ಏಕೆ ಉರುಸ್ ನಡೆಯುತ್ತದೆ ಎಂಬ ಪ್ರಶ್ನೆಗೆ ಇದರ ಮೂಲ ಸ್ಥಳ ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಯಮನೂರು ಆಗಿದ್ದರಿಂದ ಅಲ್ಲಿ ನಡೆಯುವ ದಿನದಂದೇ ಇಲ್ಲಿ ನಡೆಯುತ್ತದೆ.

ಸುಮಾರು ೩೦,೦೦೦ ಕ್ಕೂ ಹೆಚ್ಚು ಜನ ಸೇರುವ ಈ ಉರುಸ್ ೩ ದಿನಗಳ ಕಾಲ ವಿಜೃಂಭಣೆಯಿಂದ ಜರಗುತ್ತದೆ. ಮೊದಲಿನ ದಿನ ಗಂಧ, ಇದು ಮಕ್ಬಲ್ ಅವರ ಮನೆಯಿಂದ ಪ್ರಾರಂಭವಾಗಿ ಮುಖ್ಯ ಬಜಾರದ ಮೂಲಕ ಮೆರವಣಿಗೆಯೊಂದಿಗೆ ದರ್ಗಾಕ್ಕೆ ತಲುಪುತ್ತದೆ. ಸರಿಸುಮಾರು ೪ ತಾಸುಗಟ್ಟಲೇ ಮೆರವಣಿಗೆ ನಡೆಯುವುದರ ಮೂಲಕ ಜನಮನದ ಭಕ್ತಿಗೆ ಅವಕಾಶವನ್ನಿಡುತ್ತದೆ. ಮುಕ್ಬಲ್ ಅವರ ಮನೆಯಿಂದ ತಂದ ಗಂಧವನ್ನು ದರ್ಗಾಕ್ಕೆ ಏರಿಸಿ ಪೂಜಾ ಪದ್ದತಿಯನ್ನು ನೆರವೇರಿಸುತ್ತಾರೆ, ಗಂಧ ಎಂಬುದು ಆ ದಿನಕ್ಕೆ ಮುಕ್ತಾಯವಾಗುತ್ತದೆ. ಎರಡನೆಯ ದಿನ ಬೆಳಿಗ್ಗೆ ೫ ರಿಂದ ಸಾವಿರಾರು ಭಕ್ತರು ಸೇರಿ ರಾತ್ರಿ ಹನ್ನೊಂದರವರೆಗೆ ಅಂದರೆ ೧೫ ರಿಂದ ೧೬

ತಾಸುಗಳವರೆಗೆ ಬಿಡುವಿಲ್ಲದೆ ಕಾರ್ಯಕ್ರಮದಲ್ಲಿ ಭಾಗಿಯಾಗುತ್ತಾರೆ. ಅಷ್ಟೆ ಅಲ್ಲದೇ ತಮ್ಮ ಯಾವುದೇ ಸಮಸ್ಯೆಯ ಪರಿಹಾರಕ್ಕೆ ಬೇಡಿಕೆಯ ಹರಕೆಯನ್ನು ಸಲ್ಲಿಸುವ ದೃಷ್ಟಿಯಿಂದ ಹರಕೆಯನ್ನು ಮುಟ್ಟಿಸುತ್ತಾರೆ. ೩ನೇ ದಿನ 'ಜೀಯರತ್' ಅಂದರೆ ಕನ್ನಡದಲ್ಲಿ "ಪುಣ್ಯತಿಥಿ"ಯ ಕಾರ್ಯ ಜರುಗುತ್ತದೆ.

ಮೂರನೇ ದಿನದಂದು ಇಸ್ಲಾಂ ಧರ್ಮದ ಧರ್ಮಗ್ರಂಥವಾದ ಕುರಾನ್ ಪಠಣ ಮಾಡುತ್ತಾ ಅದರ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಾರೆ. ಇದಾದ ನಂತರ ಸಂಜೆ ಜಾತಿಭೇದ, ಪಂಥಗಳನ್ನು ಮೀರಿ ಸರ್ವರೂ ಪ್ರಸಾದವನ್ನು ಸ್ವೀಕರಿಸುತ್ತಾರೆ. ಬೇಡಿಕೊಂಡ ಭಕ್ತರು ದವಸ, ಧಾನ್ಯ ಮತ್ತು ಹಣವನ್ನು ಸ್ವಇಚ್ಛೆಯಿಂದ ದರ್ಗಾವನ್ನು ನೋಡಿಕೊಳ್ಳುವ ಪ್ರಮುಖರಿಗೆ ನೀಡಿ, ಈ ದರ್ಗಾದ ವ್ಯವಸ್ಥೆಯನ್ನು ಗಟ್ಟಿಗೊಳಿಸಲು ಕಾರಣೀಭೂತರಾಗುತ್ತಾರೆ.

"ಉರುಸ್‌ನಲ್ಲಿ 'ಕಂದೂರಿ' ಎನ್ನುವ ಪದ ಬಳಕೆ ವಿಶಿಷ್ಟತೆಯಿಂದ ಕೂಡಿದೆ. ಇದು ಒಂದು ಪದ್ಧತಿಯಾಗಿ ವಿಶಿಷ್ಟವಾಗಿ ಬೆಳೆದುಕೊಂಡು ಬಂದಿದೆ. ಭಕ್ತರು ತಮಗೆ ಬಂದಿರುವ ಕಷ್ಟ, ರೋಗ – ರುಜಿನಗಳ ಪರಿಹಾರಕ್ಕಾಗಿ ಈ ದಿನದಂದು ಹರಕೆ ತೀರಿಸುತ್ತಾರೆ. ವೈದ್ಯರ ಹತ್ತಿರ ವಾಸಿಯಾಗದ ಕಾಯಿಲೆಗಳು ಈ ದರ್ಗಾದಿಂದ ಪರಿಹಾರ ಆಗಿದ್ದಾವೆಂಬ ನಂಬಿಕೆ, ವಿಶ್ವಾಸ ಜನರ ಮನದಲ್ಲಿ ಬೇರೂರಿದೆ. ಹಿಂದೂ ಮುಸ್ಲಿಂ ಭಕ್ತರು ತಮ್ಮ ಬೇಡಿಕೆಗಳು ಈಡೇರಿದ ನಂತರ ತಮ್ಮ ಹರಕೆಯನ್ನು ಮುಟ್ಟಿಸುವುದೇ "ಕಂದೂರಿ". ಟಗರು ಹೋತಗಳನ್ನು ಬಲಿ ಕೊಟ್ಟು ಅಲ್ಲಿ ನೆರೆದಿರುವ ಭಕ್ತರಿಗೆ ಪ್ರಸಾದದ ಮೂಲಕ ಉಣಬಡಿಸುವುದು, ಇದರ ಅಚರಣಾ ಪದ್ಧತಿಯಾಗಿದೆ."[೬]

ಈ ದರ್ಗಾಕ್ಕೆ ಬರುವ ಭಕ್ತರು ದಾನಕೊಡುವಂತ ಸಂದರ್ಭದಲ್ಲಿ ಬೇಟೆಯ ಜೊತೆಗೆ ಸಿಹಿ ಪದಾರ್ಥಗಳನ್ನು ಕೂಡ ಹರಕೆಯ ರೂಪದಲ್ಲಿ ಸಲ್ಲಿಸುತ್ತಾರೆ. ಹೀಗೆ ಬೆಳೆದುಕೊಂಡು ಬಂದಿರುವ ಈ ದರ್ಗಾವು ಕೋಮು ಸೌಹಾರ್ದತೆಯ ತಾಣವಾಗಿ, ಎಲ್ಲ ಧರ್ಮಿಯರ ಜನಮನವನ್ನು ತಟ್ಟಿ, ಸೌಹಾರ್ದ ಭಾವನೆಯನ್ನು ಮೂಡಿಸುವಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡು ಬಂದಿದೆ.

**ಸರ್ಕಾರ ಸೈಯದ್‌ಷಾಹ :**

ಈ ದರ್ಗಾವು ಕೊಪ್ಪಳದ ಪ್ರಮುಖ ನಗರ ಸ್ಥಾನದಲ್ಲಿದೆ. ಈ ದರ್ಗಾದ ಸೈಯದ್ ಷಾಹ ಒಬ್ಬ ಸೂಫಿ ಸಂತ. ಇವರು ಮೆಕ್ಕಾ–ಮದೀನದಿಂದ ಬಂದವರೆಂದು, ಈತನ ತಂದೆ ತಾಯಿಗಳ ಹೆಸರು ಮುಂತಾದ ಯಾವುದೇ ರೀತಿಯ ಅಂಶಗಳು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆದರೆ ಈ ದರ್ಗಾ ಇರುವ ಸ್ಥಳ ಸರ್ಕಾರಕ್ಕೆ ಸಂಬಂಧಿಸಿದೆ. ಸು.೭೦೦ ವರ್ಷಗಳಷ್ಟು ಇತಿಹಾಸವಿರುವ ಈ ದರ್ಗಾವು ಬಿಜಾಪುರ ಆದಿಲ್‌ಷಹಾರಿಗಿಂತ ಮೊದಲೇ ಇತ್ತೆಂದು ತಿಳಿದು ಬಂದಿದೆ. ಈ ದರ್ಗಾವನ್ನು ಭಕ್ತಿ ಪೂರ್ವಕವಾಗಿ ಕಟ್ಟಿಸಿದವರೆಂದರೆ ಹಿಂದು ಧರ್ಮದ ಡೊಂಗ್ರೆಮ್ಮರವರು. ಈಕೆಯ ಮೂಲ ತಿಳಿದು ಬಂದಿಲ್ಲ. ಈ

ದರ್ಗಾವನ್ನು ಈಗಿನ ಅರ್ಚಕರಾದ ಮುಜೀಮ್ ಮನೆತನದ ಪೀರ್ ಮೊಹ್ಮದ್ ಷರೀಫ್, ಆತನ ನಂತರ ಮೊಗವತ್ ಷರೀಫ್, ಅವರ ನಂತರ ಸೈಯ್ಯದ್ ಖಾಜಾ ಷರೀಫ್, ನಂತರ ಸೈಯದ್ ನಿಜಾವುದ್ದೀನ್, ಇವರೆಲ್ಲರೂ ದರ್ಗಾದ ಅರ್ಚಕರಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಪ್ರಸ್ತುತ ಮುಜಾವರ್‌ರವರು ಸೇವೆಯನ್ನು ಸಲ್ಲಿಸುವುದರ ಜೊತೆಗೆ ಭಕ್ತರಿಗೆ ನಂಬಿಕೆಯುಳ್ಳ ಅರ್ಚಕರಾಗಿದ್ದಾರೆ.

ಈ ದರ್ಗಾದಲ್ಲಿ ಸಂಪ್ರದಾಯ, ನಂಬಿಕೆಗಳಿಗೆ ಮೂಲವಾದ ಯಂತ್ರ, ಮಂತ್ರ ಅಷ್ಟೇ ಅಲ್ಲದೇ ಜನರಿಗೆ ಹಿಡಿದಿರುವ ಭೂತ ಬಿಡಿಸುವ ಕಾರ್ಯ, ರೋಗ ರುಜಿನಗಳಿಗೆ ತಾಯಿತ ಕಟ್ಟುವ ಕೆಲಸ, ಹೀಗೆ ಹತ್ತೆಂಟು ಸಮಸ್ಯೆಗಳಿಗೆ ಮಂತ್ರಶಕ್ತಿಯಿಂದಲೇ ಜನರ ಸಮಸ್ಯೆಗಳ ಬಗೆಹರಿಸುವ ಕಾಯಕ ಪ್ರಸ್ತುತ ಅರ್ಚಕರಾದ ಮುಜಾರ್‌ರವರು ಮಾಡುತ್ತಾರೆ. ಇದು ದರ್ಗಾ ಹುಟ್ಟಿನಿಂದಲೂ ನಡೆದುಕೊಂಡು ಬಂದಿದೆ ಎಂದು ತಲೆಮಾರಿನಿಂದ-ತಲೆಮಾರಿಗೆ ಬಂದ ಜನರು, ಹಿರಿಯರು ಹೇಳುತ್ತಾರೆ. ಈ ದರ್ಗಾದ ಏಳಿಗೆಗಾಗಿ ಭಕ್ತರಿಂದ ಭಕ್ತಿಯ ರೂಪದಲ್ಲಿ ಪ್ರಸಾದದ ರೂಪದಲ್ಲಿ ದವಸ, ಧಾನ್ಯ ಹಾಗೂ ಹಣವನ್ನು ದೇಣಿಗೆ ರೂಪದಲ್ಲಿ ಪಡೆಯುತ್ತಾರೆ.

"ಹಿಂದೂ ದೇವಸ್ಥಾನಗಳಿಗೆ ಈ ದರ್ಗಾ ಯಾವುದೇ ರೀತಿಯಿಂದ ಸಂಬಂಧವಿಲ್ಲ ಎಂಬ ಮಾತನ್ನು ಗಮನಿಸಿದರೂ, ಈ ದರ್ಗಾಕ್ಕೆ ಬರುವ ಹಿಂದೂಗಳು ತಮ್ಮ ಧರ್ಮದ ಪೂಜೆಗಳನ್ನು ಸಲ್ಲಿಸುತ್ತಾರೆ. ಆದರೆ ದರ್ಗಾದ ಪದ್ದತಿಯೆಂದರೆ ತಲೆಯ ಮೇಲೆ ವಸ್ತ್ರ ಹಾಕಿಕೊಳ್ಳಬೇಕು ಹಾಗೂ ಸ್ತ್ರೀಯರಿಗೆ ಪ್ರವೇಶವಿಲ್ಲ ಎಂಬುದನ್ನು ಹೊರತುಪಡಿಸಿದರೆ, ಹಿಂದೂ ದೇವರುಗಳಂತೆ ಕಾಯಿ, ಕರ್ಪೂರ ಮುಂತಾದವುಗಳು ಯಾವ ತಕರಾರೂ ಇಲ್ಲದೇ ನಡೆಯುತ್ತವೆ, ಹಿಂದೂ ದೇವರುಗಳಿಗೆ ಜಾತ್ರೆ ಎಷ್ಟು ಮುಖ್ಯವೋ, ದರ್ಗಾದ ದೇವರುಗಳಿಗೆ ಉರುಸ್ ಅಷ್ಟೇ ಮುಖ್ಯ."[2]

ಉರುಸ್ ಎಂದರೆ ಮೂರು ದಿನಗಳ ಕಾಲ ನಡೆಯುವ ಆಚರಣೆಯ ಪದ್ದತಿ. ಗಂಧ, ಕವ್ವಾಲಿ ಮತ್ತು ಉರುಸು ಎಂಬುದಾಗಿ ನಡೆಯುವ ಆಚರಣೆಗಳು ಜನಮನದ ಮೇಲೆ ನಂಬಿಕೆ ಹಾಗೂ ವಿಶ್ವಾಸವನ್ನು ಉಂಟು ಮಾಡುತ್ತವೆ. ಮೊದಲನೆ ದಿನ ನಡೆಯುವ ಗಂಧ ಇದು ಅರ್ಚಕರ ಮನೆಯಿಂದ ಬರುವಂಥದ್ದಾಗಿದೆ. ಸೈಯ್ಯದ್ ಮರ್ದನ ಷರಿಫ್ ಅವರ ಮನೆಯಿಂದ ರಾತ್ರಿ ಎಂಟು ಗಂಟೆಗೆ ಗಡಿಯಾರ ಕಂಬದ ಮಾರ್ಗವಾಗಿ ಜವಾಹರ್ ರಸ್ತೆಯಿಂದ ಕುರುಬರ, ದಾಸರ ಓಣಿಗಳ ಮೂಲಕ ಅತೀ ವಿಜೃಂಭಣೆಯೊಂದಿಗೆ ಸಾವಿರಾರು ಭಕ್ತರು ಭಕ್ತಿಯ ಮೂಲಕ ಮೆರವಣಿಗೆಯಿಂದಿಡಿದು ದರ್ಗಾ ತಲುಪುವವರೆಗೂ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಈ ದಿನದಂದು ಈ ಜಿಲ್ಲೆಯ ಪ್ರತಿ ತಾಲೂಕಿನ ಎಲ್ಲಾ ಗ್ರಾಮದ ವಿವಿಧ ಧರ್ಮದ ಭಕ್ತಾಧಿಗಳು ಭೇದ ಭಾವವೆಣಿಸದೇ ಆಗಮಿಸಿ ತಮ್ಮ ಭಕ್ತಿಯ ಹರಕೆಯನ್ನು ವಿವಿಧ ರೂಪದಲ್ಲಿ ಪೂಜಾ -ಪುನಸ್ಕಾರಗಳೊಂದಿಗೆ ಸಲ್ಲಿಸುತ್ತಾರೆ. ಸಕ್ಕರೆ, ಉಪ್ಪು, ಮಾದಲಿ, ಅಕ್ಕಿ, ದವಸ, ಧಾನ್ಯ ಹೀಗೆ ನಾನಾ ಪ್ರಕಾರದ ಕಾಣಿಕೆಯನ್ನು ನೀಡುತ್ತಾರೆ.

ಎರಡನೇ ದಿನದಂದು ದರ್ಗಾದ ಉರುಸ್ ಮತ್ತೊಂದು ವಿಶೇಷ ರೀತಿಯ ಭಕ್ತಿಯ ಮಹಾಪೂರವನ್ನು ಜನರಲ್ಲಿ ಹರಿಸುತ್ತದೆ. ಕವ್ವಾಲಿ ಪ್ರವಚನವು ಈ ದಿನದ ಪ್ರಮುಖ ಕೇಂದ್ರಬಿಂದು. ಜೊತೆಗೆ ವಿವಿಧ ಕಾರ್ಯಕ್ರಮಗಳು ಜರುಗುತ್ತವೆ. ಇಲ್ಲಿ ನಡೆಯುವ ಕವ್ವಾಲಿ ಪ್ರವಚನವು ಭಾಷೆಯ ದೃಷ್ಟಿಯಿಂದ ಉರ್ದು ಆಗಿದ್ದರೂ ಹಿಂದು ಜನರು ಭಕ್ತಿ ಪೂರಕವಾಗಿ ಕೇಳುತ್ತಾ ಉಪಸ್ಥಿತರಿರುತ್ತಾರೆ. ಕುರಾನಿನ ಸೈದ್ಯಾಂತಿಕ ನಿಲುವುಗಳು ಇಲ್ಲಿ ಪ್ರವಚನಗೊಳ್ಳುತ್ತವೆ. ಇದರ ಪ್ರಕಾರ ಸರ್ವ ಜಾತಿಯ, ಸರ್ವ ಧರ್ಮದ ಭಕ್ತಾದಿಗಳಿಗೆ ಶಾಂತಿ, ನೆಮ್ಮದಿ, ಆರೋಗ್ಯ, ಸಂಪತ್ತು ದೊರಕಲೆಂದು ದೇವರಲ್ಲಿ ಮೊರೆ ಹೋಗುತ್ತಾರೆ. ಮೂರನೆಯ ದಿನಕ್ಕೆ ಭಕ್ತರು ಬೆಳಿಗ್ಗೆ ಏಳರಿಂದ ತಮ್ಮ ಕುರಿ ವಗೈರೆ ಹರಕೆಯನ್ನು ದೇವರಿಗೆ ಸಲ್ಲಿಸಿ ಅದರಿಂದ ತಯಾರಿಸಿದ ಅಡಿಗೆಯ ಪ್ರಸಾದವನ್ನು ಅಲ್ಲಿ ಆಗಮಿಸಿದ ಎಲ್ಲರಿಗೆ ಉಣಬಡಿಸಿ ಪುನೀತಭಾವವನ್ನು ತಾಳುತ್ತಾರೆ.

ಹಿಂದೂ ಧರ್ಮದ ಜನರು ತಮ್ಮ ಆರೋಗ್ಯದ ಬೇಡಿಕೆಯ ನಿಮಿತ್ಯ ದೀಡು ನಮಸ್ಕಾರ ಹಾಕುವ ಪದ್ಧತಿ ಈ ದರ್ಗಾದಲ್ಲಿ ಆಚರಣೆಯಾಗಿ ಬೆಳೆದಿದೆ. ಸುಮಾರು ಇಪ್ಪತ್ತರಿಂದ ಮೂವತ್ತು ಸಾವಿರ ಭಕ್ತಾದಿಗಳು ಸೇರುವ ಈ ಉರುಸು ಹಾಗೂ ಈ ದರ್ಗಾ ಯಾವುದೇ ಸರಕಾರದ ಸಹಕಾರವಿಲ್ಲದೇ, ಭಕ್ತದಿಗಳಿಂದಲೇ ನಿರಂತರವಾಗಿ ನಡೆಯುತ್ತಾ ಬಂದಿರುವುದು ಕಾಣುತ್ತೇವೆ. ಪ್ರತಿ ಶುಕ್ರವಾರ, ಸೋಮವಾರ, ಗುರುವಾರ ಹಾಗೂ ಅಮವಾಸ್ಯೆ ದಿನದಂದು ಈ ದರ್ಗಾದಲ್ಲಿ ವಿಶೇಷ ಪೂಜೆಯ ವಿಧಾನಗಳು ನಡೆಯುತ್ತವೆ.

"ಸೋಮವಾರ ದಿನದಂದು ಹೆಚ್ಚಾಗಿ ಅನ್ಯ ಧರ್ಮಿಯರು ಈ ದರ್ಗಾಕ್ಕೆ ಹರಕೆ ತೀರಿಸಲು ಬರುತ್ತಾರೆ. ಅಂಥಹವರಲ್ಲಿ ಕಟುಕರು, ಸಾವಜಿಗಳು, ಜೈನ ಹಾಗೂ ಬೌದ್ದರು, ಹಿಂದೂಗಳು ಹೀಗೆ ಎಲ್ಲ ಧರ್ಮಿಯರಿಗೆ ಸೌರ್ಹದತೆಯ ತಾಣವಾಗಿ ಈ ದರ್ಗಾ ಹೆಸರು ವಾಸಿಯಾಗಿದೆ. ಸುಮಾರು ಏಳನೂರ ಐವತ್ತಾರು ವರ್ಷಗಳ ಚರಿತ್ರೆಯಿರುವ ಈ ದರ್ಗಾವು ಬಿಜಾಪುರದ ಆದಿಲಶಾಹಿ ದೊರೆಯ ಕಾಲದ ಮುಜಾವರ ಕುಟುಂಬಕ್ಕೆ ಸೆರಿದ್ದಾಗಿದೆ. ಇದು ನಲವತ್ತೈದು ಎಕರೆ, ಮೂವತ್ತಾರು ಗುಂಟೆ ಜಮೀನನ್ನು ಹೊಂದಿದ್ದು, ಈ ಭೂಮಿಯನ್ನು ದಾನವಾಗಿ ಪಡೆದು ಈ ದರ್ಗಾವನ್ನು ನಿರ್ಮಿಸಲಾಗಿದೆ ಎಂದು ತಿಳಿದು ಬಂದಿದೆ."[೮]

ಅಷ್ಟೆ ಅಲ್ಲದೇ ಇಲ್ಲಿ ಜನಗಳ ರೋಗ ರುಜಿನಗಳ ನಿರ್ವಹಣೆ ಮಾಡುವುದಕ್ಕೋಸ್ಕರ ಆಯುರ್ವೇದ ವೈದ್ಯ ಪದ್ಧತಿಯನ್ನು ಅನುಸರಿಸಲಾಗುತ್ತಿದೆ. ಈ ದರ್ಗಾದ ಇನ್ನೊಂದು ಮುಖ್ಯ ವೈಶಿಷ್ಟ್ಯವೆಂದರೆ ಬಡವರು, ರೋಗಿಗಳು ಮತ್ತು ತಂಗುವವರಿಗೆ ವಸತಿಯನ್ನು ಕಲ್ಪಿಸಿರುವುದು. ಭಾರತ ಹುಣ್ಣಿಮೆಯ ನಂತರ ಬರುವ ಅಮವಾಸೆಯ ಮೊದಲನೇ ದಿನ ನಡೆಯುವ ಈ ಉರುಸು ಜನರ ಮನದ ಮೇಲೆ ಅಚ್ಚಳಿಯದೇ ಉಳಿದಿದೆ.

**ಹಜರತ್ ಗವಿ ಮರ್ದಾನ್ ವಲಿಷಾ ರಹಿಮತುಲ್ಲಾ ದರ್ಗಾ :**

ಈ ದರ್ಗಾವು ಕೊಪ್ಪಳ ತಾಲೂಕಿನ ಹುಲಿಗಿಯ ಮಾರ್ಗ ಮಧ್ಯದಲ್ಲಿ ಬರುವ ಬುಳ್ಳಾಪುರ ಎಂಬ ಹಳೆಯ ಗ್ರಾಮದಲ್ಲಿದೆ. 'ಬೂರುಹಪುರ' ಎಂಬ ಹೆಸರು ಕೂಡ ಈ ಗ್ರಾಮಕ್ಕಿತ್ತು. ಈ ದರ್ಗಾದ ಸೂಫಿಯ ಮೂಲ ಹೆಸರು ಗವಿನಾನ ಎಂಬುದು ಕೂಡ ಈ ಗ್ರಾಮಕ್ಕಿದೆ. ಈತನ ತಂದೆ ತಾಯಿಗಳ ಹೆಸರು ತಿಳಿದು ಬಂದಿಲ್ಲ. ಸುಮಾರು ನಾಲ್ಕುನೂರರಿಂದ ಐದುನೂರು ವರ್ಷಗಳ ಕಾಲ ನಿರಂತರವಾಗಿ ನಡೆದುಬಂದ ಈ ದರ್ಗಾ ಸರಕಾರದ ಜಾಗದಲ್ಲಿ ಕಟ್ಟಲ್ಪಟ್ಟಿದೆ. ಅಂದರೆ ಹತ್ತೊಂಬತ್ತೂರ ಐವತ್ಮೂರರಲ್ಲಿ (೧೯೫೩) ಬಯಲಾಗಿದ್ದ ಈ ಜಾಗದಲ್ಲಿ ಭಕ್ತಾದಿಗಳಿಂದ ದೇಣಿಗೆ ರೂಪದಲ್ಲಿ ಪಟ್ಟಿ ಮಾಡುವುದರ ಮೂಲಕ ದರ್ಗಾವನ್ನು ಅಭಿವೃದ್ಧಿ ಪಡಿಸಲಾಯಿತು.

ಅಂದಿನಿಂದಲೂ ಈ ದರ್ಗಾವನ್ನು ಹಲವು ತಲೆಮಾರಿನವರು ನಡೆಸಿಕೊಂಡು ಬಂದಿದ್ದಾರೆ. ಅಂಥಹವರಲ್ಲಿ ಸೈಯದ್ ಷಫಿವುಲ್ಲಾ ಖಾದ್ರಿ, ಸೈಯದ್ ಇಮಾಮಸಾಹೇಬ ಖಾದ್ರಿ ಹಾಗೂ ಸೈಯದ್ ರಾಜಾಸಾಬ ಖಾದ್ರಿ ಎಂಬುವವರು ಪ್ರಮುಖರು. ಈ ಮಹನೀಯರ ಪರಿಶ್ರಮದಿಂದ ನಿರಂತರವಾಗಿ ಸಾಗಿಬಂದ ದರ್ಗಾ ಇತ್ತೀಚೆಗೆ ಒಂದು ಸಮಿತಿಯನ್ನು ರಚಿಸಿಕೊಂಡಿದೆ. ಆ ಸಮಿತಿ ಹೆಸರು "ಅಲ್ಲಾ-ಬಿಲ್ಲಾ ಟ್ರಸ್ಟ್" ಈ ಟ್ರಸ್ಟ್‌ನ ಸದಸ್ಯರೆಲ್ಲರೂ ದರ್ಗಾದ ಅಭಿವೃದ್ಧಿಗೆ ಶ್ರಮಿಸುತ್ತಾರೆ.

ಈ ದರ್ಗಾದಲ್ಲಿರುವ ಅಜ್ಜರ ಶಕ್ತಿಯಿಂದ ಯಂತ್ರ-ಮಂತ್ರ ನಡೆಯುತ್ತದೆ. ಇವುಗಳಿಂದ ಜನರು ಸುಖದಿಂದ ಇರುತ್ತಾರೆ ಎಂಬ ನಂಬಿಕೆಯಿದೆ. ಈ ದರ್ಗಾದ ಇನ್ನೊಂದು ವಿಶಿಷ್ಟತೆಯೆಂದರೆ ಹಿಂದೂ ದೇವಾಲಯವಾದ ಆಂಜನೇಯ ದೇವಸ್ಥಾನಕ್ಕೆ ಐದುನೂರ ಅಡಿ ದೂರವಿದ್ದರೂ ಎರಡೂ ಬಾಗಿಲುಗಳು ಒಂದೇ ಅಳತೆಯಲ್ಲಿದ್ದು ಎದುರು ಬದುರಾಗಿವೆ. ಇಲ್ಲಿ ದೀಪಾವಳಿ ಹಬ್ಬದ ದಿನದಂದು ಹಿಂದೂ ಮುಸ್ಲಿಂರು ಸೇರಿ ದೀಪ ಬೆಳಗಿಸಿ ದೇವರು ಒಬ್ಬನೆಯೆಂಬ ಭಾವನೆಯಿಂದ ಪೂಜೆ ಸಲ್ಲಿಸುವ ಪ್ರತೀತಿ ಇದೆ. ಪ್ರತಿ ವರ್ಷ ಮೇ ತಿಂಗಳಿನ ಒಳಗಾಗಿ ನಡೆಯುವ ಈ ಉರುಸು ಇವತ್ತಿಗೆ ೨೦ಳ ಉರುಸುಗಳು ಜರುಗುತ್ತಾ ಬಂದಿವೆ. ಪ್ರತಿ ಉರುಸಿಗೆ ನಾಡಿನ ಪ್ರಮುಖ ಜಿಲ್ಲೆಗಳಲ್ಲದೇ ಪಕ್ಕದ ರಾಜ್ಯದ ಜನರು ಬಂದು ಅಮವಾಸ್ಯೆ ದಿನದಂದು ತಮ್ಮ ಹರಕೆಯನ್ನು ಸಲ್ಲಿಸುತ್ತಾರೆ.

ಉರುಸಿನ ದಿನಗಳು ಬಹಳ ವಿಜೃಂಭಣೆಯಿಂದ ಜರುಗುವ ಸಂದರ್ಭದಲ್ಲಿ ಆ ದಿನ ಪ್ರಸಾದದ ವ್ಯವಸ್ಥೆಯನ್ನು ಮಾಡಿರುತ್ತಾರೆ. ಆದರೆ ಉಳಿದ ದರ್ಗಾಕ್ಕಿಂತ ಈ ದರ್ಗಾ ಭಿನ್ನವಾಗಿದೆ. ಇಲ್ಲಿ ಪ್ರಾಣಿ ಬಲಿಯ ಪದ್ದತಿ, ಮಾಂಸಹಾರದ ಅಡಿಗೆ ಇಲ್ಲದಿರುವುದು ವಿಶಿಷ್ಟವಾಗಿದೆ. ಏಕೆಂದರೆ ಆಂಜನೇಯ ದೇವಸ್ಥಾನದ ಮಾರ್ಗವಾಗಿ ಈ ದರ್ಗಾಕ್ಕೆ ಬರುವ ಭಕ್ತಾದಿಗಳು ಈ ದರ್ಗಾದ ಟ್ರಸ್ಟಿನವರ ಜತೆಗೂಡಿ ಸಮಾಲೋಚಿಸಿ ಮಾಂಸಾಹಾರ ಪದ್ದತಿಯನ್ನು ನಿಷೇಧಿಸಲಾಗಿದೆ. ಇಲ್ಲಿ ಭಜನೆ ನಡೆಯುತ್ತಿದ್ದು

ಧಾರ್ಮಿಕ ಚೌಕಟ್ಟುಗಳನ್ನು ಮೀರಿ ಹಿಂದೂ ಮತ್ತು ಮುಸ್ಲಿಮರು ಪಾಲ್ಗೊಳ್ಳುವಿಕೆ ಕಂಡು ಬರುತ್ತದೆ. ಫಕೀರರ ಮೂಲಕ ಉರಸ್ ಆಚರಿಸುವುದು ವಿಶೇಷವಾಗಿದೆ.

ಈ ದರ್ಗಾವು ಶೈಕ್ಷಣಿಕಪ್ರಗತಿಯನ್ನು ಸಾಧಿಸಲು ಶಾಲೆಗಳನ್ನು ತೆಗೆಯುವುದರ ಮೂಲಕ ಸರ್ವಧರ್ಮಿಯರಿಗೆ ಶಿಕ್ಷಣ ನೀಡುವ ಉದ್ದೇಶವನ್ನು ಹೊಂದಿದೆ. ಮುಖ್ಯವಾಗಿ ಅರಬ್ಬಿ ಮತ್ತು ಉರ್ದು ಭಾಷೆಗಳನ್ನು ಕಲಿಸುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಇದು ಇಲ್ಲಿ ಮೆಚ್ಚುಗೆಯಾದ ಸಂಗತಿಯಾಗಿದೆ.

**ಈ ದರ್ಗಾದ ನಂಬಿಕೆ ಮತ್ತು ಪವಾಡಗಳು :**

ಮನುಷ್ಯ ನಂಬಿಕೆ ಮತ್ತು ವಿಶ್ವಾಸದ ಜೀವಿ. ಆದುದರಿಂದಲೇ ಅವನು ಅನಾದಿ ಕಾಲದಿಂದಲೂ ದೇವರು ಮತ್ತು ದಿಂಡರಲ್ಲಿ ನಂಬಿಕೆ ಇಡುತ್ತಲೇ ಬಂದಿದ್ದಾನೆ. ಜನರು ಮತ್ತು ಪ್ರಾಣಿಗಳ ಆರೋಗ್ಯವನ್ನು ಸುಧಾರಿಸುವಲ್ಲಿ ಈ ದರ್ಗಾದ ಪ್ರಾಮುಖ್ಯತೆ ಅಪಾರ. ಇದಕ್ಕೆ ನಾವು ಒಂದು ನಿದರ್ಶನವನ್ನು ನೋಡಬಹುದಾಗಿದೆ.

೧. ಎತ್ತುಗಳಿಗೆ ಅನಾರೋಗ್ಯ ಉಂಟಾದಾಗ ಆ ಎತ್ತುಗಳನ್ನು ಕರೆತಂದು ಆ ದರ್ಗಾದ ಸುತ್ತ ಐದು ಸಲ ಪ್ರದಕ್ಷಿಣೆ ಹಾಕಿದರೆ ಎತ್ತಿನ ಅನಾರೋಗ್ಯ ಸುಧಾರಿಸಿ ಆರೋಗ್ಯಯುತವಾಗುತ್ತದೆ ಎಂಬ ನಂಬಿಕೆ ಇಲ್ಲಿ ಈಗಲೂ ಇದೆ.

೨. ಕುಷ್ಠರೋಗ, ಚರ್ಮರೋಗ ಮತ್ತು ಏಡ್ಸ ಮುಂತಾದ ರೋಗಿಗಳಿಗೆ ಈ ದರ್ಗಾ ವಾಸಿ ಮಾಡುತ್ತದೆ ಎಂಬ ನಂಬಿಕೆಯು ಇಲ್ಲಿದೆ.

೩. ಹುಚ್ಚು ಹಿಡಿದವರನ್ನು ಇಲ್ಲಿಗೆ ಕರೆದುಕೊಂಡು ಬಂದು ಸಮಾಧಿಗೆ ನಮಸ್ಕರಿಸಿದರೆ ಹುಚ್ಚು ವಾಸಿಯಾಗುತ್ತದೆ.

೪. ದೆವ್ವ, ಗಾಳಿ, ಭಾನಾಮತಿಗಳಂತಹ ಅಮಾನುಷ ಶಕ್ತಿಗಳಿಗೆ ಒಳಗಾದರೆ ಇಲ್ಲಿ ಮೂರು ದಿನಗಳ ಕಾಲ ಇದ್ದರೆ ಅವರು ಅದರಿಂದ ಗುಣಮುಖವಾಗುತ್ತಾರೆ.

೫. ಬ್ಯಾಡಗಿ ತಾಲೂಕಿನವರಾದ ಮದ್ಗರ್‌ಸಾಬ್‌ರು ಚರ್ಮರೋಗಕ್ಕೆ ತುತ್ತಾಗಿ ಎಂಥಹ ದೊಡ್ಡ ವೈದ್ಯರಲ್ಲಿ ತೋರಿಸಿದರೂ ಗುಣಮುಖವಾಗದ ರೋಗ ಈ ದರ್ಗಾಕ್ಕೆ ಬಂದು ಒಂದೂವರೆ ತಿಂಗಳಿನಲ್ಲಿಯೇ ವಾಸಿಯಾಯಿತು ಎಂದು ಹೇಳುತ್ತಾರೆ.

ಇಷ್ಟೆ ಅಲ್ಲದೇ ಈ ದರ್ಗಾಕ್ಕೆ ನಡೆದಕೊಂಡ ವ್ಯಕ್ತಿಯ ಉದಾಹರಣೆಯನ್ನು ಗಮನಿಸಬಹುದು"ಗುಲ್ಬರ್ಗಾ ಜಿಲ್ಲೆಯ ಶಿವಾನಂದ ಕಡಗಂಜಿ ಪೋಲಿಸ ಇಲಾಖೆ ಅವರ ಮಗ ಸಂತೋಷ, ವಯಸ್ಸು ೨೫ ಇವನು ದಿನವಿಡೀ ಅನಾರೋಗ್ಯದಿಂದ ಬಳಲಿ ದೇಹ ಕುಂಠಿತಗೊಂಡು ಆಹಾರವಿಲ್ಲದೇ ಬಾಯಿಯಿಂದ ರಕ್ತ ಬೀಳುತ್ತಿತ್ತು. ಆಗ ನನಗೆ ಯಾರೋ ಒಬ್ಬರು ಈ ದರ್ಗಾದ ವಿಳಾಸ ಕೊಟ್ಟರು. ನಾನು ಈ ದರ್ಗಾಕ್ಕೆ

ನಡೆದುಕೊಂಡು ಆರೋಗ್ಯದ ಪುನರ್ಜನ್ಮ ಪಡೆದು ಕೊಂಡಿದ್ದೇನೆ. ಇದರ ಪ್ರತಿಫಲವಾಗಿ ಇಲ್ಲಿರುವ ಭಕ್ತರಿಗೆ ದೀಪಾವಳಿ ಹಬ್ಬದಂದು ಪ್ರಸಾದದ ವ್ಯವಸ್ಥೆಯನ್ನು ನಾವೇ ಮಾಡುತ್ತೇವೆಂದು ಸಂದರ್ಶನ ಮಾಡಿದ ಸಂದರ್ಭದಲ್ಲಿ ಹೇಳಿದ್ದಾರೆ."[೯]

ಹೀಗೆ ಹಲವಾರು ಜನರು ಈ ದರ್ಗಾಕ್ಕೆ ಭಕ್ತಿಯಿಂದ ನಡೆದುಕೊಂಡು ಆರೋಗ್ಯದಿಂದ ಬಾಳುತ್ತಿರುವುದು ಅನೇಕ ಅನುಭವಸ್ಥರ ಅನುಭವದಿಂದ ತಿಳಿಯಬಹುದಾಗಿದೆ. ಬಂದಂತಹ ರೋಗಿಗಳಿಗೆ ವಸತಿ ಮತ್ತು ಊಟದ ವ್ಯವಸ್ಥೆಯನ್ನು ಮಾಡಿರುವ ಈ ದರ್ಗಾ ವೈದ್ಯಕೀಯ ಸೇವೆಯನ್ನು ಸಹಾ ನಿಷ್ಠೆಯಿಂದ ಸಲ್ಲಿಸುತ್ತಿದೆ. ಒಂದು ವೇಳೆ ಇಲ್ಲಿಗೆ ಬಂದ ರೋಗಿ ಅತಿಯಾಗಿ ಬಳಲುತ್ತಿದ್ದರೆ, ಪ್ರಾಥಮಿಕ ಚಿಕಿತ್ಸೆಯನ್ನು ನೀಡಿ ಮುನಿರಾಬಾದ್ ಡ್ಯಾಂ ಆಸ್ಪತ್ರೆಗೆ ಕಳುಹಿಸಿ ಅವರಿಗೆ ಆರಾಮವಾಗಲೆಂದು ದರ್ಗಾಕ್ಕೆ ಬೇಡಿಕೊಳ್ಳುತ್ತಾರೆ. ಹೀಗಾಗಿ ಎಲ್ಲಾ ಜಾತಿಯ ಜನರು ಈ ದರ್ಗಾಕ್ಕೆ ನಿಷ್ಠೆ ಮತ್ತು ಪ್ರಮಾಣಿಕತೆಯಿಂದ ನಡೆದುಕೊಳ್ಳುತ್ತಾರೆ.

**ಸೈಯದ್ ಷರಜಾ ಅಲಿಖಾದ್ರಿ :**

ಹಿಂದೂ ಮತ್ತು ಮುಸ್ಲಿಂ ಧರ್ಮಿಯರ ತಾಣವಾದ ಬೇಡ್ಜಾ ಎಂಬ ಬಿರುದನ್ನು ಪಡೆದ ದರ್ಗಾವಿರುವ ಸ್ಥಳ ಕೊಪ್ಪಳ ತಾಲೂಕಿನ ಬಿಸರಳ್ಳಿ. ಈ ಗ್ರಾಮದ ದರ್ಗಾವು ಇಲ್ಲಿನ ಜನರ ಆಕರ್ಷಣಿಯ ಪ್ರಮುಖ ಕೇಂದ್ರ ಬಿಂದು. ಸೈಯದ್ ಷರಜಾ ಅಲಿಖಾದ್ರಿಯವರು ಸೂಫಿ ಸಂತರಲ್ಲಿ ಒಬ್ಬರು ಎಂಬುದನ್ನು ಹೊರತು ಪಡಿಸಿದರೆ ಅವರ ಮೂಲ ಸ್ಥಳ ತಂದೆ ತಾಯಿ ವಂಶಸ್ಥರು ಮುಂತಾದ ಅಂಶಗಳು ಸ್ಪಷ್ಟವಾಗಿ ತಿಳಿದುಬಂದಿಲ್ಲ. "ಆದರೆ ಈ ದರ್ಗಾ ೩೦೦ ವರ್ಷಗಳ ಇತಿಹಾಸವನ್ನು ಹೊಂದಿದೆ, ಎಂಬುದಕ್ಕೆ ಅಲ್ಲಿರುವ ಹುಣಸೇ ಮರವೇ ಸಾಕ್ಷಿಯಾಗಿದೆ. ಈ ಹುಣಸೇ ಮರ ನೆಟ್ಟ ವರುಷ ೧೭೪೪. ಅಂದರೇ ೨೬೬ ವರ್ಷಗಳ ಹಿಂದೆ ಒಂದು ಎಕರೇ ೨೦ ಗುಂಟೆ ವಿಸ್ತೀರ್ಣ ಹೊಂದಿರುವ ಈ ದರ್ಗಾದ ಜಾಗವನ್ನು ದೇಸಾಯಿ ಮನೆತನದವರು ದಾನ ನೀಡಿದ್ದಾರೆ ಎಂದು ತಿಳಿದು ಬಂದಿದೆ. ೨೬೬ ವರ್ಷ ನಡೆದುಬಂದ ಉರುಸು ಹಾಗೂ ಈ ದರ್ಗಾವನ್ನು ನೋಡಿಕೊಂಡು ಬಂದವರು ಸೈಯದ್ ಅಬ್ಜಿತ್ ರಜಾಖ್ ಖಾದ್ರಿ, ಪ್ರಸ್ತುತ ದರ್ಗಾವನ್ನು ನೋಡಿಕೊಳ್ಳುವ ಬಡೇಸಾಹೇಬರು ಯಂತ್ರ, ಮಂತ್ರ ಮತ್ತು ಭೂತವನ್ನು ಬಿಡಿಸುವ ಕಾರ್ಯವನ್ನು ನಿರ್ವಹಿಸುತ್ತಾರೆ."[೧೦]

ದೀಪ, ಊದಬತ್ತಿ, ಕಾಯಿ ಮತ್ತು ಕರ್ಪೂರಗಳೊಂದಿಗೆ ಪೂಜೆ ನೈವೇದ್ಯಗೊಳ್ಳುವ ಈ ದರ್ಗಾ ಗವಿಸಿದ್ದೇಶ್ವರ ಮಠದ ಶಾಖಾ ಕಟ್ಟಡದ ಹತ್ತಿರದಲ್ಲಿದೆ. ಸೋಮವಾರ ಮಠಕ್ಕೆ ನಡೆದುಕೊಳ್ಳುವ ಭಕ್ತರು ಗುರುವಾರ ದರ್ಗಾಕ್ಕೆ ನಡೆದುಕೊಳ್ಳುತ್ತಾರೆ. ಪ್ರತಿವರ್ಷ ಎಪ್ರಿಲ್ ತಿಂಗಳಲ್ಲಿ ನಡೆಯುವ ಈ ಉರುಸು ಹೈದ್ರಾಬಾದ್, ಹುಬ್ಬಳ್ಳಿ, ಬೆಳಗಾವಿ, ಹೊಸಪೇಟೆ ಇನ್ನೂ ಮುಂತಾದ ಪ್ರಮುಖ ನಗರಗಳಿಂದ ಜನಬಂದು ಸೇರುತ್ತಾರೆ. ಅಷ್ಟೇ ಅಲ್ಲದೇ ಹಿಂದು ಮತ್ತು ಮುಸ್ಲಿಮರು ಉರುಸಿನ ದಿನದಂದು ಸಿಹಿ

ಪದಾರ್ಥವಾದ ಮಾದ್ಲಿಯನ್ನು ಮಾಡಿ ಉಣ ಬಡಿಸುತ್ತಾರೆ. ಮೊಹರಂ ಹಬ್ಬದಲ್ಲಿ ಪ್ರಮುಖವಾಗಿರುವ ಅಲಾಯಿ ದೇವರು ಈ ದರ್ಗಾಕ್ಕೆ ಬಂದು ಅಲಾಯಿ ತೆಗೆದುಕೊಳ್ಳುವುದರ ಮೂಲಕ ಇಸ್ಲಾಂ ಧರ್ಮದ ಮಾನವೀಯ ಮೌಲ್ಯಗಳನ್ನು ಜನರಲ್ಲಿ ಹೇಳುತ್ತಾರೆ. "ಹೂ, ಕಾಯಿ, ಸಕ್ಕರೆ, ಉತ್ತುತ್ತಿ, ಊದುಬತ್ತಿ, ಲೋಬಾನ, ಗಂಧೆಣ್ಣೆ ಮುಂತಾದವುಗಳನ್ನು ಭಕ್ತರು ದರ್ಗಾಕ್ಕೆ ಮುಟ್ಟಿಸುವುದರ ಮೂಲಕ ತಮ್ಮ ಹರಕೆಯನ್ನು ಸಲ್ಲಿಸುತ್ತಾರೆ. ಗುರುವಾರ, ಶುಕ್ರವಾರ ಮತ್ತು ಪ್ರತಿ ಅಮವಾಸ್ಯೆಯ ದಿನ ಅನೇಕ ಭಕ್ತಾದಿಗಳು ಈ ದರ್ಗಾಕ್ಕೆ ಬಂದು ತಮ್ಮ ನಂಬಿಕೆಗಳನ್ನು ಉಳಿಸಿಕೊಳ್ಳುತ್ತಾರೆ. ಇಲ್ಲಿ ಹಿಂದು ಮತ್ತು ಮುಸ್ಲಿಂರೆನ್ನದೆ ಎಲ್ಲರೂ ಸರಿ ಸಮಾನರಾಗಿ ನಡೆದುಕೊಳ್ಳುತ್ತಾರೆ."[೧೧]

**ಹಜರತ್ ಮುಸ್ತಾಫ್ ಖಾದ್ರಿ ದರ್ಗಾ :**

ಬೆಳಗಟ್ಟಿ ಕೊಪ್ಪಳ ತಾಲೂಕಿನ ಚಿಕ್ಕ ಗ್ರಾಮ. ಈ ಗ್ರಾಮದಲ್ಲಿ ಹಜರತ್ ಮುಸ್ತಾಫ್ ಖಾದ್ರಿ ಎಂಬ ದರ್ಗಾ ಇದೆ. ಹಜರತ್ ಮುಸ್ತಾಫ್ ಖಾದ್ರಿಯ ಮೂಲಸ್ಥಳ ಇದೆ ಗ್ರಾಮ. ಇವರ ತಂದೆ ಹೆಸರು ಹಜರತ್ ಕರೀಮ್‌ಉದ್ದಿನ್ ಖಾದ್ರಿ. ಈ ದರ್ಗಾವು ೨೪೦ ವರ್ಷಗಳ ಚರಿತ್ರೆಯನ್ನು ಹೊಂದಿದೆ. ಎರಡು ಎಕರೆ ನಾಲ್ಕು ಗುಂಟೆಯ ಜಾಗವನ್ನು ಹೊಂದಿದೆ. ಈ ದರ್ಗಾದ ಪವಾಡವನ್ನು ಗಮನಿಸಿದ ಈ ಊರಿನ ಪೋಲಿಸ ಪಾಟೀಲ್ ವಂಶಸ್ಥರು ಭೂಮಿಯನ್ನು ಧಾನವಾಗಿ ನೀಡಿದರು ಎಂಬುದಾಗಿ ತಿಳಿದುಬಂದಿದೆ. ೨೪೧ನೇ ವರ್ಷದ ಉರುಸು ನಡೆಯುವ ದರ್ಗಾವನ್ನು ಮೊದಲಿನಿಂದಲೂ ನೋಡಿಕೊಂಡ ಸೂಫಿಯವರ ಮನೆತನದವರಾದ ಹಜರತ್ ಮುಸ್ತಾಫ್ ಖಾದ್ರಿ ಅವರ ನಂತರದಲ್ಲಿ ಹಜರತ್ ಮುರ್ತುಜಿ ಖಾದ್ರಿ, ಮೋಹಿದ್ದಿನ್ ಖಾದ್ರಿ, ನ್ಯಾಮತ್‌ವುಲ್ ಖಾದ್ರಿ ಹಾಗೂ ಪ್ರಸುತ್ತ ಸೈಯದ್‌ಷಹ ಮಹೇಬೂಬ್ ಖಾದ್ರಿ ಮುಂತಾದವರು ತಲೆ-ತಲಾಂತರದಿಂದ ಜನರ ವಳಿತಿಗಾಗಿ, ಸೇವೆಯನ್ನು ಸಲ್ಲಿಸುತ್ತಲೇ ಬಂದಿದ್ದಾರೆ.

ಈ ದರ್ಗಾಕ್ಕೆ ಬರುವ ಭಕ್ತಾದಿಗಳು ತನು-ಮನ-ಧನದಿಂದ ಸೇವೆಸಲ್ಲಿಸುತ್ತಾರೆ. ಅಷ್ಟೆ ಅಲ್ಲದೇ ಪೂಜಾ ಪದ್ದತಿಯಂತೆ ಕಾಯಿ, ಕರ್ಪೂರ, ದೀಪ ಮುಂತಾದವುಗಳನ್ನು ನೀಡಿ ಸಂತಸ ಪಡುತ್ತಾರೆ. ದಾವಣಗೆರೆ, ಹರಪನಹಳ್ಳಿ, ಗದಗ ಅಲ್ಲದೇ ಆಂದ್ರಪ್ರದೇಶದ ಹೈದ್ರಾಬಾದ್, ಕರ್ನೂಲ್ ಮುಂತಾದ ಸ್ಥಳಗಳಿಂದ ಭಕ್ತರು ಸುಮಾರು ಎಂಟ ರಿಂದ ಹತ್ತು ಸಾವಿರದವರೆಗೂ ಸೇರಿ ಉರುಸ್‌ನ್ನು ಆಚರಿಸುತ್ತಾರೆ. ಗಂಧ, ಉರುಸು ಮತ್ತು ಜಿಯಾರತ್ ಎಂಬ ಮೂರು ದಿನದ ಕಾರ್ಯಕ್ರಮದಲ್ಲಿ ಭಾಗವಹಿಸಿ ತಮ್ಮ ಹರಕೆಯನ್ನು ಸಲ್ಲಿಸುತ್ತಾರೆ. ಅಲ್ಲದೇ ಕುರಿ, ಟಗರು, ಹೋತ ಮುಂತಾದ ಪ್ರಾಣಿಬಲಿ ನೀಡಿ ತಮ್ಮ ಹರಕೆಯನ್ನು ತೀರಿಸುತ್ತಾರೆ. ಈ ಸೂಫಿಯು ತೀರಿದ ನಂತರ ಸಮಾಧಿ ಮಾಡಲು ಗಂಗಾವತಿ, ಕಂಪ್ಲಿ ಮತ್ತು ಬೆನ್ನೂರು ಗ್ರಾಮದ ಜನರ ನಡುವೆ ಪೈಪೋಟಿ ನಡೆದು ಕೊನೆಗೆ ಬೆಳಗಟ್ಟಿಯಲ್ಲಿ ಮಾಡಬೇಕೆಂದು ತೀರ್ಮಾನಿಸಿದರು. ದರ್ಗಾವಿರುವ ಸ್ಥಳದಲ್ಲಿ ಒಂದು ಹುಣಸೆ

ಸಸಿಯನ್ನು ನೆಟ್ಟು, ಈ ದರ್ಗಾದಲ್ಲಿಯೇ ಸಂತರ ದಫನ್ ಮಾಡಿದರೆಂಬ ನಂಬಿಕೆ ಜನರಲ್ಲಿದೆ. ಅಲ್ಲಿ ಯಾವುದೇ ರೀತಿಯಿಂದ ಸರ್ಕಾರದ ಸಹಕಾರ ವಿಲ್ಲದೇ ಕೇವಲ ಭಕ್ತಾದಿಗಳಿಂದ ನಡೆಯುತ್ತಾ ಸಾಗಿದೆ.

**ಹಾಲವರ್ತಿ ಜಡೇತಾತ :**

ಹೇಮಕೂಟದ ಶಿವರಾಮ ಅವಧೂತರ ಶಿಷ್ಯರಾಗಿದ್ದ ಜಡೀತಾತ ಅವರು ಮೂಲ ಗೊಳಸಂಗಿಯವರು. ಪ್ರಸ್ತುತ ಮಠವಿರುವುದು ಕೊಪ್ಪಳ ತಾಲೂಕಿನ ಹಾಲವರ್ತಿ ಎಂಬ ಗ್ರಾಮದಲ್ಲಿ. ಮುಸ್ಲಿಂ ಕುಟುಂಬದಲ್ಲಿ ಜನಿಸಿದ ಜಡೆಪ್ಪ ತಾತನವರ ಮೂಲ ಹೆಸರು ಬಾಪುಸಾಬ್. ಇವರ ಬಾಲ್ಯ ಜೀವನ ತೀರಾ ಬಡತನದಿಂದ, ಅಸ್ತವ್ಯಸ್ತದಿಂದ ಕೂಡಿತ್ತೆಂದು ಆ ಊರಿನ ಜನರು ಹೇಳುತ್ತಾರೆ. ಇದು ಕೋಮು ಸೌಹಾರ್ದತೆಗೆ ಪ್ರಮುಖವಾದ ಸ್ಥಳವಾಗಿದೆ. ಜಡೀತಾತನವರು ಅದೇ ಗ್ರಾಮದ ಕೇವಲ ಮೂರು ನಾಲ್ಕು ಕುಟುಂಬಗಳಲ್ಲಿರುವ ಕುಟುಂಬ ಒಂದರಲ್ಲಿ ಜನಿಸಿದರು. ಹಾಲವರ್ತಿ ಎಂಬ ಹೆಸರು ಅಲ್ಲಿನ ಬಹುಸಂಖ್ಯಾತ ಕುರುಬ ಜನಾಂಗ ಇರುವದರಿಂದಲೇ ಬಂದಿರುವುದೆಂದು ಊಹಿಸಿದ್ದಾರೆ. ಇವರು ಆಧ್ಯಾತ್ಮಿಕ ಚಿಂತಕರಾಗಿದ್ದರಿಂದಲೇ ಬಾಲ್ಯದ ಮೊದಲ ದಿನಗಳಿಂದಲೂ ಒಬ್ಬಂಟಿಯಾಗಿ ಆಧ್ಯಾತ್ಮಿಕ ಲೋಕದ ಚಿಂತನೆಯಲ್ಲಿ ಮುಳುಗುತ್ತಿದ್ದರು. ಆಶ್ಚರ್ಯವೆಂದರೆ ಜಡೀತಾತನವರು ಒಂದು ರಾತ್ರಿ ಯಾಕೋ ಏನೋ ರೆಡ್ಡಿಯರ ಮನೆಯಲ್ಲಿ ಉಳಿದುಕೊಳ್ಳಲು ಯೋಚಿಸಿದರು. ಇವರನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಗೌಡರು ದನದ ಕೊಠಡಿಯಲ್ಲಿ ಉಳಿದುಕೊಳ್ಳಲು ಅನುಮತಿ ನೀಡಿದರಂತೆ. ಇನ್ನೇನು ಜಡೀತಾತನವರು ದನದ ಕೊಠಡಿಗೆ ಕಾಲಿಡುತ್ತಿದ್ದಂತೆ ದನಗಳು ಮೈತುಂಬ ಉಣ್ಣೆಹತ್ತಿದ್ದವು. ಇದನ್ನು ಅರಿತ ತಾತನವರು ದನದ ಉಣ್ಣೆಗಳನ್ನು ಇಡೀ ರಾತ್ರಿ ಕಲೇಹಾಕಿ ಬೆಂಕಿಯಲ್ಲಿ ಸುಟ್ಟು ಭಸ್ಮಮಾಡಿದರು. ಇಲ್ಲಿಂದಲೇ ಶುರುವಾದ ಇವರ ಪವಾಡ ಹಿಂದೂಗಳಿಗೆ ಜಡೀತಾತ, ಮುಸ್ಲಿಂರಿಗೆ ರಾಜಾ ಭಾಗಸವಾರ್ ತಾತನಾಗಿ ಪ್ರಸಿದ್ದಿ ಪಡೆದರು. ಇಂತಹ ಜಡೀತಾತನವರಿಗೆ ಆಶ್ಚರ್ಯದ ಸಂಗತಿಯೆಂದರೆ ಹಂಪೆಯ ಶಿವರಾಮ ತಾತನವರು ಹಿಂದೂಧರ್ಮದ ದೀಕ್ಷೆಯನ್ನು ಕೊಟ್ಟರು. ಇವರು ತೀರಿಕೊಂಡ ಮೇಲೆ ಇವರ ಸಮಾಧಿಯನ್ನು ತಿಂಥಣಿಯ ಮೌನೇಶ್ವರರ ಸಮಾಧಿಯಂತೆ ಹಿಂದೂ ಮತ್ತು ಮುಸ್ಲಿಂ ಪದ್ದತಿಗೆ ಅನುಗುಣವಾಗಿ ಕಟ್ಟಲಾಗಿದೆ.

ಜಡಿತಾತನವರಿಗೆ ಕೂದಲು ಉದ್ದ ಇರುವದರಿಂದ ಈ ಹೆಸರು ಕರೆದಿರಬಹುದು. ಅಷ್ಟೆ ಅಲ್ಲದೇ ಸೇಂದಿ ಕುಡಿಯುವುದು ಹಾಗೂ ಗಾಂಜಾ ಸೇದುವುದು ಇವರ ರೂಢಿಯಾಗಿತ್ತು. ಇದು ಸಾಧು ಸತ್ಪುರುಷರ ಪದ್ದತಿಯ ಒಂದು ಬಾಗವಾಗಿತ್ತು. ಮುಸ್ಲಿಂ ಧರ್ಮದಲ್ಲಿ ಹುಟ್ಟಿದರೂ ಹಿಂದೂವಾಗಿ ಮಾರ್ಪಾಡುಗೊಂಡ ಈ ತಾತನ ಮಹಿಮೆ ಅಶ್ಚರ್ಯದ ಸಂಗತಿ. ಎಲ್ಲಾ ದರ್ಗಾಗಳ ಉರುಸಿನಂತೆ ಇವರ ಉರುಸುಕೂಡ ಹೋಳಿ ಹುಣ್ಣಿಮೆಯ ಐದನೆಯ ದಿನದಂದು ಜರುಗುತ್ತದೆ.

**ಜಡೇತಾತನವರ ಪವಾಡಗಳು:**

ಜಡೆಪ್ಪ ತಾತನವರು ಪವಾಡ ಪುರುಷರು.

೧. ಒಂದು ದಿನ ಗಾಣದ ಕೆಲಸಕ್ಕಾಗಿ ಕೂಲಿ ಹೋಗಿದ್ದರು. ಈತನ ಒಂದು ತಪ್ಪಿನಿಂದಾಗಿ ಬೆಲ್ಲವನ್ನು ತೆಗೆದು ಈತನ ಮೈಮೇಲೆ ಒಗೆದಾಗ ಆ ಬೆಲ್ಲ ಇವರ ದೇಹದ ಮೇಲೆ ಹೂ ಆಗಿ ಬಿತ್ತಂತೆ.

೨. ಇದೆ ರೀತಿ ಈತನನ್ನು ಕುದುರೆ ಮೇಲೆ ಮೆರವಣಿಗೆ ಪ್ರತಿ ವರ್ಷ ಮಾಡಲಾಗುತ್ತಿತ್ತು. ಕುದುರೆಯ ಮೇಲೆ ಮೆರವಣಿಗೆ ಮಾಡುಬೇಕೆಂದು ಸಿದ್ದತೆಯಲ್ಲಿರುವಾಗ ಆನೆಗೊಂದಿಯ ಈತನ ಶಿಷ್ಯರೊಬ್ಬರು ಈತನ ಮೆರವಣಿಗೆಗೆ ಆನೆಯನ್ನು ಕಳುಹಿಸಿದ ಸುದ್ದಿ ಅಂತರಂಗದಲ್ಲಿ ಗೊತ್ತಾಗಿತ್ತಂತೆ. ಇದನ್ನು ಭಕ್ತ ಸಮೂಹಕ್ಕೆ ತಿಳಿಸಿದಾಗ ಆಶ್ಚರ್ಯಗೊಂಡರಂತೆ.

೩. ಜಡೆತಾತನವರು ಆನೆಗೊಂದಿ ಸಂಸ್ಥಾನಕ್ಕೆ ಭಿಕ್ಷಾಟನೆಗಾಗಿ ಹೋದಾಗ ಅಲ್ಲಿನ ಮಹಿಳೆಯೊಬ್ಬಳು ಗರ್ಭಧರಿಸಿದ್ದಳಂತೆ. ಆಕೆ ಈ ತಾತನ ಮೇಲೆ ಅಪವಾದ ಹೊರಿಸಿದಳಂತೆ. ಆಗ ಅಲ್ಲಿರುವ ಜನ ಈ ತಾತನನ್ನು ಹುಡುಕಿಕೊಂಡು ದರ್ಗಾಕ್ಕೆ ಬಂದು ವಿಚಾರಿಸಲಾಗಿ ತಾತನು ತನ್ನ ಶಿಶ್ನಕ್ಕೆ ರಿಂಗ್ ಧರಿಸಿ ತಾನೊಬ್ಬ ಬ್ರಹ್ಮಚಾರಿಯೆಂಬುದನ್ನು ತೋರಿಸಿದನು.

೪. ಒಂದು ದಿನ ಈ ತಾತನನ್ನು ಪರೀಕ್ಷಿಸಬೇಕೆಂದು ಬಾಳೆಹಣ್ಣಿನಲ್ಲಿ ವಿಷ ಬೆರೆಸಿದ ಬುತ್ತಿ ತಿನ್ನಲು ತಂದರು. ಇದು ಮೊದಲೇ ಗೊತ್ತಾಗಿ ಎಲ್ಲಾ ಭಕ್ತಾದಿಗಳನ್ನು ಕರೆಸಿ ಬಾಳೆಹಣ್ಣಿನಲ್ಲಿ ವಿಷ ಬೆರೆಸಿ ತಂದ್ದಿದ್ದಾರೆ. ಭಕ್ತರು ಕೊಟ್ಟ ಬಾಳೆಹಣ್ಣನ್ನು ನಾನು ತಿನ್ನಲೇಬೇಕೆಂದು ಎಲ್ಲಾ ಭಕ್ತರಿಗೆ ತಿಳಿಸಿ, ತಿಂದು ಐಕ್ಯವಾದರಂತೆ. ಐಕ್ಯವಾಗುವ ಮೊದಲೇ ನನ್ನನ್ನು ಹೂಳಿಟ್ಟ ಕುಣಿಯನ್ನು ಮೂರು ದಿನಗಳ ನಂತರ ನೋಡರಿ ಎಂದು ಹೇಳಿದ್ದರಂತೆ.

೫. ಒಂದು ದಿನ ಭಕ್ತಾದಿಗಳ ಜೊತೆಯಲ್ಲಿ ದೇವಸ್ಥಾನದಲ್ಲಿ ಕುಳಿತಿರಲಾಗಿ ಅಲ್ಲಿಗೆ ಒಂದು ಹುಲಿ ಬಂದಿತು. ಆಗ ಭಕ್ತಾದಿಗಳು ಭಯಭೀತರಾದರು. ಆಗ ತಾತನವರು ಆ ಹುಲಿಯ ಬೆನ್ನು ಸವರಿ ಜನ ನಿನ್ನನ್ನು ನೋಡಿ ಹೆದರುತ್ತಾರೆ ನಡಿ ಎಂದಾಗ ಹುಲಿ ಸುಮ್ಮನೆ ಹೋಯಿತಂತೆ.

೬. ತಾತನವರು ತಪಸ್ಸು ಗೈಯುವ ಗವಿ ಸ್ಥಳದಲ್ಲಿ ಯಾವಾಗಲೂ ಸರ್ಪವಾಸವಾಗಿರುತ್ತಿತ್ತು. ತನ್ನ ಭಕ್ತಾಧಿಗಳಿಗೆ ಗವಿಯಲ್ಲಿ ತೊಂದರೆಯಾಗುತ್ತದೆ ಹೋಗು ಎಂದಾಗ ಸರ್ಪ ಮಾಯವಾಗಿ ಹಣ್ಣು-ಹಂಪಲಗಳಾಗಿ ಇರುತ್ತಿದ್ದವು ಎಂದು ಹೇಳುತ್ತಾರೆ. ಬಿಡಿ ದಿನಗಳಲ್ಲಿ ಈ ಮಠದ ಸುತ್ತಾ ತಾತನನ್ನು ಹೊರುತುಪಡಿಸಿದರೆ, ಯಾರು ಇರುತ್ತಿರಲಿಲ್ಲ. ಭಕ್ತರು

ಬಂದಾಗ ಬಿಸಿಯಾದ ಸಂಗಟಿ ಸಾರು ಊಟಕ್ಕೆ ಸಿಗುತ್ತಿತಂತೆ. ಇವರು ತಪಸ್ಸು ಗೈಯುತ್ತಿರವಾಗ ಕರಡಿಯೊಂದು ಬಂದು ಈ ತಾತನಿಗೆ ನಮಸ್ಕರಿಸಿ ಹೋಯಿತಂತೆ.

"ಭಾಗ್ಯನಗರದ ವ್ಯಕ್ತಿಯೊಬ್ಬರಿಗೆ ಮಕ್ಕಳು ಆಗಿರಲಿಲ್ಲ. ಆಗ ಜಡೆ ತಾತನ ಆರ್ಶೀವಾದದಿಂದ ಮಕ್ಕಳು ಆದವು ಎಂದು ಅಲ್ಲಿ ವ್ಯಕ್ತಿಯೊಬ್ಬರು ಹೇಳಿದ್ದಾರೆ. ಜಡೆಪ್ಪ ತಾತ ಮಕ್ಕಳ ಸಂತಾನ ಹೇಗೆ ಕೋಡುತ್ತಾನೆ ನೋಡೋಣ ಎಂದು ಪರೀಕ್ಷೆ ಮಾಡವುದರ ಸಲುವಾಗಿ ಆ ಊರಿನ ಒಬ್ಬನು ಸೀರೆಯನ್ನು ಧರಿಸಿ ಬಂದು ಕೇಳಿದಾಗ, ತಾತನವರು ಆರ್ಶೀವದಿಸಿದರಂತೆ. ಆತನು ಗರ್ಭಿಣಿಯಾಗಿ ಬೆನ್ನಿನ ಮೂಳೆಯ ಭಾಗದಿಂದ ಮಗುವಾಯಿತೆಂದು ನೋಡಿದ ಅಜ್ಜನೊಬ್ಬನು ಹೇಳಿದ್ದಾನೆ."[೧೨]

ಹೀಗೆ ಪವಾಡಪುರುಷರಾದ "ಜಡೆಪ್ಪ ತಾತನವರು ಕೋಮು ಸೌಹಾರ್ದತೆಯ ಹರಿಕಾರರಾಗಿ ಕಾಣಿಸಿಕೊಂಡಿದ್ದಾರೆ. ಈ ಮಠದಿಂದ ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಸೋಮಲಾಪುರದ ಅಂಬಾಭವಾನಿ ಹಾಗೂ ಇಲಕಲ್ ದರ್ಗಾಕ್ಕೆ ಜಾತ್ರೆ ಸಂದರ್ಭದಲ್ಲಿ ಪ್ರಸಾದವನ್ನು ತೆಗೆದುಕೊಂಡು ಹೋಗುತ್ತಾರೆ. ಮರಳಿ ಅಲ್ಲಿಂದ ಬಂದು ಈ ಮಠದಲ್ಲಿ ಕೋಳಿಯನ್ನು ಬಲಿ ಕೊಟ್ಟು ಅಂಬಮ್ಮನನ್ನು ಮಾಡುತ್ತೆವೇಂಬ, ಈ ಸಂಪ್ರದಾಯ ಅಲ್ಲಿಂದ ಇಲ್ಲಿಯವರೆಗೆ ನಡೆದುಕೊಂಡು ಬಂದಿದೆ ಎಂದು ಜನರು ಹೇಳುತ್ತಾರೆ."[೧೩]

ಈ ತಾತನವರು ಐಕ್ಯವಾದ ನಂತರ ಶಿಷ್ಯರಾದ ರಾಮದಾಸ ಅವರು ಮಠದ ನಿರ್ಮಾಣಕ್ಕಾಗಿ ದುಡಿದಿದ್ದಾರೆ. ಇವರ ನಂತರದಲ್ಲಿ ಶಿಷ್ಯರಾದ ಯಮನೂರುಸ್ವಾಮಿ ನೀರಿನಿಂದ ದೀಪ ಉರಿಸಿದ್ದು, ಗುಡಿ ಕಟ್ಟಿಸಿದ ಕಾರಣಕ್ಕಾಗಿ ವಡ್ಡರು ಹಣ ಕೇಳಿದಾಗ, ತಮ್ಮಲ್ಲಿ ಹಣವಿಲ್ಲವೆಂದರೂ, ಕೇಳದ ವಡ್ಡರು ಪೀಡಿಸಿದಾಗ, ತಮ್ಮ ಖಾಲಿಯಿದ್ದ ಜೋಳಿಗೆಯಲ್ಲಿ ಕೈಯಿಟ್ಟಾಗ ವಡ್ಡಗೆ ಬೇಕಾದಷ್ಟು ಹಣ ಸಿಕ್ಕಿದ್ದನ್ನು ನೋಡಿ ವಡ್ಡರು ಕೈಮುಗಿದರಂತೆ. ಹೀಗೆ ರಾಮದಾಸರು ತಮ್ಮದೇ ಆದ ಪವಾಡಗಳನ್ನು ಮಾಡಿದ್ದಾರೆ. ಇತ್ತೀಚಿಗೆ ಗ್ರಾಮದಲ್ಲಿ ಜಡೇಸ್ವಾಮಿ ಕ್ಷೇಮಾಭಿವೃದ್ಧಿ ಯುವಕ ಮಂಡಳಿಯನ್ನು ಸ್ಥಾಪಿಸಲಾಗಿದೆ.

**ಜಡೇತಾತ ಮಠದ ವೈಶಿಷ್ಟಗಳು**

೧. ಇವರು ಪವಾಡ ಪುರುಷರು. ಇವರ ಪವಾಡಗಳು ಜನಮನದ ಮನಸ್ಸಿನ ಮೇಲೆ ಪರಿಣಾಮ ಬೀರಿವೆ.

೨. ಗೊಳಸಂಗಿಯ ವೀರನಗೌಡ ಎಂಬುವರು ಔದ್ಯೋಗಿಕ ವ್ಯವಹಾರಕ್ಕಾಗಿ ಭಾರಿ ಮೊತ್ತದ ಹಣವನ್ನು ತೊಡಗಿಸಿ, ವ್ಯವಹಾರದಲ್ಲಿ ಅಷ್ಟೆ ನಷ್ಟವನ್ನು ಅನುಭವಿಸಿದರು. ಈ ದರ್ಗಾದ ಜಡೇಶಾತನನ್ನು ಸ್ಮರಿಸಿಕೊಂಡು ತನ್ನ ವ್ಯವಹಾರದಲ್ಲಿ ಆದ ನಷ್ಟವನ್ನು ತುಂಬಿಕೊಡಿ, ಅದೇ ವ್ಯವಹಾರದಲ್ಲಿ ತನಗೆ ಉತ್ತಮ ವ್ಯಾಪಾರ ಒದಗಿಸಿ ತನ್ನ ಉತ್ತಮ ಬದುಕಿಗೆ ದಾರಿ ತೋರಿಸಿ ಕೊಟ್ಟಲ್ಲಿ ತನ್ನ ಜೀವನ ಪರ್ಯಾಂತರ ತಾತನ ಜಾತ್ರೆಗೆ ನಡೆದುಕೋಳ್ಳುತ್ತೆನೆಂದು ಹರಕೆ

ಸಲ್ಲಿಸಿದನಂತೆ. ಈತನ ಹರಕೆಯು ಸುಲಲಿತವಾಗಿ ನೆರವೇರಿದ್ದು, ವ್ಯವಹಾರ ಸುಧಾರಣೆಗೊಂಡ ಕಾರಣ ಪ್ರತಿವರ್ಷ ತಾತನ ಜಾತ್ರೆಗೆ ಬರುತ್ತಿದ್ದೇನೆ ಎಂದು ಜಾತ್ರೆಯ ದಿನದಂದು ಸಂದರ್ಶನದ ಸಮಯದಲ್ಲಿ ತಿಳಿಸಿದ್ದಾನೆ.

೩. ಕಿಡದಾಳ ಗ್ರಾಮದ ಈರಪ್ಪ ಮತ್ತು ಸಂಗವ್ವ ಎಂಬ ದಂಪತಿಗಳು ಮದುವೆಯಾಗಿ ಏಳು ವರ್ಷ ಕಳೆದರೂ, ಮಕ್ಕಳಾಗಿರಲಿಲ್ಲ. ಈ ತಾತನ ಮಠಕ್ಕೆ ಹನ್ನೊಂದು ಅಮವಾಸಿ ನಡೆದು ಕೊಂಡಾಗ ಮಕ್ಕಳ ಫಲ ಸಿಕ್ಕಿತೆಂದು ಹೇಳಿದ್ದಾರೆ.

೪. ಬಂಡಿ ಹರಲಾಪೂರದ ದೊಡ್ಡರಂಗಯ್ಯನು ತನ್ನ ನಾಲ್ಕು ಎಕರೆ ಭೂಮಿಯ ವ್ಯಾಜ್ಯವೊಂದರಲ್ಲಿ ಹಲವು ವರ್ಷಗಳ ಕಾಲ ಪರಿಹಾರ ಕಾಣದಿದ್ದರಿಂದ, ನನ್ನ ಭೂಮಿ ನನಗೆ ಸಿಗಲೆಂದು ಜಡೆತಾತನವರ ಸ್ಮರಣೆ ಮಾಡಿ ಹರಕೆ ಹೊತ್ತಿದ್ದನು. ತಾತನ ಆಶೀರ್ವಾದದಿಂದಾಗಿ ತನ್ನ ಭೂಮಿ ತನಗೆ ದಕ್ಕಿತ್ತೆಂದು ಸಂದರ್ಶನ ಸಮಯದಲ್ಲಿ ಹೇಳಿದ್ದಾನೆ.

**ಯಲಬುರ್ಗಾ ತಾಲ್ಲೂಕು**

“ಯಲಬುರ್ಗಾವು ಬಹಳ ಪ್ರಾಚೀನ ಕಾಲದ ಐತಿಹ್ಯಗಳನ್ನು ಹೊಂದಿದೆ. ಇಟಗಿಯ ಮಹಾದೇವ ದೇವಾಲಯ ‘ದೇವಾಲಯಗಳ ಚಕ್ರವರ್ತಿ’ ಎಂದೆನಿಸಿದೆ. ಇದು ಶಿಲ್ಪ ಕಲೆಗೆ ಈ ಜಿಲ್ಲೆಗೆ ಕೊಡುಗೆಯಾಗಿದೆ. ಮಹಾದೇವ ದಂಡನಾಯಕ ನಾರಾಯಣಯ್ಯ ಚಂದ್ರಿಕಾಂಬೆಯರ ಮಗನು ಕ್ರಿ.ಶ.೧೧೧೨ ರಲ್ಲಿ ಕಟ್ಟಿಸಿದನು. ಅದರ ಮುಂದಿನ ಪುಷ್ಕರಣಿ ಈಗಲೂ ಇದೆ. ವಿದ್ಯಾಕೇಂದ್ರ, ಆಗ್ರಹಾರ ಕುಕನೂರು ೩೦ರಲ್ಲಿ ಕಲ್ಲೇಶ್ವರ, ನವಲಿಂಗೇಶ್ವರ, ಬಳ್ಳೇಶ್ವರ, ಬಿಂದು ಮಾಧವ, ಮಲ್ಲಿಕಾರ್ಜುನ ಮತ್ತು ಜೇಷ್ಠಾದೇವಿ (ಮಹಾಮಾಯೆ) ಮಂದಿರಗಳು ಪ್ರೇಕ್ಷಣೀಯವಾಗಿವೆ. ಇದು ಕೂಡ ಅಗ್ರಹಾರ; ವಿದ್ಯಾಕೇಂದ್ರ. ಕಲ್ಲೂರಿನ ಕಲ್ಲೇಶ್ವರ, ಸೋಬನೇಶ್ವರ, ಕಲಿದೇವರ ದೇವಾಲಯಗಳಿವೆ. ಯಲಬುರ್ಗಾದ ಸಿದ್ದೇಶ್ವರ ದೇವಾಲಯ, ಚೌಕಿಮಠ, ಮುಧೋಳದ ತ್ರಿಲಿಂಗೇಶ್ವರ, ಮಲ್ಲಿಕಾರ್ಜುನ ದೇವಸ್ಥಾನ, ಸಮಗಾರ ಚನ್ನನನ್ನು ಕುರಿತಾದ ವೀರಗಲ್ಲು, ಸಂಕನೂರಿನ ಮಳಲೇಶ್ವರ ದೇವಾಲಯಗಳು ಪ್ರಾಚೀನ ಕಾಲದವಿದ್ದು, ಸುಂದರವಾಗಿವೆ.”[೪]

**ಹಜರತ್ ಹುಸೇನ್ ಷಾಹವಲ್ಲಿ ದರ್ಗಾ :**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ **ತಳಕಲ್** ಗ್ರಾಮದಲ್ಲಿ ಈ ದರ್ಗಾವಿದೆ. ಹಜರತ್ ಹುಸೇನ್ ಷಹಾವಲಿ ಎಂಬ ಸೂಫಿ ಸಂತರ ಮೂಲ ಹೆಸರು ಫಕೀರಸ್ವಾಮಿ. ಈತನ ತಂದೆ – ತಾಯಿ ಹೆಸರುಗಳು ನಿಖರವಾಗಿ ತಿಳಿದುಬಂದಿಲ್ಲ. “ಈ ದರ್ಗಾದ ಇತಿಹಾಸ ೧೨೯ ವರ್ಷ. ಈ ದರ್ಗಾಕ್ಕಿಂತ ಮೊದಲು ಈ ಜಾಗ ಆ ಊರಿನ ಗೌಡರದು. ತಮ್ಮ ೪ ಎಕರೆ ಭೂಮಿಯಲ್ಲಿ ೨ ಎಕರೆ ೩೪ ಗುಂಟೆ ಭೂಮಿಯನ್ನು ಈ ಸೂಫಿ ಸಂತನ ಗೋರಿಗಾಗಿ ಧಾನವಾಗಿ ನೀಡಿದರು. ನಂತರದಲ್ಲಿ ಅದೇ ಊರಿನ [illegible]ನಗೌಡನ ಮಗಳೂ ದರ್ಗಾದ ಕಮಾನುಗಳನ್ನು ಕಟ್ಟಿಸುವುದರ ಮೂಲಕ ಹಿಂದೂ ಮತ್ತು ಮುಸ್ಲಿಂ

ಧರ್ಮಗಳ ನಡುವೆ ಸೌಹಾರ್ದತೆಯನ್ನು ಬೆಳೆಸಿದ್ದಕ್ಕೆ ಸಾಕ್ಷಿಯಾಗಿದ್ದಾರೆ. ಪ್ರಸ್ತುತ ೨೦೦೯ ನೇ ಇಸ್ವಿಗೆ ಅರಬ್ಬೀ ಪಂಚಾಂಗದ ಪ್ರಕಾರ ಹಿಜರಿನ್ ಶಿಕೆ ೧೪೨೯ ಆಗುತ್ತದೆ. ಅಂದರೆ ೩೦ ನೇ ಉರುಸು ಎಂದರ್ಥ. ಇತ್ತೀಚಿಗೆ ೩೦ ವರ್ಷವುಳ್ಳ ಈ ದರ್ಗಾವನ್ನು ನೋಡಿಕೊಂಡ ಅರ್ಚಕರು ಒಂದೇ ತಲೆಮಾರಿನವರಿರುತ್ತಾರೆ ೧೫ .

"ಈ ದರ್ಗಾದ ಕುರಿತು ಜನರಲ್ಲಿರುವ ನಂಬಿಕೆಗಳು ತಳಕಲ್ ಗ್ರಾಮದಿಂದ ಬಾಣಾಪುರಕ್ಕೆ ಹಜರತ್ ಷಹಾರವರು ಹೋಗುತ್ತಿದ್ದಾಗ ಅಲ್ಲೇ ಸಮೀಪವಿರುವ ಭಾವಿಯಲ್ಲಿ ತನ್ನ ಪರಮ ಭಕ್ತನಾದ ಕುರುಬರ ನಿಂಗಪ್ಪನು ಸ್ನಾನ ಮಾಡುತ್ತಿದ್ದ. ಗುರುವನ್ನು ಕಂಡ ನಿಂಗಪ್ಪ ಕುಡಿಯಲು ನೀರು ತಂದು ಕೊಟ್ಟ ಈತನ ಭಕ್ತಿಯನ್ನು ಕಂಡ ಗುರು ಸಂತೋಷಗೊಂಡು ಆಶೀರ್ವಧಿಸಿ, ಹೀಗೆ ಹೇಳಿದರಂತೆ, "ನೀನು ನಿನ್ನ ಮಕ್ಕಳು, ಮೊಮ್ಮಕ್ಕಳು, ಮರಿಮೊಮ್ಮಕ್ಕಳು ಹೀಗೆ ನಿನ್ನ ವಂಶವಿರುವವರೆಗೂ ನನಗೆ ಅವಶ್ಯವೆನಿಸಿದಾಗಲೆಲ್ಲಾ ಸ್ನಾನಕ್ಕೆ ನೀರು ಒದಗಿಸುವಂತಾಗಲಿ."[೧೬]

ಅಂದಿನ ಈ ಮಾತು ಈಗಿನ ಪ್ರತಿ ಉರುಸ್‌ನಲ್ಲೂ ಊರಿನ ಕುರುಬರ ನಿಂಗಪ್ಪನ ಮನೆಯಿಂದ ತಂದ ನೀರು, ಶ್ರೀಗಂಧ ಸಂತನ ಗೋರಿಯ ಮೇಲೆ ಏರಿಸಿದ ನಂತರವೇ ಉರುಸ್ ಆರಂಭವಾಗುತ್ತದೆ. ಅಷ್ಟೇ ಅಲ್ಲದೇ ಈ ಗೋರಿಯು ಒಂದು ವರ್ಷಕ್ಕೆ ಒಂದು ಗೋಧಿ ಕಾಳಿನಷ್ಟು ಎತ್ತರ ಬೆಳೆಯುತ್ತದೆಯೆಂಬ ಬಲವಾದ ನಂಬಿಕೆಯಿದೆ.

ಜಗತಿನಾದ್ಯಂತ ಪುಣ್ಯ ಪುರುಷರು, ಸಮಾಜ ಚಿಂತಕರು, ಬಾಳಿ ಬದುಕಿದ್ದಾರೆ. ಇವರಲ್ಲಿ ಪವಾಡ ಪುರುಷರೂ ಕೂಡ ಇದ್ದಾರೆಂಬುದಕ್ಕೆ ಹಜರತ್ ಹುಸೇನ್ ಷಹಾವಲಿಯವರೇ ಸಾಕ್ಷಿ.

**ಫಕೀರಸ್ವಾಮಿ ಅವರ ಪವಾಡಗಳು:**

೧. ಇವರು ನೀರಿಲ್ಲದ ಬಾವಿಯಲ್ಲಿ ನೀರು ತರಿಸಿದರಂತೆ. ಇದನ್ನು ನಂಬಲು ಅಸಾಧ್ಯವಾದ ಮಾತು, ಆದರೂ ಇದನ್ನು ಪವಾಡವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. 'ಈ ಮೌಲಾ ಹುಸೇನರು' ಮುಪ್ಪಾವಸ್ಥೆಯನ್ನು ತಲುಪಿ ಇವರು ತಳಕಲ್ ಗ್ರಾಮದಿಂದ 'ಭಾನಾಪೂರಕ್ಕೆ' ಹೋಗುವ ಕಾಲದಾರಿಯಲ್ಲಿ ಒಂದು ಬಾವಿಯಿದೆ (ಅದು ಈಗಲೂ ಇದೆ) ಅದಕ್ಕೆ 'ಪುರಾನ್ ಭಾವಿ' ಅಥವಾ 'ಪುರಾತತ್ಮ' ಎಂದು ಕರೆಯುತ್ತಾರೆ. ಆ ಭಾವಿಗೆ ಈ ಸಂತ ಸ್ನಾನ ಮಾಡಲು ಹೋದಾಗ ಈ ಸಂತನ ಪರಮ ಭಕ್ತನಾದ ಮಾಳೆಕೊಪ್ಪದ ಕುರುಬರ ನಿಂಗಪ್ಪ ಇವರು ಆ ಭಾವಿಯಲ್ಲಿ ಸ್ನಾನ ಮಾಡುತ್ತಿರುವ ಸಮಯದಲ್ಲಿ ಈ ಸಂತನಿಗೆ ನೀರು ತುಂಬಿಕೊಟ್ಟರು. ಆಗ ಈ ಸಂತನು ಹೇಳಿರುವಂತೆ ನೀನು ಒಂದು ದಿನ ನನ್ನ ಸ್ನಾನಕ್ಕೆ ನೀರು ತುಂಬಿಕೊಟ್ಟಂತೆಲ್ಲ. ನನ್ನ ಜೀವ ಇರುವವರೆಗೆ ನೀನು ನನ್ನ ಸ್ನಾನಕ್ಕೆ ನೀರು ತುಂಬಿಕೊಡು ನನ್ನ ಮರಣದ ನಂತರ ನೀನು ಈ ಭಾವಿಯಿಂದ ನೀರು ತಂದು ನನಗೆ ಸ್ನಾನ ಮಾಡಿಸು ನಂತರ ನಿನ್ನ ಮಕ್ಕಳು, ಮೊಮ್ಮಕ್ಕಳು ಎಲ್ಲರೂ ನನಗೆ ಸ್ನಾನ

ಮಾಡಿಸಬೇಕೆಂದು ವಚನ ನೀಡುವಂತೆ ಹೇಳಿದರಂತೆ ಅಂದಿನಿಂದ ಇಂದಿನವರೆಗೂ ಪ್ರತಿವರ್ಷಕ್ಕೊಮ್ಮೆ ನಡೆಯಲಿರುವ "ಈ ಸಂತನ 'ಉರುಸಿಗೆ' ಈ ಮನೆಯಿಂದಲೇ (ಕುರುಬರ ನಿಂಗಪ್ಪನ) ಗಂಧವನ್ನು ತಂದು ಇವರ ಗೋರಿಗೆ ಏರಿಸಿದ ನಂತರ ಉರುಸ್ ಗಂಧ ಹೊರಡುತ್ತದೆ ನಂತರ ಎಲ್ಲಾ ಭಕ್ತಾದಿಗಳು 'ಉರಸಿನ ದಿನ ಸಕ್ಕರೆಯನ್ನು ಸಂತನಿಗೆ ಅರ್ಪಿಸುತ್ತಾರೆ. ಹಜರತ್ ಮೌಲಾ ಹುಸೇನರೆಂದು ಅಥವಾ ಪಕೀರಸ್ವಾಮಿ ಎಂದು ಭಕ್ತಾದಿಗಳು ಕರೆಯುತ್ತಾರೆ. ಆದರೆ ಇವರ ಮೂಲ ಹೆಸರು "ಹಜರತ್ ಹುಸೇನ ಷಾಹವಲಿ ಮೌಲಾ"[೧೭] ಎಂಬುದು ಇವರ ಪೂರ್ಣ ಹೆಸರಾಗಿದೆ.

೨. ಮುಸ್ಲಿಂ ಕ್ಯಾಲೆಂಡರ ಪ್ರಕಾರ "ಹಿಜರಿಸನ್ ೧೩೦೦ ರಲ್ಲಿ ಪೈಗಂಬರ ವಾಸಿ (ಜನ್ನತಿ)ಯಾದರು. ನಂತರ ಇವರ ಫಕೀರಸ್ವಾಮಿ" ಯವರ ಬೇಡಿಕೆಯಂತೆ ಈ ತಳಕಲ್ ಗ್ರಾಮದ ಗೌಡ್ರು ನಾಲ್ಕು ಎಕರೆ ಭೂಮಿಯನ್ನು ಜಾತ್ರೆಗಾಗಿ ಮತ್ತು ಎರಡು ಎಕರೆ ಮೂವತ್ನಾಲ್ಕು ಗುಂಟೆ ಭೂಮಿಯನ್ನು ಇವರನ್ನು ದಪನ ಮಾಡಿದ ಸ್ಥಳಕ್ಕಾಗಿ ನೀಡಿದ್ದಾರೆ. ಈ ಸ್ಥಳದಲ್ಲಿ ಈ ಸಂತನ ಗೋರಿಯನ್ನು ಕಟ್ಟಿಸಲಾಗಿದೆ. ಈ ದರ್ಗಾದ ದ್ವಾರ ಬಾಗಿಲುಗಳನ್ನು ನೀಲನಗೌಡರ ಮಗಳು ಕಟ್ಟಿಸಿದ್ದಾಳೆ. ಏಕೆಂದರೆ, ಇವರಿಗೆ ಮಕ್ಕಳಿರಲಿಲ್ಲ. ಕಾರಣ ಈ ಸಂತನ ಹತ್ತಿರ ತಮಗೆ ಮಕ್ಕಳಾದರೆ ದರ್ಗಾಕ್ಕೆ ಕಮಾನು ಕಟ್ಟಿಸುವುದಾಗಿ ಬೇಡಿಕೊಂಡರು. ಮುಂದೆ ಇವರಿಗೆ ಮಕ್ಕಳಾದ್ದರಿಂದ ದರ್ಗಾದ ಎಡಭಾಗದಲ್ಲಿ ನೀಲನಗೌಡರ ಮಗಳು ಆ ಕಮಾನನ್ನು ಕಟ್ಟಿಸಿದಳು. ನಂತರ ಇವರು ದರ್ಗಾಕ್ಕೆ ಪ್ರವೇಶ ಬಾಗಿಲು ಮತ್ತು ಕಮಾನನ್ನು ಮುಸ್ಲಿಂ ಯುವಕನಾದ ಗೈಬುಸಾಹೇಬ ಗುಡಿ ಮತ್ತು ಅವರ ಕುಟುಂಬದವರು ಬಲಭಾಗದ ಕಮಾನನ್ನು ಕಟ್ಟಿಸಲಾಗಿದೆ."[೧೮]

ಈ ದರ್ಗಾದ ಒಳಗೆ ಪ್ರವೇಶಿಸಿದ ನಂತರ ದರ್ಗಾಕ್ಕೆ ಸುತ್ತಲೂ ಗೋಡೆಯನ್ನು ಕಟ್ಟಲಾಗಿದೆ. ನೆಲಕ್ಕೆ ಕಲ್ಲುಗಳನ್ನು ಹಾಕಿಸಲಾಗಿದೆ ಮತ್ತು ಈ ಸಂತನ ಗೋರಿಯ ಸುತ್ತಲೂ ಗೋಡೆಯನ್ನು ನಿರ್ಮಿಸಿದ್ದಾರೆ. ಗೋಡೆಯ ನಾಲ್ಕು ಭಾಗಕ್ಕೆ ಬಾಗಿಲುಗಳನ್ನು ಕಟ್ಟಿಸಲಾಗಿದೆ. ಈ ಸಂತನ ಗೋರಿಯನ್ನು ಮತ್ತು ಸುತ್ತಲಿನ ಗೋಡೆಯನ್ನು ನಯವಾದ ಕಲ್ಲಿನಿಂದ ನಿರ್ಮಿಸಲಾಗಿದೆ.

ಈ "ಫಕೀರಸ್ವಾಮಿ" ಗೋರಿ ವರ್ಷಕ್ಕೆ ಒಂದು ಗೋದಿ ಕಾಳಿನಷ್ಟು ಎತ್ತರವಾಗುತ್ತದೆ. ಎಂದು ನಂಬಿದ್ದಾರೆ. ಈ ಗೋರಿಯ ಸುತ್ತಲೂ ದರ್ಗಾ ನಿರ್ಮಿಸಿದರೂ ಅದರ ಮೇಲೆ ಯಾವುದೇ ಕಟ್ಟಡವನ್ನು ನಿರ್ಮಿಸಿಲ್ಲ ಏಕೆಂದರೆ, ಈತನು ತನಗೆ ನೆರಳು ಬೇಡ ಎಂದು ಹೇಳಿದ್ದನಂತೆ ಆದ್ದರಿಂದ ಆತನಿಗೆ ಬಿಸಿಲು ತಾಗುವಂತೆ ಕಿಂಡಿಯನ್ನು ಬಿಟ್ಟಿದ್ದಾರೆ. ಈ ದರ್ಗಾವನ್ನು ಶ್ರೀಯು. ನಾ.ಸಂ. ೧೮೫೭ ರಲ್ಲಿ ಕಟ್ಟಿಸಲಾಗಿದೆ"[೧೯] ಎಂದು ತಿಳಿದು ಬರುತ್ತದೆ.

ಇವರು ಹಿಜರಿಸನ್ ೧೩೦೦ರಲ್ಲಿ ಜಿನ್ನತ್ (ಮರಣ ಪೈಗಂಬರವಾಸಿ) ಯಾದರೂ ಹಿಜರಿ ಅರಬ್ಬ ಕ್ಯಾಲೆಂಡರ್ ಪ್ರಕಾರ ಹಿಜರಿಸನ್ ೧೪೨೯ ಆಗುತ್ತದೆ. ಅಂದರೆ ೨೦೦೮ರಲ್ಲಿ ಮಾಡಿದ ಇವರ ಉರುಸು ೧೨೯ನೇ ಉರುಸು ಆಗಿದೆ. ಇದರ ಪ್ರಕಾರ "ಹಜರತ್ ಹುಸೇನ ಷಾಹವಲಿ ಮೌಲಾ ದರ್ಗಾ ತಳಕಲ್" ಇವರ ಉರುಸು ಅತ್ಯಂತ ವೈಭವದಿಂದ ಮೂರು ದಿನದವರೆಗೆ ಜರುಗುವುದು.

"ಇದೇ ಶ್ರೀ ಶಕೆ ೧೯೩೦ ನೇ ಸರ್ವಧಾರಿನಾಮ ಸಂವತ್ಸರ ಪ್ರಕಾರ

೨೪-೪-೨೦೦೮ ಏಪ್ರೀಲ್ -೨೦೦೮ ಗುರುವಾರ ಗಂಧ

೨೫-೪-೨೦೦೮ ಏಪ್ರೀಲ್-೨೦೦೮ ಶುಕ್ರವಾರ ಉರುಸು

೨೬-೪-೨೦೦೮ ಏಪ್ರೀಲ್-೨೦೦೮ ಶನಿವಾರ ಜಿಯಾರತ್"

ಮತ್ತು ಈ ಸಂತನ ಭಕ್ತಾದಿಗಳು ಅಮವಾಸ್ಯೆಗೊಮ್ಮೆ ಬೇರೆ ಬೇರೆ ಊರುಗಳಿಂದ ಬರುತ್ತಾರೆ. ಆ ದಿನ ದರ್ಗಾದಲ್ಲಿ ಆ ರಾತ್ರಿಯನ್ನು ಕಳೆದು ಮರುದಿನ ತಮ್ಮ ಊರಿಗೆ ಹೋಗುವ ಪದ್ಧತಿ ಇದೆ. ಜನರಲ್ಲಿ ಸಂತನ ಬಗ್ಗೆ ಅತಿಯಾದ ವಿಶ್ವಾಸವಿದ್ದು ತಮ್ಮ ನಂಬಿಕೆಗಳನ್ನು ಈಡೇರಿಸುತ್ತಾನೆ ಎನ್ನುವ ಭರವಸೆ ಇದೆ.

**ಫಕೀರಸ್ವಾಮಿ ಅವರ ವ್ಯಕ್ತಿತ್ವ :**

"ಹಜರತ್ ಹುಸೇನ ಷಹಾವಲಿ ಮೌಲಾ" ರವರು ಮೂಲಃ ತಳಕಲ್‌ನವರು. ಇವರೊಬ್ಬ ಸನ್ಯಾಸಿ ಅಥವಾ ಸಂತ ಆದ್ದರಿಂದ ತಮ್ಮ ವಿಶೇಷವಾದ ಅಧ್ಯಾತ್ಮಿಕ ಶಕ್ತಿಯಿಂದ ಜನರ ಮನೋಭಾವನೆಗೆ ಸ್ಪಂದಿಸಿದ್ದರಿಂದ ಜನರ ಅಂತರಾತ್ಮದಲ್ಲಿ ಕಾಲಕ್ರಮೇಣ ಇವರ ಬಗ್ಗೆ ಭಕ್ತಿ ಮೂಡಿದ್ದರಿಂದ ಇವರೊಬ್ಬ ದೇವತಾ ಸ್ವರೂಪ ಸಂತನೆಂದು ನಂತರ ಇವರೇ ದೇವರೆಂದು ಇವರ ಗೋರಿಗೆ (ದರ್ಗಾಕ್ಕೆ) ತಿಂಗಳ ಅಮವಾಸ್ಯೆಗೆ ಮತ್ತು ವರ್ಷಕ್ಕೊಮ್ಮೆ ನಡೆಯುವ "ಉರುಸು"ಗೆ ಊರಿನ ಎಲ್ಲಾ ಧರ್ಮದ ಜನರು ಸೇರಿ ಅತ್ಯಂತ ವೈಭವದಿಂದ "ಭಾವೈಕ್ಯತಾ" ಮನೋಭಾವನೆಯಿಂದ ಉರುಸ್ ಆಚರಿಸುತ್ತಾರೆ. ಸಂತರು ಜೀವಿತಾವಧಿಯಲ್ಲಿ ಒಮ್ಮೆ ಸಣ್ಣ ಮಕ್ಕಳನ್ನು ಕರೆದು ಆ ಮಕ್ಕಳ ಕೈಯಲ್ಲಿ ಕಲ್ಲುಗಳನ್ನು ಕೊಟ್ಟರಂತೆ. ಸುತ್ತ ನೆರೆದಿರುವ ಜನ ಆಶ್ಚರ್ಯಚಕಿತರಾಗಿ ಇದನ್ನು ಕುರಿತು ಸಂತರನ್ನು ಪ್ರಶ್ನೆ ಮಾಡಿದಾಗ, ಮಕ್ಕಳ ಕೈಯಲ್ಲಿರುವ ಕಲ್ಲುಗಳು ಕಲ್ಲು ಸಕ್ಕರೆಯಾಗಿದ್ದವಂತೆ,"[೨೦] ಹೀಗೆ ಹಲವು ಪವಾಡಗಳನ್ನು ಮಾಡುತ್ತಾ ಬಂದಿರುವ ಈ ದರ್ಗಾದಸಂತರು ಎರಡೂ ಧರ್ಮಿಯರ ಸಹಬಾಳ್ವೆಗೆ ಸಾಕ್ಷಿಯಾಗಿದ್ದಾರೆ.

**ಯಮನೂರ ಸ್ವಾಮಿ ದರ್ಗಾ :**

ಮುರುಡಿ ಎಂಬುದು ಯಲಬುರ್ಗಾ ತಾಲೂಕಿನ ಒಂದು ಚಿಕ್ಕ ಹಳ್ಳಿ. ಈ ಗ್ರಾಮದಲ್ಲಿ ನೆಲೆಸಿದ್ದ ಬೀಯಮ್ಮ, ತಾಜುದ್ದೀನ್ ಎಂಬ ದಂಪತಿಗಳ ಮಗನಾಗಿ ದಾದೆಸಾಬ ಜನಿಸಿದರು. ಇವರು ಸೂಫಿ ಸಂತರಲ್ಲಿ ಒಬ್ಬರಾಗಿ ಬದುಕಿ ಬಾಳಿದವರು. ಇವರು ನೆಲೆಸಿದ್ದ ಸ್ಥಳವನ್ನು ಯಮನೂರಸಾಬ ದರ್ಗಾವೆಂದು ಕರೆದರು. ಎಲ್ಲಾ ಧರ್ಮಿಯರ ತಾಣವಾಗಿರುವ ಈ ದರ್ಗಾದ ಬಗೆಗೆ ಪೂರ್ವ

ಆಧಾರಿತ ಲಿಖಿತವಿಲ್ಲ. ಇತಿಹಾಸದ ಪ್ರಕಾರ ಒಂದು ಸಾವಿರ ವರ್ಷಗಳಿಗಿಂತಲೂ ಹಿಂದೆ ಈ ದರ್ಗಾವು ಇತ್ತೆಂದು ತಿಳಿದುಬಂದಿದೆ.

ಈ ದರ್ಗಾಕ್ಕೆ ಭೂಮಿಯನ್ನು ನೀಡಿದವರು ದೇಸಾಯಿ ಕುಟುಂಬದ ಕೃಷ್ಣಪ್ಪಯ್ಯ ಎಂಬುವವರು. ಆದರೆ ದರ್ಗಾದ ಕಟ್ಟಡದ ನಿರ್ಮಾಣಕ್ಕೆ ಬಂದಾಗ ಭಕ್ತರ ಕಾಣಿಕೆಗಳಿಂದಲೇ ನಿರ್ಮಾಣವಾಗಿರಬಹುದೆಂದು ತಿಳಿದು ಬಂದಿದೆ. ಈ ದರ್ಗಾದ ಉರುಸ್ ಆಚರಣೆಯು ಎಂದಿನಿಂದ ನಡೆದುಕೊಂಡು ಬಂದಿದೆ ಎಂಬುದಕ್ಕೆ ಯಾವ ಆಧಾರಗಳೂ ದೊರೆಯುವುದಿಲ್ಲ. ಆದರೆ ತಾಜುದ್ದೀನ್, ದಾದಾಸಾಹೇಬ್, ಶಮೀರಸಾಬ್ ಪ್ರಸ್ತುತ ಇಪ್ಪತ್ತೈದು ವರ್ಷಗಳಿಂದ ಭಾಷಾ ಸಾಹೇಬರು ನಡೆಸಿಕೊಂಡು ಬಂದಿದ್ದಾರೆ. ಎಲ್ಲಾ ಧರ್ಮದವರು ಭಕ್ತಿ ಪೂರ್ವಕವಾಗಿ ನೀಡಿರುವ ಕಾಣಿಕೆಯಿಂದಲೇ ದರ್ಗಾದ ಅಭಿವೃದ್ಧಿಯಾಗುತ್ತಾ ನಡೆದಿದೆ. ಜನರಿಗೆ ಚರ್ಮರೋಗ, ಜಡ್ಡುಜಾಪತ್ರೆಗಳು ಬಂದಾಗ ಯಮನೂರಸ್ವಾಮಿಗೆ ಬೇಡಿಕೊಳ್ಳುತ್ತಾರೆ. ಅಷ್ಟೇ ಅಲ್ಲದೇ ದರ್ಗಾದ ಗದ್ದುಗೆ ಸ್ಥಳದಲ್ಲಿ ನಿಂಬೆಹಣ್ಣನ್ನು ಇಟ್ಟು ಭೂತವನ್ನು ಬಿಡಿಸುವ ಕೆಲಸವನ್ನು ಭಾಷಾ ಸಾಬರು ಮಾಡುತ್ತಲೇ ಬಂದಿದ್ದಾರೆ. ಪ್ರತೀ ಗುರುವಾರ ಹಾಗೂ ಉರುಸ್‌ನ ದಿನದಂದು ಭಕ್ತರಿದ ಕಾಳು ಕಡಿ ಮತ್ತು ದೇಣಿಗೆಯನ್ನು ಸಂಗ್ರಹಿಸುತ್ತಾರೆ.

ಹಿಂದೂ, ಮುಸ್ಲಿಂ ಸೇರಿದಂತೆ ಎಲ್ಲಾ ದೈವದವರು ಕೂಡಿ ದರ್ಗಾದ ಉರುಸ್‌ನ ದಿವಸ ಗಂಗಾಸ್ಥಳಕ್ಕೆ ಹೋಗಿ ಮಡಿನೀರು ತರುತ್ತಾರೆ. ಹಾಗೇ ಕೃಷ್ಣಪ್ಪಯ್ಯ ದೇಸಾಯಿ ಅವರ ಮನೆಯಿಂದ ಗಂಧವನ್ನು ತರುವ ಸತ್‌ಸಂಪ್ರದಾಯ ಇವತ್ತಿಗೂ ಇದೆ. ಪ್ರತಿವರ್ಷ ಮಾರ್ಚ ತಿಂಗಳಲ್ಲಿ ನಡೆಯುವ ಉರುಸ್ ಮುಸ್ಲಿಂ ಪದ್ಧತಿಯ ನಿಯಮದ ಪ್ರಕಾರ ನಮಾಜು, ಹಿಂದೂ ಧರ್ಮದ ಪ್ರಕಾರ ಪೂಜೆ ಪುನಸ್ಕಾರಗಳೊಂದಿಗೆ ಜರಗುತ್ತದೆ. ಮೊದಲನೇ ದಿನ ಗಂಧ, ಎರಡನೆಯ ದಿವಸ ಉರುಸ್, ಮೂರನೆ ದಿನದಂದು ಉರಸ್ ನಡೆಯುತ್ತದೆ. ಅಂದರೆ ಹೋಳಿ ಹುಣ್ಣಿಮೆಯಾಗಿ ಐದನೆಯ ದಿನಕ್ಕೆ ಉರುಸ್ ಮಾಡುತ್ತಾರೆ. ಹೆಚ್ಚಿನ ಸಂಖ್ಯೆಯಲ್ಲಿ ಸೇರುವ ಇಲ್ಲಿನ ಜನರು ಕುರಿ, ಟಗರು ಮುಂತಾದ ಪ್ರಾಣಿಗಳನ್ನು ಬಲಿ ನೀಡುತ್ತಾರೆ. ಎಲ್ಲರೂ ಕೂಡಿ ಮಾಂಸದ ಅಡಿಗೆಯನ್ನು ಊಟ ಮಾಡುವುದರ ಮೂಲಕ ಸೌಹಾರ್ದತೆಯನ್ನು ಮೆರೆಯುತ್ತಾರೆ.

ಈ ದರ್ಗಾ ಕುರಿತು ಜನರು ಅತೀಯಾದ ನಂಬಿಕೆಯನ್ನು ಇಟ್ಟುಕೊಂಡು ತಮ್ಮ ರೋಗ-ರುಜಿನಗಳ ನಿರ್ವಹಣೆಗಾಗಿ ಯಾವ ಜಾತಿಯನ್ನದೇ ಎಲ್ಲರೂ ನಮಾಜು/ಪೂಜೆ ಮಾಡಿ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಅಪಾರ ಸಂಖ್ಯೆಯ ಭಕ್ತರ ಎದುರಿನಲ್ಲಿಯೇ ಉರುಸ್‌ನ ದಿನದಂದು ಎಣ್ಣೆಯ ಬದಲಾಗಿ ನೀರಿನಿಂದ ದೀಪವನ್ನು ಉರಿಸುತ್ತಾರೆ. ಅಷ್ಟೇ ಅಲ್ಲದೇ ಈ ದರ್ಗಾಕ್ಕೆ ಬರುವ ಹೆಚ್ಚಿನ ಭಕ್ತಾದಿಗಳೆಂದರೆ ಹಿಂದೂ ಧರ್ಮದ ಕುರುಬರು ಹಾಗೂ ಬ್ರಾಹ್ಮಣರು. ದರ್ಗಾಕ್ಕೆ ಬಂದಿರುವ ಬಡವರು ರೋಗಿಗಳು ಹಾಗೂ ಇತರರಿಗೆ ವಸತಿ ಮತ್ತು ಊಟದ ವ್ಯವಸ್ಥೆಯನ್ನು ಮಾಡುತ್ತಾರೆ. ಉರುಸ್‌ನ ಇಡೀ ರಾತ್ರಿ "ಸವಾಲು". ಪದಗಳನ್ನು ಹಾಡುತ್ತಾರೆ. ಸವಾಲು ಪದಗಳನ್ನು ಹಾಡಿದವರಿಗೆ ಬೆಳ್ಳಿಯ

ಕಡಗವನ್ನು ಹಾಕುವ ಪರಂಪರೆ ಇಂದಿಗೂ ಇದೆ. ಅಲ್ಲದೇ ಸಮಾಜಿಕ ಪೌರಾಣಿಕ ಮತ್ತು ಬಯಲಾಟಗಳಂತಹ ವಿವಿಧ ಕಾರ್ಯಕ್ರಮಗಳು ಪ್ರತೀ ವರ್ಷ ನಡೆಯುತ್ತವೆ. ಉರುಸ್ ಹಿಂದೂಗಳಿಗೆ ಜಾತ್ರೆಯಾಗಿ ಮಾರ್ಪಟ್ಟು ಎರಡೂ ಧರ್ಮದ ಜನರಿಗೆ ಒಂದು ರೀತಿಯ ಮನಸ್ಸನ್ನು ಉಲ್ಲಾಸಗೊಳಿಸುವಂತಹ ಕಾರ್ಯನಿರ್ವಹಿಸುತ್ತದೆ.

**ಯಮನೂರಸ್ವಾಮಿ ದೇವಸ್ಥಾನದ ನಿರ್ಮಾಣದ ಬಗೆಗೆ ಇರುವ ಮಾಹಿತಿ :**

"ಯಮನೂರ್ ಎಂಬ ಭಕ್ತನು 'ಬೆಣ್ಣೆ ಹಳ್ಳದಲ್ಲಿ' ಸ್ನಾನ ಮಾಡುತ್ತಿದ್ದನಂತೆ. ಆ ಸಂದರ್ಭದಲ್ಲಿ ತನ್ನ ಕಣ್ಣಿಗೆ ಬಿದ್ದ ಸುಂದರವಾದ ಕಲ್ಲನ್ನು ಮುರಡಿಗೆ ತಂದು ನಂತರದಲ್ಲಿ ಆ ಕಲ್ಲನ್ನು ತೆಗೆದುಕೊಳ್ಳಲು ಹೋದಾಗ ಆ ಕಲ್ಲಿನ ಮೇಲೆ ಮೂರುತಿ ರೂಪ ಮೂಡಿತ್ತಂತೆ. ಆಗ ಆ ಕಲ್ಲನ್ನು ಮರಳಿ ದಾದಸಾಹೇಬರು ಯಮನೂರನಿಗೆ ಕೊಡವುದಕ್ಕೆ ಹೋದಾಗ, ತೆಗೆದುಕೊಂಡ ಯಮನೂರಪ್ಪನು ಮುರಡಿಯ ಒಂದು ಹುತ್ತಿನಲ್ಲಿ ಹಾಕಿದ. ಆಗ ಹುತ್ತಿನಲ್ಲಿ ಇರುವ ಕಲ್ಲು ಪ್ರತ್ಯಕ್ಷ ರೂಪವನ್ನು ಪಡೆಯಿತು. ಅದನ್ನು ಕಂಡ ಭಕ್ತರು ಅಲ್ಲಿಯೇ ಗುಡಿಯನ್ನು ನಿರ್ಮಾಣ ಮಾಡಿದರಂತೆ. ಈ ಗುಡಿಯ ನಿರ್ಮಾಣದ ಸಂದರ್ಭದಲ್ಲಿ ಹೈದ್ರಾಬಾದ್ ನಿಜಾಮ್ ಸರ್ಕಾರ ಆಳ್ವಿಕೆಯಲ್ಲಿತ್ತು. ಇದನ್ನು ಗಮನಿಸಿದಾಗ ಯಮನೂರಪ್ಪನಿಗೆ ಮೊಹಲ್ಲಾ ಹುಸೇನ್ ಎಂಬುವವರು ಭಕ್ತರಾಗಿದ್ದರು. ಇವರಿಬ್ಬರು ಮದುವೆಯಾಗದೇ ಜೀವಂತವಾಗಿ ಸಮಾಧಿಯಾದರು. ಈ ದೃಷ್ಟಿಯಿಂದಲೇ ಈ ದರ್ಗಾದ ಗೋರಿಯ ಎಡಗಡೆ ಮೋಹಲ್ ಹುಸೇನ್ ಅವರ ಸಮಾಧಿ, ಬಲಗಡೆ ಯಮನೂರಪ್ಪ ಅವರ ಸಮಾಧಿಯನ್ನು ನಿರ್ಮಿಸಲಾಗಿದೆ"[30] ಎಂಬ ಅಂಶ ತಿಳಿದುಬಂದಿದೆ.

**ಕುದರಿಮೋತಿ ದರ್ಗಾ:**

ಯಲಬುರ್ಗಾ ತಾಲೂಕಿನ ಒಂದು ಚಿಕ್ಕ ಗ್ರಾಮ ಕುದರಿಮೋತಿ. ಇದು ಕೊಪ್ಪಳದಿಂದ ೨೬ ಕಿ.ಮೀ ದೂರುವಿರುವ ಕೋಮು ಸೌಹಾರ್ದತೆಯ ತಾಣವಾಗಿದೆ. ಇಲ್ಲಿ ಜರಗುವ ಮೋಹರಂ ಹಬ್ಬವು ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಮುದಗಲ್ ಮೋಹರಂ ಹಬ್ಬದ ವಿಶೇಷತೆಯನ್ನು ನೆನಪಿಸುತ್ತದೆ. ಈ ಸ್ಥಳದಲ್ಲಿ ಪ್ರತಿ ಮೋಹರಂ ಆಚರಣೆಯ ಸಂದರ್ಭದಲ್ಲಿ ರಾಜ್ಯದ ಅಲೆಮಾರಿ ಜನಾಂಗಗಳು ಒಂದೆಡೆ ಸೇರಿ ಹಬ್ಬವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಅಲೆಮಾರಿ ಜನಾಂಗಗಳಾದ ಹಗಲುವೇಷಗಾರರು, ಸುಡಗಾಡು ಸಿದ್ದರು, ಗೋಂದಳಿಗರು, ದುರ್ಗಮುರುಗಿಯರು ಮತ್ತು ಡೊಂಬರು ಹೀಗೆಯೇ ಹತ್ತೆಂಟು ಅಲೆಮಾರಿಗಳು ತಮ್ಮ ವಂಶ ಪರಂಪರೆಯ ವೇಷಗಳನ್ನು ಧರಿಸಿ ತಮ್ಮ ವೃತ್ತಿಯನ್ನು ಅನುಸರಿಸುವುದರ ಮೂಲಕ ಹರಕೆಯನ್ನು ಈ ದರ್ಗಾಕ್ಕೆ ತೀರಿಸುತ್ತಾರೆ.

ದೇಶದ ಹಬ್ಬಗಳ ಆಚರಣೆಗಳಲ್ಲಿ ಒಂದಾಗಿರುವ ಮೋಹರಂ ಉತ್ಸವವು ಜಾತಿಭೇದವನ್ನು ಮರೆತು ಆಚರಿಸಲ್ಪಡುತ್ತದೆ. ದೆಹಲಿ, ಬಿಹಾರ, ಗುಜರಾತ್‌ಗಳಲ್ಲಿ ವಾಸಮಾಡುವ ಅಲೆಮಾರಿ

ಸಮುದಾಯಗಳು ಇಲ್ಲಿಗೆ ಬಂದು ಹರಕೆ ತೀರಿಸುವುದರ ಮೂಲಕ ಹುಲಿವೇಷ, ಅಚ್ಚೋಳ್ಳಿಯಂತಹ ಹಲವು ವೇಷಗಳನ್ನು ಹಾಕಿ ಜನರ ಮನವನ್ನು ಸೆಳೆಯುತ್ತಾರೆ. ಈ ದರ್ಗಾವು ಕೇವಲ ಮುಸ್ಲಿಂ ಹಬ್ಬದ ಆಚರಣೆಯ ಸ್ಥಳವಾಗಿರದೇ ಹಿಂದೂ ಆಚರಣೆಗಳಾದ ಮಹಾನವಮಿ, ನಾಗರಪಂಚಮಿ ದಿನಗಳಂದೂ ಸರ್ವಜನಾಂಗದ ಪ್ರಾಮುಖ್ಯತೆಯ ತಾಣವಾಗಿ ಭಾವೈಕ್ಯತೆಯನ್ನು ಮೆರೆಯುತ್ತದೆ. ಅಷ್ಟೇ ಅಲ್ಲದೇ ಇಡೀ ಕೊಪ್ಪಳ ಜಿಲ್ಲೆಯ ಮೊಹರಂ ಹಬ್ಬದ ಸ್ಥಳಗಳಿಗಿಂತ ಇದು ಅಗ್ರಗಣ್ಯ ಸ್ಥಾನವಾಗಿ ನಿಲ್ಲುತ್ತದೆ. ಈ ಗ್ರಾಮದಲ್ಲಿ ಮೊಹರಂ ಹಬ್ಬದ ನಿಮಿತ್ತ ಪೂರ್ವಭಾವಿಯಾಗಿ ಮೂರು ತಿಂಗಳ್ ತಯಾರಿ ಆರಂಭವಾಗುತ್ತದೆ. ಮೂರನೇ ಅಮವಾಸ್ಯೆಯ ಮರುದಿನ ಚಂದ್ರ ಕಾಣಿಸಿದ ಕೂಡಲೇ ಗುದ್ದಲಿಯನ್ನು ಹಾಕಲಾಗುತ್ತದೆ. ಗುದ್ದಲಿ ಹಾಕುವದೆಂದರೆ ಹಲಾಯೀ ಕುಣಿಯನ್ನು ತೆಗೆಯುವುದು ಎಂದರ್ಥ. ಈ ಕುಣಿಯನ್ನು ತೆಗೆದ ಐದು ದಿನಗಳ ನಂತರ ಹತ್ತಿರವಿರುವ ಮಸೀದಿಯಲ್ಲಿ ದೇವರಗಳನ್ನು ಕೂರಿಸಲಾಗುತ್ತದೆ.

ಅಲೆಮಾರಿಗಳ ಹುಲಿಯ ವೇಷ ಹಾಗೂ ಅಚ್ಚಳ್ಳಿ ಇವು ಮೊಹರಂ ಹಬ್ಬದ ವಿಶಿಷ್ಟ ಆಚರಣಾ ಪದ್ದತಿಗಳಾಗಿವೆ. ಈ ವೇಷಗಳು ಹರಕೆಯ ಪ್ರತೀಕವಾಗಿ ಕಾಣಿಸಿಕೊಳ್ಳುತ್ತವೆ. ಯಾವುದೇ ವ್ಯಕ್ತಿ ತಮ್ಮ ಮನೆಯಲ್ಲಿ ಸಮಸ್ಯೆ ಉದ್ಬವಿಸಿದಾಗ ಮೊಹರಂ ದೇವರಿಗೆ ವೇಷವನ್ನು ಹಾಕಿ ಸಕ್ಕರೆ ಓದಿಸುವ ಮೂಲಕ ಹರಕೆಯನ್ನು ತೀರಿಸುತ್ತಾರೆ. ಈ ಪದ್ದತಿ ನಗರ ಪ್ರದೇಶಗಳಲ್ಲಿ ಕಾಣಸಿಗದಿದ್ದರೂ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಹುಲಿಯ ವೇಷ ಧರಿಸುವ ವ್ಯಕ್ತಿ ಮೈತುಂಬಾ ಹುಲಿಯ ಆಕಾರದ ಬಣ್ಣವನ್ನು ಬಳೆದುಕೊಂಡು ಹುಲಿಯ ಮುಖವಾಡವನ್ನು ಮುಖಕ್ಕೆ ಹಾಕಿಕೊಳ್ಳುತ್ತಾರೆ. ಸೊಂಟದ ಹಿಂದುಗಡೆ ಉದ್ದವಾದ ಬಡಿಗೆಯ ತುದಿಯಲ್ಲಿ ಬಣ್ಣದ ಹಾಳೆಗಳ ಕುಂಜವನ್ನು ಕಟ್ಟಲಾಗಿರುತ್ತದೆ. ಬಡಿಗೆಯ ಕೆಳಭಾಗಕ್ಕೆ ಒಂದು ಬಾಲವಿರುತ್ತದೆ. ಹುಲಿಯ ವೇಷದ ವ್ಯಕ್ತಿಯನ್ನು ಆಡಿಸುವ ವ್ಯಕ್ತಿ ಎಡಗೈಯಲ್ಲಿ ಬಿದಿರಿನ ಬಂಬು ಹಿಡಿದು, ಬಲಗೈಯಲ್ಲಿ ಹುಲಿಯ ಬಾಲವನ್ನು ಹಿಡಿದು ಹಲಗೆ ಶಬ್ದಕ್ಕೆ ತಕ್ಕಂತೆ ಬಡಿಸುತ್ತಾನೆ. ಇದು ಅಲ್ಲಿ ನೆರೆದಿರುವ ಭಕ್ತಾದಿಗಳ ಗಮನವನ್ನು ಸೆಳೆಯುತ್ತದೆ. ಇದು ಒಂದು ಕಡೆ ಕಂಡರೆ ಇನ್ನೊಂದು ಕಡೆ ಅಚ್ಚಳ್ಳಿ ವೇಷ ಧರಿಸಿರುವ ಇನ್ನೊಬ್ಬ ವ್ಯಕ್ತಿ ಮೈತುಂಬ ಎರಡು ಬೆರಳುಗಳ ಅಳತೆಯಲ್ಲಿ ಬಣ್ಣದ ಪಟ್ಟಿಯನ್ನು ಬಳೆದುಕೊಂಡು ತಲೆಯ ಮೇಲೆ ಬಣ್ಣದ ಚಿತ್ತಾರವಿರುವ ಟೋಪಿಯನ್ನು ಹಾಕಿಕೊಂಡು ಬಲಗೈಯಲ್ಲಿ ತೊಗಲಿನಿಂದ ಸುತ್ತಿದ ಬಡಗಿಯ ಆಕಾರದ ಚಪ್ಪಟೆಯನ್ನಿಡಿದುಕೊಂಡು ಕೊರಳಲ್ಲಿ ಗೆಜ್ಜೆಯನ್ನು ಹಾಕಿಕೊಂಡು ಜನರ ಗಮನವನ್ನು ತನ್ನ ಕಡೆ ಸೆಳೆದುಕೊಳ್ಳುತ್ತಾನೆ.

ಹಿಂದೂ ಮತ್ತು ಮುಸ್ಲಿಂರು ಭೇದ-ಭಾವವನ್ನು ಮರೆತು ಹರಕೆ ಹೊರುವ ಪದ್ದತಿಯಿದ್ದು, ಇದಕ್ಕೆ ಫಕೀರನಾಗುವುದು ಎಂದು ಅರ್ಥ. ಹಿಂದೂ ಮತ್ತು ಮುಸ್ಲಿಂರಲ್ಲಿ ಕೆಲವರು ಐದು ದಿನ

ಫಕೀರರಾದರೆ ಇನ್ನು ಕೆಲವರು ಮೂರು ದಿನ ಫಕೀರರಾಗುತ್ತಾರೆ. ಇದೇ ರೀತಿಯಲ್ಲಿ ಕಂಡು ಬರುವ ಇಲ್ಲಿನ ಮೊಹರಂ ಹಬ್ಬವು ಬಹು ವಿಶಿಷ್ಟತೆಯನ್ನು ಪಡೆದುಕೊಂಡಿದೆ.

"ಹುಸೇನ ಬಾಷಾರು ದೇವರಿಗೆ ಭಕ್ತರಾದ ಜನಸಮೂಹ ತಮ್ಮ ನಿರ್ಮಲ ಮನಸಿನಿಂದ ದರ್ಗಾಕ್ಕೆ ಜಾಗ, ಉರುಸ್ ನಡೆಯಲು ವಿಸ್ತಾರವಾದ ಬಯಲಿಗೆ ಪ್ರಯತ್ನ ನಡೆಸಿದ್ದರಿಂದ ಅಂದಿನಕೆರೆಯ ಜಾಗವು ದರ್ಗಾದ ಸ್ಥಳವಾಯಿತು. ಹಿಂದೇ ಇದು ಹಸುಗೂಸುಗಳ ಸ್ಮಶಾನವಾಗಿತ್ತು. ಅದೇ ಇಂದು ಮೊಹರಂನ ಪ್ರಸಿದ್ದ ಸ್ಥಳವಾಗಿ ಹೊರ ಹೊಮ್ಮಿದೆ. ಕುದರಿಮೋತಿ ಗ್ರಾಮದ ಬ್ರಾಹ್ಮಣ ಸಮುದಾಯದ ಸೋಮರಾಯರ ತಂದೆ ಭಾಳಾಜಿರಾವ್ ದೇಸಾಯಿ ಅವರು ೧೨೦ ವರ್ಷಗಳ ಹಿಂದೆ ಮಸೀದಿ ಕಟ್ಟಿಸಿದರು. ದೇವರ ಕೋಣೆಯನ್ನು ಇದೆ ಊರಿನ ಜಂಬಯ್ಯ ಸ್ವಾಮಿ ವಣಿಗೇರಿಯವರು ಕಟ್ಟಿಸಿಕೊಟ್ಟಿದ್ದಾರೆ."[೨೨]

ಪ್ರಸಿದ್ದ ಹಜರತ್ ಹುಸೇನಿ ಆಲಂ ದರ್ಗಾ, ಕಂದನಕೆರೆ ಮಸೀದಿಗಳು ಕುದರಿಮೋತಿಯ ಮೊಹರಂ ಹಬ್ಬದ ದೇವರುಗಳನ್ನು ಕೂರಿಸುವ ಪ್ರಮುಖ ಕೇಂದ್ರಗಳು ಕಂದನಕೆರೆ ಮಸೀದಿಯಲ್ಲಿ ಕೂರಿಸಲಾಗುವ ದೇವರುಗಳ ಸಂಖ್ಯೆ ಎಂಟು. ಆ ದೇವರುಗಳೆಂದರೆ ಗ್ರಾಮಾಂತರ ಭಾಷೆಯಲ್ಲಿ ಕರೆಯುವ ಹಿರೇದೇವರು ( ಹಿರಿಯ ದೇವರು) ಮತ್ತು ಹಿರೇದೇವರ ನಾಲ್ಕು ಮಕ್ಕಳು. ಚಂದಪ್ಪ ಮತ್ತು ಚಂದಪ್ಪನ ಇಬ್ಬರು ಮಕ್ಕಳು. ಕುದರಿಮೋತಿ ಮೊಹರಂ ಆಚರಣೆಯ ಇನ್ನೊಂದು ವಿಶಿಷ್ಟತೆಯೆಂದರೆ ಇಲ್ಲಿ ಕೂರಿಸಲಾದ ದೇವರುಗಳಿಗೆ ಚಂದಪ್ಪ ಇರದೆ, ಅದರ ಬದಲಾಗಿ ಡೋಲಿಗಳು ಇರುತ್ತವೆ. ಆ ಡೋಲಿಗಳಲ್ಲಿಯೇ ಚಂದಪ್ಪ ಮತ್ತು ಆತನ ಮಕ್ಕಳನ್ನು ಕೂರಿಸಲಾಗುತ್ತದೆ. ಅಲ್ಲದೇ ಕಂದನಕೆರೆ ಮಸೀದಿಯಲ್ಲಿ ಡೋಲಿಗಳನ್ನಷ್ಟೆ ಪ್ರತಿಷ್ಠಾಪಿಸಲಾಗುತ್ತದೆ. ಆ ಡೋಲಿಯಲ್ಲಿಯೇ ಈ ಎಲ್ಲಾ ಎಂಟು ದೇವರುಗಳನ್ನು ಕೂರಿಸಲಾಗುತ್ತದೆ.

**ಹಸನ್ ಹುಸೇನರ ಕರ್ಬಲ ಯುದ್ದದ ಕುರಿತ ಸವಾಲು ಪದಗಳು :**

ಇವರಿಬ್ಬರ ಕುರಿತು ಐತಿಹಾಸಿಕ ಪದಗಳು ದೊರಕುತ್ತವೆ. ಈ ಪರಿವಾರದವರು ಮೂರು ದಿನವಿಡೀ ನೀರಿಲ್ಲದೇ ಬಳಲಿ ಬೆಂಡಾಗಿದ್ದರು. ಯಜೀದರು ಇವರನ್ನು ಕೊಲೆಮಾಡಿದ ದಾರುಣ ಕತೆಯನ್ನು ಈ ಪದಗಳು ಬಿತ್ತರಿಸುತ್ತವೆ. ಈ ಯುದ್ದ ನಡೆಯುವಾಗ ಆಕಾಶ ಭೂಮಿ ನಡುಗಿ ಭೂಮಿ ಕೆಂಪಾಗಿತ್ತು ಎಂಬ ಚಿತ್ರಣ ಈ ಹಾಡುಗಳಲ್ಲಿ ವ್ಯಕ್ತಗೊಂಡಿದೆ.

"ಕರ್ಬಲದ ಅಡವಿಯಲಿ । ಕಷ್ಟದಲ್ಲಿ ಸಿಲುಕಿ ಹುಸೇನಾ।
ನೀರು ಇಲ್ಲದಿನ್ನಾ । ಆಗಿ ಮೂರು ದಿನಾ।
ಸಣ್ಣ ಸಣ್ಣ ಮಕ್ಕಳು ಇನ್ನಾ। ಬಾಯಿ ಆರಿ ಬಳಲಿ ತಾನಾ।
ಭೂಮಿಯನ್ನು ಬಗಿತಾರೊ ಬಾನು ಸಖಿನಾ।
ಕುಂತು ಅಳುವರಿನ್ನಾ। ಕುಲು ಸುಮು ಜೈನಾ।"

ಎಂದು ಆರಂಭವಾಗುವ ಈ ಪದವು ಓದುಗರಲ್ಲಿ ಕರುಣಾರಸವನ್ನು ಉಂಟುಮಾಡುತ್ತದೆ. ಹಸನ್ ಹುಸೇನ ಪರಿವಾರದವರು ಮೂರು ದಿನಗಳ ಕಾಲ ಒಂದು ಹನಿ ನೀರು ಇಲ್ಲದೇ ಬಳಲಿ ಬೆಂಡಾಗಿ ನೀರಿಗಾಗಿ ಭೂಮಿಯನ್ನು ಬಗೆಯುವ ಚಿತ್ರಣವನ್ನು ಈ ಪದ ಕಟ್ಟಿಕೊಡುವುದರ ಮೂಲಕ ದುಃಖ ದಾರುಣ್ಯದ ಸ್ಥಿತಿಯನ್ನು ತಿಳಿಸುತ್ತಾ ಅವರ ಚಿಂತಾಜನಕ ಸ್ಥಿತಿಯನ್ನು ಮನಮುಟ್ಟಿಸುತ್ತದೆ.

"ಇಮಾಮೆ ಹುಸೇನ್ಯೆನಾ । ಇಳಿಸಿದಾರೋ ಖಡ್ಗವನ್ನಾ।
ನಮಾಜು ಮಾಡಲು ನಿಂತಾರೋ ಕಟ್ಟಿ ರಕತನ್ನಾ।
ಶುಕ್ರವಾರ ದಿನಾ। ಜೊಹರ್ ನಮಾಜಿನಾ॥
ಸಿಜದದೊಳಗೆ ಶಿವನ ಧ್ಯಾನ। ಮಾಡುವಾಗ ಹುಸೆನ್ಯೆನಾ।
ನೋಡಿ ಹಿಂದೆ ಓಡಿ ಬಂತೊ ಯೇಜಿದನ ಸೈನ್ಯಾ।
ಹಿಡಿದು ಖಡ್ಗವನ್ನು । ಶಿರಾ ಹರಿದಾರಣ್ಣ ॥

ಯುದ್ದದ ಸಂದರ್ಭವನ್ನು ತಿಳಿಸುವ ಈ ಪದವು ಶುಕ್ರವಾರ ದಿನ ನಮಾಜು ಮಾಡಲೆಂದು ಹುಸೇನ್ ಅವರು ಖಡ್ಗವನ್ನು ಇಳಿಸುತ್ತಾರೆ. ಆಗ ಅಲ್ಲಾನ ಧ್ಯಾನದ ಪ್ರಾರ್ಥನೆಯಲ್ಲಿ ನಿರತರಾದಾಗ ಯಜೀವನ ಸೈನ್ಯ ಬಂದು ರುಂಡವನ್ನು ಕತ್ತರಿಸುವ ಚಿತ್ರಣ ಘೋರ ದುರಂತವನ್ನು ತಿಳಿಸುತ್ತದೆ.

"ಸಿರದ ಮೇಲೆ ಖಡ್ಗವನ್ನಾ। ನಡೀತಿತ್ತು ಒಂದೇ ಸವನಾ।
ಹಿಡಿದ ನಮಾಜಿ ಬಿಡಲಿಲ್ಲಾ ಪ್ರಾಣಪಕ್ಷಿ ಹಾರುವ ತನಾ।
ಇಮಾಮೆ ಹುಸೆನ್ಯೆನಾ ಶೆಹಿದಾದರಿನ್ನಾ।
ಎಷ್ಟಂತ ಹೇಳಲಿ ಇದನ್ನು ಸತ್ಯವಂತ ಶರಣರ ಕವನಾ।
ಶೆಹಿದಾದ ಶರಣರ ಮೇಲೆ ದರೂದ್ ಸಲಾಮ್‌ನನ್ನಾ॥"[೨೨]

ಈ ಸ್ಥಿತಿಯಲ್ಲಿರುವಾಗ ರುಂಡ ಕತ್ತರಿಸಿದರೂ ಪ್ರಾಣ ಹೋಗುವ ತನಕ ನಮಾಜು ಮಾಡುತ್ತಾ ಕೊನೆಗೆ ಕರ್ಬಲ್ ಯುದ್ದದಲ್ಲಿ ಕೊನೆಯುಸಿರೆಳೆಯುತ್ತಾರೆ. ಈ ದಿನದಂದು ಮೊಹರಂ ಹಬ್ಬವು ದುಃಖದ ಸಾಂಕೇತಿಕವಾಗಿ ಜರುಗುವುದನ್ನು ಕಾಣುತ್ತೇವೆ. ಹೀಗೆ ಕುದರಿಮೋತಿ ಒಂದು ಕೋಮು ಸೌಹಾರ್ದತಾ ತಾಣವಾಗಿ ಸರ್ವ ಜನರನ್ನೂ ಒಳಗೊಂಡು ತನ್ನದೇ ಆದ ಮಹತ್ವವನ್ನು ಸಾರಿದೆ.

**ಕುದುರೆಮೋತಿ ದರ್ಗಾದ ವೈಶಿಷ್ಟಗಳು**

೧. ಕುದುರೆಮೋತಿ ಸುತ್ತಮುತ್ತ ಈ ಮೊಹರಂ ಆಚರಣೆಯನ್ನು ಹಸೇನ್ ಹುಸೇನ್ ರವರ ಮುಖಾ ಮುಖಿ ಎಂದು ಆಚರಿಸುತ್ತಾರೆ.

೨. ಹಸೇನ್ ಹುಸೇನ್ ಎಂಬ ಸಹೋದರರ ಬಗ್ಗೆ ಈಗಾಗಲೆ ಜನಪದರ ಕತೆಗಳು ಪ್ರಚಲಿತವಾಗಿವೆ.

೩. ಅರಬ್ ದೇಶದಿಂದ ಬಂದ ಈ ಸಹೋದರರು ಮುದಗಲ್ಲಿಗೆ ತಲುಪಿದರು. ನಂತರದಲ್ಲಿ ಹಸ್ಸನ್ ಈ ಸ್ಥಳಕ್ಕೆ ಬಂದನೆಂಬ ಪ್ರತೀತಿಯಿದೆ.

೪. ಮೊಹರಂ ಹಬ್ಬದ ಏಳನೆಯ ದಿನವನ್ನು ಸಂದಲ್ ರಾತ್ರಿ ಎಂದು ಕರೆಯುತ್ತಾರೆ.

೫. ಸಂದಲ್ ರಾತ್ರಿ ಎಂದರೆ ಗಂಧದ ರಾತ್ರಿ ಎಂದರ್ಥ.

೬. ಕೊಪ್ಪಳದ ಚಂದಪ್ಪನ ಕುದುರೆಯ ಸವಾರಿಯು ಕಾಲ್ನಡಿಗೆಯಿಂದ ಇಲ್ಲಿಗೆ ಬಂದು ಐದು ಸಲ ಹಲಾಯಿ ಕುಣಿಯ ಸುತ್ತು ತಿರುಗುತ್ತದೆ. ನಂತರ ಚಂದಪ್ಪನ ಸವಾರಿ ರಸ್ತೆಯ ಮೂಲಕ ಮಸೀದಿಯನ್ನು ಪ್ರವೇಶಿಸುತ್ತದೆ.

೭. ಪ್ರಸಿದ್ಧ ಹಜರತ್ ಆಲಂ ದರ್ಗಾ, ಕಂದನಕೇರಿ ಮಸೀದಿಗಳು ಪ್ರಮುಖ ದರ್ಗಾಗಳಾಗಿವೆ.

೮. ಕಂದನಕೇರಿ ಮಸೀದಿಯಲ್ಲಿ ಒಟ್ಟು ಎಂಟು ದೇವರುಗಳನ್ನು ಕೂರಿಸಲಾಗುತ್ತದೆ. ಈ ಎಂಟು ದೇವರುಗಳಲ್ಲಿ ಹಿರಿಯ ದೇವರು ಚಂದಪ್ಪ. ಚಂದಪ್ಪ ಹಿಂದೂ ಹೆಸರಾದರೂ, ಮುಸ್ಲಿಂ ಭಾವೈಕ್ಯತೆಯನ್ನು ಬೆಳೆಸುತ್ತದೆ.

೯. ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲೂಕಿನ ಮುದಗಲ್ಲ ಗ್ರಾಮದಲ್ಲಿ ನಡೆಯುವ ಮೊಹರಂ ವಿಶಿಷ್ಟತೆಯನ್ನು ಈ ಸ್ಥಳ ನೆನೆಪಿಸುತ್ತದೆ.

೧೦. ಕಂದನಕೇರಿ ದರ್ಗಾ ಹಿಂದೆ ಹಸುಗೂಸಗಳ ಸ್ಮಶಾನವಾಗಿತ್ತು. ಇಂದು ಮೋಹರಂನ ಪ್ರಸಿದ್ಧ ಸ್ಥಳವಾಗಿ ಭಾವೈಕ್ಯತೆಯನ್ನು ಮರೆದಿದೆ.

**ಗಂಗಾವತಿ ತಾಲೂಕು**

"ಈ ತಾಲೂಕಿನ ಹೇಮಗುಡ್ಡ, ಕನಕಗಿರಿ, ಆನೆಗೊಂದಿ, ಹಂಪಸದುರ್ಗ ಮತ್ತಿತರ ಕೋಟೆಗಳು ಸುಸ್ಥಿತಿಯಲ್ಲಿದ್ದು, ಆಕರ್ಷಣೀಯವಾಗಿವೆ. ಆನೆಗೊಂದಿ ಗಂಗಾವತಿಯಿಂದ ನೈರುತ್ಯಕ್ಕೆ ೧೧ ಕಿ.ಮೀ. ಅಂತರದಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲಿದೆ. ಇದನ್ನು ರಾಮಾಯಣ ಕಾಲದ ಕಿಷ್ಕಿಂಧೆಯೆನ್ನುತ್ತಾರೆ. ಋಷ್ಯಮೂಕ ಪರ್ವತ, ಅಂಜನಾಬೆಟ್ಟ, ಶಬರಿಗುಹೆ, ವಾಲೀಭಂಡಾರ, ವಾನಭದ್ರೇಶ್ವರ, ಪಂಪಾ ಸರೋವರ, ಜಯಲಕ್ಷ್ಮಿ ಮಂದಿರಗಳಿವೆ. ಅಂಜನಾ ಬೆಟ್ಟದಲ್ಲಿ ಆಂಜನೇಯ ಜನ್ಮತಳೆದಿದ್ದು 'ಆ ಶರಧಿಯನೆ ಜಿಗಿದ ಹನುಮನುದಿಸಿದ ನಾಡೆಂದು ಹುಯಿಲಗೋಳ ನಾರಾಯಣರಾಯರು ತಮ್ಮ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಗೀತೆಯಲ್ಲಿ ಬಣ್ಣಿಸಿದ್ದಾರೆ.

ಆನೆಗೊಂದಿ ಕೋಟೆಯನ್ನು ನೆಲಮಟ್ಟದಿಂದ ಹಾಗೂ ಬೆಟ್ಟದ ಮೇಲಿಂದ ಕಟ್ಟಲಾಗಿದೆ. ವಿಜಯನಗರ ಸಾಮ್ರಾಜ್ಯದ ತೂಗು ತೊಟ್ಟಿಲವೆಂದು ಆನೆಗೊಂದಿಯನ್ನು ಕರೆಯುತ್ತಾರೆ. ಅರಬ್ಬಿ ಹಾಗೂ ಇಟಲಿ ಮಾದರಿ ಸಾರ್ಸಿನಿಕ್ ಶೈಲಿಯ ಆಕರ್ಷಕ ಅರಮನೆ ಇದೆ."[೨೪]

**ಮೈಬುಸುಬಾನಿ ದರ್ಗಾ :**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹಿರೇಜಂತ್‌ಕಲ್ ಗ್ರಾಮದ ಸುಬಾನೀ ದರ್ಗಾವು ಕೋಮು ಸೌಹಾರ್ದತೆಯ ತಾಣ ಎನಿಸಿಕೊಂಡಿದೆ. ೩೦೦ ವರ್ಷಗಳ ಚರಿತ್ರೆಯುಳ್ಳ ಈ ದರ್ಗಾವು ಹುಸೇನ್‌ಸಾಬ್ ಹೊನ್ನೂರ್‌ಸಾಬ್ ಹಾಗೂ ವಲಿಸಾಬ್ ಎಂಬ ತಲೆಮಾರಿನ ಮೌಲ್ವಿಗಳನ್ನು ಪಡೆದ ಈ ದರ್ಗಾವು ಇತ್ತೀಚಿಗೆ ಒಂದು ಸಮಿತಿಯನ್ನು ರಚಿಸಿಕೊಂಡಿದೆ. ಬಾಷಾರವರು ಅಧ್ಯಕ್ಷರಾದರೆ, ಬಾಬುರವರು ಕಾರ್ಯದರ್ಶಿಯಾಗಿ ಖಾದರ್‌ಸಾಬ್‌ರವರು ಖಜಾಂಚಿಯಾಗಿ ಈ ದರ್ಗಾದ ಏಳಿಗೆಗೆ ಶ್ರಮಿಸುತ್ತಿದ್ದಾರೆ.

ಎರಡು ಧರ್ಮದ ಜನ ಅಣ್ಣ– ತಮ್ಮಂದಿರಾಗಿ ಬಾಳುವುದರ ಜೊತೆಗೆ ಎರಡು ಧರ್ಮದ ಪೂಜಾ ಪದ್ದತಿಯನ್ನು ಅನುಸರಿಸುತ್ತ ಬಂದಿದ್ದಾರೆ. ಈ ಉರುಸ್‌ಗೆ ಸಕ್ಕರೆ, ಊದುಬತ್ತಿ, ಕಾಯಿ, ಹೂ, ಲೋಬಾನಗಳನ್ನು ಅರ್ಪಿಸುವದರ ಜೊತೆಗೆ ಮೂರು ದಿನಗಳ ಉತ್ಸವವನ್ನು ಆಚರಿಸುತ್ತಾರೆ.

**ಸೈಯದ್ ಮುಸ್ತಾಫ್ ಖಾದ್ರಿ :**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಕಾರಟಗಿ ಗ್ರಾಮದಲ್ಲಿರುವ ಸೈಯದ್ ಮುಸ್ತಾಫ್ ಖಾದ್ರಿ ದರ್ಗಾ, ವಲಿಸಾಬ್ ದರ್ಗಾವೆಂದು ಪ್ರಸಿದ್ದವಾಗಿದೆ. ಮೂಲತಃ ವಲಿಸಾಬ್‌ರವರು ಇದೇ ಗ್ರಾಮದವರು. ಇವರ ವಂಶದ ಮೂಲದವರು ಬಾಗ್ದಾದ್‌ದಿಂದ ಬಂದವರೆಂದು ತಿಳಿದುಬಂದಿದೆ. ಸರ್ವ ಜಾತಿಯ ಜನರು ಈ ದರ್ಗಾಕ್ಕೆ ಬರುತ್ತಾರೆ. ಎರಡು ಎಕರೆ ಎಂಟು ಗುಂಟೆ ವಿಸ್ತೀರ್ಣ ಹೊಂದಿದ ಈ ದರ್ಗಾವು ೨೦೮ ವರ್ಷಗಳ ಇತಿಹಾಸವನ್ನು ಹೊಂದಿದೆ. ಸರ್ಕಾರದ ಜಾಗದಲ್ಲಿರುವ ಈ ದರ್ಗಾವು ಸರ್ವಧರ್ಮದ ಭಕ್ತರ ತಾಣವಾಗಿದೆ.

ಸೈಯದ್ ಹುಸೇನ್ ಖಾಜಾ ಪೀರ್, ಸೈಯದ್ ಮಹೇಬೂಬು ಹುಸೇನ್, ಸೈಯದ್ ಉಸಮನ್‌ಸಾಬ್, ಸೈಯದ್ ಪೀರ್‌ಸಾಬ್ ಮತ್ತು ಶೇಕ್ಷಾವಲಿ, ಎಂಬ ವಂಶಪರಪಂರೆಯಾಗಿ ಬಂದವರಿಂದ ಪೂಜೆ – ಪುನಸ್ಕಾರಗೊಳ್ಳುತ್ತಾ ನಡೆದಿದೆ. ಭಕ್ತರು ತಮ್ಮ ಹರಕೆ, ನಂಬಿಕೆಗಳು ಈಡೇರಿದರೆ ಭಕ್ತಿಯ ಕಾಣಿಕೆಯನ್ನು ದರ್ಗಾಕ್ಕೆ ಅರ್ಪಿಸುತ್ತಾರೆ. ಭಕ್ತರ ದಾನದಿಂದ ಬಂದ ಹಣದಿಂದ ದರ್ಗಾವನ್ನು ಅಭಿವೃದ್ಧಿ ಪಡಿಸಿದ್ದಾರೆ. ಯಂತ್ರ, ಮಂತ್ರ ಮತ್ತು ಭೂತಗಳನ್ನು ಬೀಡಿಸುವಕಾರ್ಯ ನಡೆಯುತ್ತದೆ. ಸಂತಾನ ಭಾಗ್ಯಕ್ಕಾಗಿ ಹನ್ನೊಂದು ಅಮವಾಸ್ಯೆ ನಡೆದುಕೊಂಡರೇ ಸಂತಾನವಾಗುತ್ತದೆ ಎಂಬ ವಿಶ್ವಾಸ ಉಳಿದುಕೊಂಡಿದೆ. ಹಿಂದೂ ಧರ್ಮದ ವಿಧಿ ವಿಧಾನಗಳಂತಹ ದೀಡ್ ನಮಸ್ಕಾರ್‌ಗಳನ್ನು ಹಾಕುವ ಪದ್ದತಿ ಬೆಳೆದುಕೊಂಡು ಬಂದಿದೆ. ಸುಮಾರು ೧೫–೨೦ ಸಾವಿರ ಜನರು ಸೇರುವ ಉರುಸ್ ಸುತ್ತ–ಮುತ್ತಲ ಗ್ರಾಮಗಳಲ್ಲಿ ಮತ್ತು ಬೇರೆ ಬೇರೆ ಪ್ರದೇಶಗಳಲ್ಲಿ ಹರಡಿಕೊಂಡಿದೆ.

ಈ ದರ್ಗಾಕ್ಕೆ ಮತ್ತು ಅದರ ಅಭಿವೃದ್ಧಿಗೆ ಹಿಂದೂಗಳೂ ಪ್ರಯತ್ನಿಸುತ್ತಾರೆ. ಅಲ್ಲದೇ ಪ್ರತಿವರ್ಷ ಹೋಳಿ ಹುಣ್ಣಿಮೆ ಆಗಿ ನಾಲ್ಕು ದಿನಗಳ ನಂತರ ಉರುಸು ನಡೆಯುತ್ತದೆ. ಎಲ್ಲಾ ದರ್ಗಾಗಳಲ್ಲಿಯ ನಿಯಮಗಳು ಇರುವಂತೆ ಇಸ್ಲಾಂ ಧರ್ಮದ ಪದ್ಧತಿಯಂತೆ ಗಂಧ, ಉರುಸ್ ಹಾಗೂ ಝೀಯರತ್ ನಡೆಯುತ್ತದೆ.

**ಪವಾಡ ಹಾಗೂ ನಂಬಿಕೆಗಳು :**

ಸೈಯದ್ ಮುಸ್ತಾಫ್ ಖಾದ್ರಿಯವರು ಪವಾಡ ಪುರುಷರಲ್ಲಿ ಒಬ್ಬರು. ಆತ್ಮಜ್ಞಾನಿಗೆ, ಪರಮಾತ್ಮ ಪ್ರಿಯರಿಗೆ ಪವಾಡಗಳು ಸಾಮಾನ್ಯ ಕ್ರಿಯೆ, ಅವರು ಇಚ್ಚಿಸಿದರೆ ಒಳ್ಳೆಯದೆಲ್ಲ ಆಗಬಹುದು. ಸಾಮಾನ್ಯ ಜನರು ಪವಾಡಗಳಿಗೆ ವಿಶೇಷ ಮಹತ್ವ ಕೊಡುವರು ಮತ್ತು ಮಹಾತ್ಮರೆನ್ನಲು ಪವಾಡಗಳನ್ನೇ ಆಧಾರವನ್ನಾಗಿ ಮಾಡಿಕೊಳ್ಳುವರು. ಇದೊಂದು ಅತ್ಯಂತ ಸಾಮಾನ್ಯ ದೃಷ್ಟಿ. ಮಹಾತ್ಮರು ಮಾನವ ಜನಾಂಗದ ಉದ್ಧಾರದ ಕಾರ್ಯ ಕೈಗೊಂಡಿರುತ್ತಾರೆ. ಆ ಧರ್ಮದಿಂದ ಜನರನ್ನು ರಕ್ಷಿಸುತ್ತಾರೆ. ಪ್ರಾಪಂಚಿಕ ವ್ಯಾಮೋಹದಿಂದ ಉಂಟಾಗುವ ಪಾಪ ಕಾರ್ಯಗಳಿಂದ ದೂರ ಇರಲು ಪ್ರಯತ್ನಿಸುತ್ತಾರೆ.

ತಾವು ಕಂಡ ಆಧ್ಯಾತ್ಮಿಕ ಸತ್ಯದತ್ತ ಜನರನ್ನು ನಡೆಸಿಕೊಂಡು ಹೋಗಲು ಪ್ರಯತ್ನಿಸುತ್ತಾರೆ. ಅವರ ಬೋಧನೆ ಮತ್ತು ಅವರ ದಾರಿ ನಮಗೆ ಮಾರ್ಗದರ್ಶನವಾಗಿವೆ. ಅನುಭಾವಿಗಳ ಭೋಧನೆಯ ಮಾತುಗಳು ಮಾನವನ ವೈಯಕ್ತಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಜೀವನ ರೂಪಿಸುವ ಸಾದನಗಳಾಗಿವೆ. ಸೈಯದ್ ಮುಸ್ತಾಫ್ ಖಾದ್ರಿ ನಾಡಜನರನ್ನು ಆಧ್ಯಾತ್ಮ ಮಾರ್ಗದಲ್ಲಿ ನಡೆಸಿದವರು. ಮಾನವನ ಮೌಲ್ಯಗಳ ರಕ್ಷಣಿಗೆ ಮಾರ್ಗ ತೋರಿದವರು. ಸರ್ವ ಜನರಲ್ಲಿ ಬಂಧುತ್ವ ಸ್ಥಾಪಿಸಿ ಸಾಮಾಜಿಕ ಶಾಂತಿ ಸೌಹಾರ್ದತೆಯ ಅಡಿಗಲ್ಲಿಟ್ಟವರು. ಅವರ ಕಾರ್ಯ ನಿಲ್ಲದೇ ಇಂದಿಗೂ ನಿರಂತರವಾಗಿ ಸಾಗುತ್ತಿದೆ. ಭಕ್ತರಿಗೆ ಈ ಸನ್ನಿಧಾನದಿಂದ ಅವರವರ ವಿಶ್ವಾಸ ಮತ್ತು ನಂಬುಗೆಯನ್ನು ಅನುಸರಿಸಿದರೆ ಪರಿಹಾರ ಸಿಕ್ಕುತ್ತದೆ.

"ಈ ದರ್ಗಾಕ್ಕೆ ಪ್ರಮಾಣ ಪೂರ್ವಕವಾಗಿ ಭಕ್ತಿಯಿಂದ ನಡೆದುಕೊಂಡರೇ ಸಿದ್ದಿಸುತ್ತದೆ. ಎಂಬ ಮಾತು ಸತ್ಯ ಸಂಗತಿಯಾಗಿದೆ.

೧. ಕಾರಟಗಿ ಗ್ರಾಮದ ಅಂಗಡಿಯ ಮನೆತನದವರು ಓಲವು ಇದ್ದು ಈ ಕುಟುಂಬದ ಹಿರಿಯಣ್ಣನವರು ದರ್ಗಾಕ್ಕೆ ತಮ್ಮ ಹೊಲದಲ್ಲಿ ಒಂದಿಷ್ಟು ಪಾಲು ನೀಡಿದರು. ಈತನ ಮಾತನ್ನು ತಿರಸ್ಕರಿಸಿ ಆತನ ತಮ್ಮನು ಮರುದಿನ ಎತ್ತುಕಟ್ಟಿ ಮಡಿಕೆ ಹೊಡೆದನಂತೆ. ಇದಾದ ಸ್ವಲ್ಪ ದಿನಗಳೊಳಗೆ ತಮ್ಮನ ದೇಹದಲ್ಲಿ ಕುಷ್ಟರೋಗದ ಲಕ್ಷಣಗಳು ಕಾಣಿಸಿಕೊಂಡು ಕಣ್ಣಿನ ದೃಷ್ಟಿ ಕಳೆದು ಹೋಯಿತಂತೆ ಇದನ್ನು ಅರಿತ ತಮ್ಮನು ಹೆದರಿ ತಪ್ಪಾಯಿತೆಂದು ಜಿತ್ತಿದ ಹೊಲವನ್ನು ದರ್ಗಾಕ್ಕೆ ಕಾಣಿಕೆಯಾಗಿ ನೀಡಿದನಂತೆ."[೨೫]

೨. ಹುಲಗಪ್ಪ ಹಂಚಿನಾಳ ಕ್ಯಾಂಪ್ ಇವರಿಗೆ ಮಕ್ಕಳು ಆಗಿರಲಿಲ್ಲ. ಇವರು ದರ್ಗಾಕ್ಕೆ ಹರಕೆ ಹೊತ್ತು ನಡೆದುಕೊಂಡಾಗ ಪ್ರತಿಫಲವಾಗಿ ಗಂಡು ಸಂತಾನವಾಯಿತು. ಇದರ ನೆನಪಿಗಾಗಿ ಆಧುನಿಕ ತಂತ್ರಜ್ಞಾನದ ಮೈಕ್‌ಸೇಟ್‌ನ್ನು ಧಾನವಾಗಿ ನೀಡಿದ್ದಾರೆ. ಸ್ಥಳೀಯ ಜನರು ಅಲ್ಲಿರುವ ಭಾವಿಯ ನೀರನ್ನು ಉಪಯೋಗಿಸಿದರು. ಈ ಮೊದಲು ನೀರು ಉಪ್ಪಾಗಿದ್ದವು. ನಂತರದಲ್ಲಿ ಈ ದರ್ಗಾದ ಪ್ರಭಾವದಿಂದ ನೀರು ಸಿಹಿಯಾಯಿತು. ಈ ನೀರನ್ನು ಅಡುಗೆ ಮತ್ತು ಕುಡಿಯಲು ಬಳಸುತ್ತಾರೆ. ಈ ಭಾವಿಗೆ 'ವಲೀಸಾಬ್' ಬಾವಿಯೆಂದು ಹೆಸರು. ಈ ಭಾವಿಯನ್ನು ತೋಡಿಸಿದವರು ಹೈದ್ರಾಬಾದ್ ನಿಜಾಮರು. ಅದಕ್ಕೆ ಕಾರಣ ಇಲ್ಲದೇ ಇಲ್ಲ. ನಿಜಾಮನಿಗೆ ಕುಷ್ಟರೋಗ ನಿವಾರಣೆಯಾದರೇ, ದಾನವಾಗಿ ಏನಾದರೂ ಕೊಡಬೇಕೆಂದು ಬೇಡಿಕೊಂಡರು. ಕಾಯಿಲೆ ವಾಸಿಯಾದ ನಂತರ ಅಂದಿನ ತಾಲೂಕು ಅಧಿಕಾರಿಗಳಿಗೆ ತಿಳಿಸಿ ಬಾವಿಯನ್ನು ತೋಡಿಸಿದರಂತೆ. ಆ ಬಾವಿಯೇ ದರ್ಗಾದ ಆವರಣದಲ್ಲಿ ಎಂದೂ ಬತ್ತದ ಬಾವಿಯಾಗಿ ಉಳಿದಿದೆ. ಇತ್ತೀಚಿಗೆ ಈ ಬಾವಿಯಲ್ಲಿ ಆಮೆಯೊಂದು ಮೃತಪಟ್ಟಿದ್ದರಿಂದ ಬಾವಿಯನ್ನು ಸ್ವಚ್ಚಗೊಳಿಸಿದ ಸಂಗತಿ ಪತ್ರಿಕೆಯೊಂದರಲ್ಲಿ ಭಿತ್ತರವಾಗಿತ್ತು.

**ದರ್ಗಾದ ವೈಶಿಷ್ಟಗಳು:**

೧. ಕೋಮುಸೌಹಾರ್ದತೆ ಎಲ್ಲ ಜನಾಂಗದ ತವರಮನೆ ಎಂಬುದಕ್ಕೆ ಈ ದರ್ಗಾ ಸಾಕ್ಷಿಯಾಗಿದೆ.

೨. ಹಿಂದೂ-ಮುಸ್ಲಿಂ ಎಂಬ ಭೇಧ-ಭಾವವನ್ನು ಮಾಡದೇ ಸರ್ವ ಜಾತಿಯ, ಧರ್ಮದ ಜನತೆಗೆ ಅವಕಾಶವನ್ನು ಈ ದರ್ಗಾ ಒದಗಿಸಿದೆ.

೩. ಸೌಹಾರ್ದತೆಯನ್ನು ತನ್ನ ಜೀವಾಳವನ್ನಾಗಿಸಿಕೊಂಡ ಈ ದರ್ಗಾವು ಇಂದು ಸರ್ವಧರ್ಮಿಯರ ದೇಣಿಗೆಯಿಂದಾಗಿ ಹೊಸ ಕಟ್ಟಡದೊಂದಿಗೆ ರಾರಾಜೀಸುತ್ತದೆ.

೪. ಪ್ರತಿ ಗುರುವಾರ ಮತ್ತು ರವಿವಾರ ಅನೇಕ ಭಕ್ತಾದಿಗಳ ತಾಣವಾಗಿ ಕಾಣುತ್ತದೆ.

೫. ರಾಜ್ಯದ ವಿವಿಧ ಜಿಲ್ಲೆ ಹಾಗೂ ಹೊರ ರಾಜ್ಯದ ಜನರು ಈ ದರ್ಗಾಕ್ಕೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

೬. ಈ ದರ್ಗಾಕ್ಕೆ ಬೇಡಿಕೊಂಡ ಭಕ್ತಾದಿಗಳಿಗೆ ತಾವು ಅಂದುಕೊಂಡ ಕೆಲಸ ಕಾರ್ಯಗಳು ಆಗಿವೆ ಎಂದು ಸಂದರ್ಶನ ಸಮಯದಲ್ಲಿ ಹೇಳಿದ್ದಾರೆ.

೭. ಕಾರಟಗಿ ಬಸ್ ನಿಲ್ಲುವ ಸ್ಥಳದ ಸ್ವಲ್ಪ ದೂರದಲ್ಲಿ ಒಂದು ಬಾವಿ ಇದೆ. ಈ ದರ್ಗಾದ ತಾತನವರ ಪವಾಡದಿಂದ ಆ ಬಾವಿಯ ನೀರು ಸಿಹಿಯಾಗಿದ್ದ ಕಾರಣ ಆ ಗ್ರಾಮದ ಜನರು ಇಂದಿಗೂ ಕುಡಿಯಲು ಬಳಸುತ್ತಾರೆ.

೮. ಈ ದರ್ಗಾದ ಆವರಣದಲ್ಲಿ ಒಂದು ಬಾವಿ ಇದೆ. ಇದು ಯಾವುತ್ತೂ ಬತ್ತದೇ ಇದ್ದು, ಇದರ

ನೀರನ್ನು ಕುಡಿದರೆ ಭಯಾನಕ ಚರ್ಮ ಹಾಗೂ ಕುಷ್ಠರೋಗ, ಭಯ, ಆತಂಕ ಇನ್ನೂ ಮುಂತಾದ ಸಮಸ್ಯೆಗಳಿಗೆ ಪರಿಹಾರ ಸಿಗುತ್ತದೆ.

**ಕುಷ್ಟಗಿ ತಾಲ್ಲೂಕು :**

"ಕುಷ್ಟಗಿ ತಾಲೂಕಿನ ಕಬ್ಬರಗಿ ಹತ್ತಿರದ ಕಪಿಲ ತೀರ್ಥ ಜಲಪಾತವು ಕೊಪ್ಪಳ ಜಿಲ್ಲೆಯ ಏಕಮಾತ್ರ ಜಲಪಾತವಾಗಿದೆ. ಕುಷ್ಟಗಿಯಲ್ಲಿ ನೋಡ ಸಿಗುವ ಗೋಳಗುಮ್ಮಟ, ನಾಗದೇವರ ಗುಡಿ, ಹಿಂದೂ ಇಸ್ಲಾಂ ಶೈಲಿಯ ತಾಜ್‌ಮಹಲ್ ಗಾರೆಗಚ್ಚಿನ ಶಿಲ್ಪಗಳಾಗಿದ್ದು, ತಮ್ಮದೇ ಇತಿಹಾಸ ಹಾಗೂ ಹಿನ್ನೆಲೆ ಹೊಂದಿವೆ. ೪೮೦ ವರ್ಷಗಳಷ್ಟು ಹಳೆಯದಾದ ೧೦೦ x ೮೦ ಅಡಿ ಉದ್ದಗಲದ ೫೦ ಅಡಿ ಆಳದ ಹಿಂದೂ, ಮುಸ್ಲಿಂ ಶೈಲಿಯ ಕಮಾನುಗಳಿಂದ ಕೂಡಿದ ಕಲ್ಲುಬಾವಿಯಿದೆ. ಅದಕ್ಕೆ ಹತ್ತಿರದಲ್ಲಿ ಚಾಲುಕ್ಯ ಅರಸು ಜಗದೇಕಮಲ್ಲನ ಕಾಲದ ಚಾಲುಕ್ಯ ಶೈಲಿಯ ರಾಮಾಯಣದ ಸುಂದರ ಕೆತ್ತನೆಯ ಕಲೆಯುಳ್ಳ ರಾಮಲಿಂಗೇಶ್ವರ ದೇವಾಲಯವಿದೆ. ಚೆನ್ನಬಸವಣ್ಣ ಉಳುವಿಗೆ ಹೋಗುವಾಗ ಬೀಡುಬಿಟ್ಟಿದ್ದ ಸ್ಮಾರಕವಾಗಿ ಬುತ್ತಿ ಬಸವೇಶ್ವರ ದೇವಾಲಯವಿದ್ದು ದೊಡ್ಡ ಜಾತ್ರೆ ಜರಗುತ್ತದೆ. ಕುಷ್ಟಗಿ ಪಟ್ಟಣಕ್ಕೆ ಹತ್ತಿರದ ವಜ್ರಬಂಡಿಯಲ್ಲಿ ಅಡವಿರಾಯ (ಪ್ರಾಣ ದೇವರು) ದೇವಸ್ಥಾನವಿದೆ.

ಹನುಮಸಾಗರಕ್ಕೆ ಹೋದರೆ ಬೆಟ್ಟದ ಮೇಲೆ ತಿರುಪತಿ ದೇವಸ್ಥಾನವಿದೆ. ಇದಕ್ಕೆ ಅಭಿನವ ತಿರುಪತಿ ಎಂದು ಕರೆಯುವರು. ಪವನ ವಿದ್ಯುತ್ ಘಟಕ ಇಲ್ಲಿ ೧.೯೨ ಮೆಗಾವ್ಯಾಟ್ ವಿದ್ಯುತ್ ಉತ್ಪಾದಿಸುತ್ತಿದೆ. ಪುರ, ಕೋಟಿ ಲಿಂಗಕ್ಕೆ ಪ್ರಸಿದ್ಧವಿದೆ. ಚಂದಾಲಿಂಗೇಶ್ವರ ದೇವಸ್ಥಾನ ಮಹತ್ವ ಪಡೆದಿದೆ. ನವಲಹಳ್ಳಿ, ತಾವರಗೇರಿ ಮುಂತಾದ ಪ್ರಾಗೈತಿಹಾಸಿಕ ನೆಲೆಗಳಿವೆ. ಮುದೇನೂರಿನ ಡಾ. ಚಂದ್ರಶೇಖರ ಮಹಾಸ್ವಾಮಿಗಳವರು ಪಾರ್ವತಿದೇವಿಯ ಜಾತ್ರೆಯಲ್ಲಿ ಮಹಿಳೆಯರೇ ತೇರು ಎಳೆಯುವುದು, ಡೊಳ್ಳು ಬಾರಿಸುವುದು ಮಾಡುತ್ತಾರೆ. ಹಾಗೂ ಮಹಿಳೆಯರಿಗಾಗಿ ಈ ಉತ್ಸವ ಏರ್ಪಡಿಸುತ್ತ ಬಂದಿರುವುದನ್ನು ಗಮನಿಸಬಹುದು."[೨೬]

**ಸೈಯದ್‌ಷಹಾ ಅಬ್ದುಲ್ ಹಸನ್ ಖಾದ್ರಿ :**

ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಗ್ರಾಮದಲ್ಲಿರುವ ಸೈಯದ್‌ಷಹಾ ಅಬ್ದುಲ್ ಹಸನ್ ಖಾದ್ರಿ ಇವರ ದರ್ಗಾವು ದಾದಾಪೀರ ದರ್ಗಾವೆಂದೆ ಪ್ರಸಿದ್ಧವಾಗಿದೆ. ಏಕೆಂದರೆ ದಾದಪೀರ ಎಂಬುವುದು ಇವರ ಮೂಲ ಹೆಸರು. ತಂದೆ ಹೆಸರು ಅಬ್ದುಲ್ ಹಸನ್ ಖಾದ್ರಿ ಅಂದರೆ ದಾದಾಪೀರಷಹಾ ಖಾದ್ರಿ, ಅಬ್ದುಲ್‌ಷಹಾ ಖಾದ್ರಿ, ಮುರ್ತುಜಾ ಖಾದ್ರಿ, ತಲೆಮಾರಿನ ಸೈಯದ್‌ಷಾಹ ಮುರ್ತುಜಾ ಖಾದ್ರಿ ಇವರ ಮೊಮ್ಮಗ ಅಬ್ದುಲ್ ಹಸನ್ ಖಾದ್ರಿಯವರು ಸೂಫಿ ಸಂತರಲ್ಲಿ ಒಬ್ಬರು.

ಪೂಜ್ಯ ಗುರುವರ್ಯ ಹಜರತ್ ಸೈಯ್ಯದ ಶಾಹ ಅಬ್ದುಲ್ ಹಸನ್ ಖಾದ್ರಿ ಇವರಿಂದ ಹನುಮಸಾಗರ ಗ್ರಾಮ ಪುಣ್ಯ ಭೂಮಿ ಎನಿಸಿದೆ. ಇದರಿಂದಾಗಿ ಕರ್ನಾಟಕದ ತುಂಬೆಲ್ಲ ಇಲಕಲ್ ಹಾಗೂ ಹನುಮಸಾಗರ ಪ್ರಸಿದ್ದಿ ಪಡೆದಿವೆ. ಪರಸ್ಥಳಗಳಿಂದ ಈ ಗ್ರಾಮಕ್ಕೆ ಬರುವ ಪ್ರವಾಸಿಗರಿಗೆ ದೂರದಲ್ಲಿರುವಾಗಲೇ ದರ್ಗಾದ ದರ್ಶನವಾಗುತ್ತದೆ. ಈ ದರ್ಶನದೊಂದಿಗೆ ಭಕ್ತಿ ಉದಿಸುತ್ತದೆ. ಜ್ಞಾನ ಎರಡು ರೀತಿಯದಾಗಿದೆ. ಪಂಚೇಂದ್ರಿಯಗಳ ಮೂಲಕ ಕಂಡು ಕೊಳ್ಳಬಹುದಾದ ಪ್ರಾಪಂಚಿಕ ಜ್ಞಾನ ಒಂದು ರೀತಿಯದು. ಆತ್ಮ ಮತ್ತು ಪರಮಾತ್ಮರನ್ನು ಕುರಿತು ಪಡೆಯುವ ಜ್ಞಾನ ಎರಡನೇ ರೀತಿಯದು. ಈ ಆತ್ಮಜ್ಞಾನ ಪಡೆಯುವ ಭಾಗ್ಯ ಎಲ್ಲರಿಗೂ ಲಭಿಸುವದಿಲ್ಲ. ಅದಕ್ಕೆ ದೇವನ ಕರುಣೆ ಮತ್ತು ಗುರುವಿನ ಕರುಣೆ ಬೇಕು. ಪರಮಾತ್ಮನು ಇಚ್ಛಿಸಿದ ವ್ಯಕ್ತಿಗೆ ಮಾತ್ರ ಈ ಜ್ಞಾನ ಸಿಗುತ್ತದೆ.

ಈ ಜ್ಞಾನ ಹೊಂದಿ ಆತ್ಮ ಪರಮಾತ್ಮರ ಮಹೋನ್ನತ ಸಂಬಂಧ ಹೊಂದಿದ ವ್ಯಕ್ತಿ ಮಹಾತ್ಮನಾಗುತ್ತಾನೆ. ದೇವನ ಸ್ನೇಹಿತನಾಗುತ್ತಾನೆ. ಅಂತಹ ಮಹಾತ್ಮರು ಜನರ ವೈಯಕ್ತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ರಕ್ಷಿಸುತ್ತಾರೆ. ಸಾಮಾನ್ಯ ಜನರನ್ನು ಪ್ರಾಪಂಚಿಕ ತೊಂದರೆಗಳಿಂದ ಮುಕ್ತಗೊಳಿಸಲು ಶ್ರಮಿಸುತ್ತಾರೆ. ಮಾನವನ ಇಹ ಮತ್ತು ಪರಲೋಕದ ಬದುಕು ಹಸನುಗೊಳಿಸಲು ಪ್ರಯತ್ನಿಸುತ್ತಾರೆ. ಇಂತಹ ಮಹಾತ್ಮರು ಮಾನವ ಕುಲವನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಪರಮಾತ್ಮನ ಇಚ್ಛೆಯ ಮೇರೆಗೆ ಲೋಕ ಕಲ್ಯಾಣಕ್ಕೆ ಬಂದ ಈ ಸತ್ಪುರುಷರು ಈ ಲೋಕ ಬಿಟ್ಟರೂ ಲೋಕದ ಕಲ್ಯಾಣ ಕಾರ್ಯ ಅವರಿಂದ ನಡೆದಿರುತ್ತದೆ. ಅವರು ಸದಾ ಜಾಗೃತರು. ಅಂತಹ ಮಹಾ ಆಧ್ಯಾತ್ಮವಾದಿ ದೇವಪ್ರಿಯ ಸತ್ಪುರುಷರಲ್ಲಿ ಅಬ್ದುಲ್ ಹಸನ್ ಖಾದ್ರಿಯವರೂ ಒಬ್ಬರು. ಈಗಲೂ ಭಕ್ತರು ಇಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಪಡೆಯುತ್ತಾರೆ. ಇವರ ದರ್ಶನದಿಂದ ಆತ್ಮಶಾಂತಿ ಹೊಂದುತ್ತಾರೆ.

ಇವರ ಮೂಲಸ್ಥಾನ ಇಲಕಲ್ ಸುಮಾರು ೩೫೦ ವರ್ಷ ಇತಿಹಾಸವಿರುವ ಈ ದರ್ಗಾಕ್ಕೆ ದೇಸಾಯಿ ಮನೆತನದವರು ಭೂಮಿಯನ್ನು ನೀಡಿದರು. ಹಿಂದೂ ಮತ್ತು ಇಸ್ಲಾಂ ಭಕ್ತರು ತಮ್ಮ ಬೇಡಿಕೆ ಈಡೇರಿದ ನಂತರ ಸಹಾಯ ಧನರೂಪದಲ್ಲಿ ದಾನವನ್ನು ನೀಡುತ್ತಿದ್ದರು. ಭಕ್ತರಿಂದಲೇ ಬಂದ ಹಣದಿಂದ ದರ್ಗಾವನ್ನು ಅಭಿವೃದ್ಧಿ ಪಡಿಸಿ ಸೌಹಾರ್ದತೆಗೆ ಪ್ರಯತ್ನಿಸುತ್ತಿದ್ದಾರೆ. ಅಷ್ಟೆ ಅಲ್ಲದೇ ಈ ದರ್ಗಾಕ್ಕೆ ಸಂಬಂದಿಸಿದ ಸಮಿ ತಿಯನ್ನು ರಚಿಸಿ ಅದರ ಮೂಲಕ ಸರ್ವರ ಹಿತಾಸಕ್ತಿಯನ್ನು ಬಯಸುವಲ್ಲಿ ಶ್ರಮಿಸುತ್ತಿದ್ದಾರೆ.

**ಪವಾಡ ಮತ್ತು ನಂಬಿಕೆಗಳು :**

ಪ್ರತಿಯೊಬ್ಬ ಮಹತ್ಮರು ತಮ್ಮ ವೃತ್ತಿ ಜೀವನದಲ್ಲಿ ಒಂದಲ್ಲಾ ಒಂದು ಸಾಧನೆಯನ್ನು ಹಲವು ಪವಾಡಗಳನ್ನು ಮಾಡುವುದರ ಮೂಲಕ ಎಂದೆಂದಿಗೂ ಜನ ಮನಗಳಲ್ಲಿ ಅಚ್ಚಳಿಯದೆ

ಉಳಿದುಕೊಂಡಿದ್ದಾರೆ. ಹಾಗೆಯೇ ಅಂದಿನಿಂದ ಇಂದಿನವರೆಗೂ ಅನೇಕ ಭಕ್ತರಿಗೆ ಹಲವಾರು ಸಮಸ್ಯೆಗಳು ಈಡೇರಿ ನಂಬಿಕೆಯನ್ನು ಹುಟ್ಟಿಸಿವೆ.

೧. ಪಕ್ಕದ ಊರಿನಿಂದ ಯಲಬೆಂಚಿ ಗ್ರಾಮದ ದೇಸಾಯಿಯವರ ಮಗನಿಗೆ ಕುಷ್ಟರೋಗವಿತ್ತು. ಈ ವಿಷಯವನ್ನು ಖಾದ್ರಿಯವರಿಗೆ ತಿಳಿಸಿದಾಗ ನಮಾಜ್ ಮಾಡುವಂತಹ ಸಂದರ್ಭದಲ್ಲಿ ನೀರನ್ನು ಬಾಯಿಯಲ್ಲಿ ಹಾಕಿಕೊಂಡು ರೋಗ ಹತ್ತಿದ ಕೈಗೆ ಉಗುಳಿದರು. ಆಗ ದಿನಗಳೆದಂತೆ ರೋಗ ವಾಸಿಯಾಯಿತೆಂದು ಜನರು ಹೇಳುತ್ತಾರೆ.

೨. ಅದೇ ದೇಸಾಯಿ ಕುಟುಂಬದವರಿಗೆ ಮಕ್ಕಳಾಗಿರಲಿಲ್ಲ. ಅವರು ಈ ದರ್ಗಾಕ್ಕೆ ನಡೆದುಕೊಂಡ ಮೇಲೆ ಖಾದ್ರಿಯವರು ಇವರಿಗೆ ನಮಾಜ್ ಮಾಡಲು ಹೇಳಿದರು. ಆಗ ಗಂಡು ಮಗು ಜನಿಸಿತು. ಈ ಮಗು ವಯಸ್ಸಿಗೆ ಬಂದ ಮೇಲೆ ಆಕಸ್ಮಿಕವಾಗಿ ಆ ಮಗುವಿಗೆ ಹಾವು ಕಚ್ಚಿತು. ಕೆಲ ಕಾಲದ ನಂತರ ಆ ಮಗುವನ್ನು ತಂದು ದರ್ಗಾದಲ್ಲಿ ಮಲಗಿಸಿ ಬೇಡಿಕೊಂಡರು. ಆಗ ಖಾದ್ರಿಯವರು ಎರಡು ಬಾರಿ ನಮಾಜ್ ಮಾಡುವುದರೊಳಗಾಗಿ ಕಚ್ಚಿದ ಹಾವು ಮರಳಿ ಬಂದು ಕಚ್ಚಿದ ಜಾಗದಿಂದ ಮರಳಿ ವಿಷವನ್ನು ತೆಗೆದುಕೊಂಡು ಹೋಯಿತಂತೆ.

೩. ವಚನ ನಡೆಯುವಂತಹ ಸಂದರ್ಭದಲ್ಲಿ ಗೋಡೆಯ ಮೇಲೆ ಕುಳಿತು ಆ ಗೋಡೆಗೆ ನಡೆ ಎಂದರು. ಆಗ ಆ ಗೋಡೆಯು ಕುದುರೆಯಂತೆ ಓಡಿತಂತೆ. ಹೀಗೆ ಹಲವಾರು ಪವಾಡ, ನಂಬಿಕೆಗಳು ಇಂದಿಗೂ ಜನ ಮನದಲ್ಲಿ ಅಚ್ಚಳಿಯದೇ ಉಳಿದಿವೆ. ಹಾಗೆಯೇ ಚರ್ಮರೋಗ, ಮಾನಸಿಕ ಕಾಯಿಲೆ, ಕುಷ್ಠರೋಗ ಮುಂತಾದವುಗಳನ್ನು ಒಳಗೊಂಡ ರೋಗಿಗಳು ಈ ದರ್ಗಾಕ್ಕೆ ನಡೆದುಕೊಂಡವರು ಗುಣಮುಖವಾಗಿದ್ದಾರೆ.

೪. ಉರುಸ್ ನಡೆಯುವಂತಹ ಸಂದರ್ಭದಲ್ಲಿ ಭಕ್ತಾದಿಗಳು ತಾತನವರನ್ನು ಹುಲಿಯಾಗಿ ನೀವು ಇಲ್ಲಿ ಕಾಣಬೇಕೆಂದು ಕೇಳಿಕೊಂಡರು. ತಾತನವರು ಅದನ್ನು ಮರೆಮಾಚಲು ಪ್ರಯತ್ನಿಸಿದರೂ ಜನ ಕೇಳಲಿಲ್ಲ. ಕೊನೆಗೆ ಭಕ್ತರ ಇಚ್ಚೆಯ ಮೇರೆಗೆ ತಾತನವರು ಮಾಯವಾಗಿ ಹುಲಿಯಾಗಿ ಕಾಣಿಸಿಕೊಂಡರು. ಆಗ ಅಲ್ಲಿ ಸೇರಿದ್ದ ಭಕ್ತಾದಿಗಳು ದಿಕ್ಕಪಾಲಾಗಿ ಓಡಹತ್ತಿದರು. ಮತ್ತೇ ತಾತನವರು ಇದ್ದಕಿದ್ದಂತೆ ಮನುಷ್ಯ ರೂಪ ಹೊಂದಿದರೆಂಬ ನಂಬಿಕೆ ಜನಪದರಲ್ಲಿದೆ. ."೨೭

ತಾತನವರು ಬಿಜಾಪೂರು ಜಿಲ್ಲೆ ತಾಳಿಕೋಟೆಗೆ ಹೋಗಿದ್ದರು. ಆಗ ಅಲ್ಲಿಯ ಬರಗಾಲದಿಂದಾಗಿ ಕೆರೆ, ಬಾವಿಗಳು ಒಣಗಿ ಹೋಗಿದ್ದವು. ಜನರು ಹಸಿವು ನೀರಡಿಕೆಗಳ ಬಾಧೆಯನ್ನು ತಾಳದೇ ತತ್ತರಿಸಿ ಪ್ರಾಣ ನೀಗುತ್ತಿದ್ದರು. ಇದನ್ನೆಲ್ಲ ಕಂಡು ಗುರುಗಳು ದೇವರಲ್ಲಿ ಮಳೆಗಾಗಿ ಪ್ರಾರ್ಥಿಸಿದರು. ಅಂದೇ ಅಲ್ಲಿ ದೈವಾನುಗ್ರಹದಿಂದ ಧಾರಾಕಾರವಾಗಿ ಮಳೆ ಸುರಿಯಿತು. ಇದಲ್ಲದೇ ತಮ್ಮ ಕೃಪಾಶೀರ್ವಾದದಿಂದ

ಮಕ್ಕಳಿಲ್ಲದವರಿಗೆ ಮಕ್ಕಳಾದರು. ಅಲ್ಲದೇ ಅನೇಕ ದುರ್ಮಾರ್ಗಿಗಳನ್ನು, ಸನ್ಮಾರ್ಗಿಗಳನ್ನಾಗಿ ಪರಿವರ್ತಿಸಿದರು. ಒಟ್ಟಿನಲ್ಲಿ ಕೃಪಾನುಗ್ರಹಗಳ ಒಂದು ಸಮುದ್ರವೇ ಹರಿಯುತ್ತಿತ್ತು. ಇದರಲ್ಲಿ ಸಹಸ್ರಾರು ಜನ ಬಾಹ್ಯ ಹಾಗೂ ಆಂತರಿಕವಾಗಿ ಪುನೀತರಾಗುತ್ತಿದ್ದರು. ಜಾತಿ ಭೇದಗಳಿಲ್ಲದೇ ಸರ್ವರೂ ಆಶೀರ್ವಾದ ಪಡೆಯುತ್ತಿದ್ದರು.

ಹೀಗೆ ಮುಂದುವರೆದ ಶ್ರೀಗಳು ಒಮ್ಮೆ ತಮ್ಮ ಅಜ್ಜನವರಾದ ಅಬ್ದುಲ್‌ಷಾಹ ಖಾದರಿಯವರ ದರ್ಶನ ಮಾಡಬಯಸಿದರು. ಅನೇಕ ಸ್ಥಳಗಳ ಪ್ರವಾಸ ಮಾಡುತ್ತಾ ಕೆಂಭಾವಿಗೆ ಬಂದು ತಲುಪಿದರು. ತಮ್ಮ ಅಜ್ಜನವರ ದರ್ಶನ ಮಾಡಿಕೊಂಡರು. ಇವರ ಜೊತೆಯಲ್ಲಿ ಬೇರೆ ಧರ್ಮದ ಒಬ್ಬ ಶ್ರೀಮಂತ ವ್ಯಾಪಾರಿ ಇರುತ್ತಿದ್ದನು ಅವನಿಗೆ ಬಬ್ಬನೇ ಮಗನಿದ್ದನು. ಆಕಸ್ಮಿಕ ಒಂದು ದಿನ ಆ ಮಗುವಿಗೆ ಹಾವು ಕಚ್ಚಿದ ಕಾರಣ ಆ ಮಗು ಮೃತಪಟ್ಟಿತು. ಆಗ ತಾಯಿ – ತಂದೆಗಳು ಗೋಗರೆಯ ಹತ್ತಿದರು. ಅಷ್ಟರಲ್ಲಿ ಯಾರೋ ಒಬ್ಬರು ಮಾಸಾಬಿ ದರ್ಗಾದಲ್ಲಿ ಒಬ್ಬ ಶರಣರ ಆಗಮವಾಗಿದೆ. ನೀವು ಅವರನ್ನು ಕಂಡರೆ, ಅವರ ಅನುಗ್ರಹದಿಂದ ನಿಮ್ಮ ಮಗು ಬದುಕಿದರೂ ಬದುಕಬಹುದು ಎಂದರು.

"ಕಾರಣ ಆ ವ್ಯಾಪಾರಿ ತನ್ನ ಮೃತ ಮಗುವನ್ನು ತೆಗೆದುಕೊಂಡು ಗುರುಗಳ ಸನ್ನಿಧಿಗೆ ಸೇರಿದನು. ಅತ್ತು ಗುರುಗಳಲ್ಲಿ ಮೊರೆ ಇಟ್ಟನು. ಆಗ ಗುರುಗಳು ಇದ್ದ ಸಂಗತಿಯನ್ನು ಕೇಳಿ ಅಲ್ಲಾಹನ ದರ್ಬಾರಿನಲ್ಲಿ ಮೊರೆಯಿಟ್ಟರು. ಸರ್ವರೂ ನೋಡುತ್ತಿದ್ದ ಹಾಗೆಯೇ ಒಂದು ಸರ್ಪ ಅಲ್ಲಿಗೆ ಬಂದು ಮಗುವಿನ ದೇಹದಲ್ಲಿ ಎಲ್ಲಿ ಕಚ್ಚಿತ್ತೋ ಅಲ್ಲಿಂದ ವಿಷ ಹೀರಹತ್ತಿತು. ಆ ತಕ್ಷಣ ಮಗುವು ಅಲ್ಲಾಹನ ನಾಮ ಸ್ಮರಿಸುತ್ತಾ ಎದ್ದು ನಿಂತಿತು. ಆಗ ಗುರುಗಳು ಹಾವಿನ ಮುಂದೆ ಒಂದು ಬಟ್ಟಲನ್ನು ಇಟ್ಟು ಹೀರಿದ ವಿಷವನ್ನು ಅದರಲ್ಲಿ ಉಗುಳಲು ಹೇಳಿದರು. ಹಾವು ಹಾಗೆ ಮಾಡಿತು. ಗುರುಗಳು ಆ ಬಟ್ಟಲನ್ನು ತೆಗೆದುಕೊಂಡು ಬಿಸ್ಮಿಲ್ಲಾ ಎಂದು ಹೇಳುತ್ತಾ ಕುಡಿದು ಬಿಟ್ಟರು. ಆದರೆ ಆ ವಿಷವು ಯಾವ ಪರಿಣಾಮವನ್ನು ಬೀರಲಿಲ್ಲ. ಈ ಪವಾಡವನ್ನು ಕಂಡು ಅನೇಕರು ಶಿಷ್ಯವೃಂದದಲ್ಲಿ ಸೇರಿಕೊಂಡರು."[15] ಈ ಪವಾಡಗಳನ್ನು ನಾವು ಸಂದರ್ಶನಕ್ಕೆ ಹೋದಂತ ಸಂದರ್ಭದಲ್ಲಿ ಅಲ್ಲಿನ ವಕ್ತೃಗಳು ತಿಳಿಸಿದ್ದಾರೆ.

**ಗುರುದೀಕ್ಷೆ ಮತ್ತು ಶಿಷ್ಯ ಸಮುದಾಯ :**

ಗುರುಗಳು ತಮ್ಮ ಮೊಮ್ಮಗನಾದ ಅಬ್ದುಲ್ಲಾ ಷಾಹ ಖಾದ್ರಿಗಳವರಿಗೆ ಗುರುದೀಕ್ಷೆ ನೀಡಿ ಪಟ್ಟಾಭಿಷೇಕ ಮಾಡಿದರು. ಅವರಿಗೆ ಒಂದು ಮಗುವಾಯ್ತು. ಅವರಿಗೆ ದಾದಾಪೀರ ಇವರ ಹೆಸರಿನ ಮೇಲೆ ಸೈಯದ್ ಷಾಹ ಮುರ್ತುಜಾ ಖಾದ್ರಿ ಎಂದು ನಾಮಕರಣ ಮಾಡಲಾಯಿತು. ಇವರು ಹುಟ್ಟುತ್ತಲೇ ಶರಣರಿದ್ದರು. ಅವರ ಸಾಕಷ್ಟು ಪವಾಡಗಳನ್ನು ನೋಡಿದ ಜನರು ಈಗಲೂ ಜೀವಿತರಾಗಿದ್ದಾರೆ. ಅವರು ೧೯೪೦ ನೇ ಇಸ್ವಿಯಲ್ಲಿ ಲಿಂಗೈಕ್ಯರಾದರು. ಅವರ ಸಮಾಧಿಯು ಹನಮುಸಾಗರದಲ್ಲಿದೆ. ಅವರಿಗೆ ಇಬ್ಬರು ಮಡದಿಯರು. ಮೊದಲನೆಯವರು ಆನಾಹೊಸೂರ

ಗ್ರಾಮದವರು ಅವರ ಮರಣಾನಂತರ ಗುರುಗಳು ಎರಡನೇ ಮದುವೆಯನ್ನು ಗುಲಬರ್ಗಾದ ಹಜರತ್ ಸೈಯ್ಯದ ಷಾಹ ಮಗದೂಮ್ ಹುಸೇನಿ ಸಾಹೇಬ್, ತೇಗ್‌ಬರಹನಾ ಇವರ ಜೇಷ್ಠ ಪುತ್ರಿಯೊಡನೆ ಮದುವೆ ಮಾಡಿಕೊಂಡರು. ಆ ಮಡದಿಯು ಸಹರ್‌ವರ್ದಿಯ ವಂಶಸ್ಥರ ಸಂಬಂಧವುಳ್ಳವರು. ಆದರೆ ಗುರುಗಳಿಗೆ ಈರ್ವ ಮಡದಿಯರಿಂದಲೂ ಸಂತಾನವಾಗಲಿಲ್ಲ.

ಇದರಿಂದ ಗುರುಗಳು ಅಸ್ವಸ್ಥರಾದರು. ಬದುಕುವ ಆಸೆ ಇಲ್ಲದಾಯ್ತು. ಆಗ ಅವರು ಇಲಕಲ್ ಮತ್ತು ಹನಮಸಾಗರದ ಸರ್ವ ಭಕ್ತಾದಿಗಳನ್ನು ಕರೆದು ತಮ್ಮ ನಿರ್ಧಾರವನ್ನು ಈ ರೀತಿ ವಿವರಿಸಿದರು. "ನಾನು ಸಂತಾನ ರಹಿತ" ನನ್ನ ಬಂಧುಗಳಲ್ಲಿ ಯಾರೂ ಇಲ್ಲ. ಆದಕಾರಣ ನನ್ನ ತರುವಾಯ ನನ್ನ ಮಡದಿಯ ಮಧ್ಯಮ ಅಣ್ಣನಾದ ಸೈ, ಅಹ್ಮದ ಹುಸೇನಿ ತಂದಿ ಸೈಯ್ಯದ ಷಾಹ ಮಗದೂಮ್ ಹುಸೇನ ತೇಗ್‌ಬರಹನಾ ಪಟ್ಟಾಧಿಕಾರಿಗಳಾಗುವರು.

ಆ ಮೇಲೆ ನನ್ನ ಮಡದಿಯ ಹಿರಿಯ ಅಣ್ಣನಾದ ಸೈ. ಮಹ್ಮದ ಹುಸೇನಿ. ತಂದಿ ಸೈಯ್ಯದ ಷಾಹ ಮಗದೂಮ್ ಹುಸೇನಿ ತೇಗ್‌ಬರಹನಾ ಇವರಿಗೆ ಒಂದು ಗಂಡು ಮಗುವಾಗುವದು. ಅವನಿಗೆ ನನ್ನ ಉಡುಗರೆಯಾದ ಈ ದೀಕ್ಷೆಯನ್ನು ಕೊಟ್ಟು ನನ್ನ ಈ ಸಂಸ್ಥಾನದ ಪಟ್ಟಾಧಿಕಾರಿಯನ್ನಾಗಿ ಮಾಡಬೇಕು. ಅವನಿಂದಲೇ ನನ್ನ ಶಿಷ್ಯ ಶ್ರೇಣಿಯು ಸದಾಕಾಲ ದೀಕ್ಷೆಯು ಪಡೆಯುತ್ತಲಿರುವದು. ಅದೇ ರೀತಿ ಈ ಸಾಮಾನ್ಯನ ಜನನ ವಾಯ್ತು. ಮತ್ತು ಸೈ. ಅಬ್ದುಲ್ ಖಾದ್ರಿ ಹನಮಸಾಗರ ಇವರ ಆದೇಶದಂತೆ ಸರ್ವ ಶ್ರದ್ದೆವುಳ್ಳ ಭಕ್ತಾದಿಗಳ ಸಮ್ಮುಖದಲ್ಲೇ ಈ ಸಾಮಾನ್ಯ ಸಂತನಿಗೆ ೧೯೫೨ ನೇ ಇಸ್ವಿಯಲ್ಲಿ ಹನಮಸಾಗರ ಗ್ರಾಮದ ಖಾದರಿಯಾ ಆಸ್ಥಾನದಲ್ಲಿ ದೀಕ್ಷೆಯನ್ನು ಕೊಟ್ಟು ಪಟ್ಟಾಧಿಕಾರಿಯನ್ನಾಗಿ ಮಾಡಿದರು.

**ಹನುಮಸಾಗರದಿಂದ ಇಲಕಲ್ಲಗೆ ವಲಸೆ: (ಶ್ರೀ ಮಹಾಂತ ಸ್ವಾಮಿಗಳ ಭೇಟಿ)**

ಈ ಸ್ಥಳದಿಂದ ಒಂಬತ್ತು ಮೈಲು ದೂರದಲ್ಲಿ ಇಲಕಲ್ಲ ಎಂಬ ಬಾಗಲಕೋಟೆ ಜಿಲ್ಲೆಯ ಒಂದು ಗ್ರಾಮವಿದೆ. ಅಲ್ಲಿಯೂ ಸಾಕುಷ್ಟು ಜನರು ಗುರುಗಳ ಭಕ್ತಾದಿಗಳಿದ್ದಾರೆ. ಅವರೆಲ್ಲರ ಬೇಡಿಕೆಯ ಮೇರೆಗೆ ಇವರು ಇಲಕಲ್‌ಗೆ ಆಗಮಿಸಿ ತಟಗಾರ ಮಸೂದಿಯಲ್ಲಿ ವಾಸಿಸಿದರು. ಇವರು ಯಾವಾಗಲೂ ಕುದುರೆಯ ಮೇಲೆ ಸವಾರಿ ಮಾಡುತ್ತಿದ್ದರು. ಜೊತೆಯಲ್ಲಿ ಘೋಕುರ್‌ಶ ಎಂಬುವನು ಸದಾ ಸೇವೆಯಲ್ಲಿರುತ್ತಿದ್ದನು. ನೂರಾರು ಭಕ್ತರು ತಮ್ಮ ದುಃಖಗಳನ್ನು ಗುರುಗಳ ಸನ್ನಿಧಿಯಲ್ಲಿ ಹೇಳಿಕೊಳ್ಳುತ್ತ ಅವರ ಕೃಪಾಶೀರ್ವಾದ ಪಡೆಯುತ್ತಿದ್ದರು. ಅವರ ಸಮೂಹವೂ ಗುರುಗಳ ಸನ್ನಿಧಿಯಲ್ಲಿ ಸದಾ ಇರುತ್ತಿತ್ತು. ಆಕಸ್ಮಿಕವಾಗಿ ಆ ಮಧ್ಯ ಇಲಕಲ್ಲ ಗ್ರಾಮಕ್ಕೆ ಕಾಲರಾ ರೋಗ ಹಬ್ಬಿದ ಕಾರಣ ಸಾಕಷ್ಟು ಜನ ಸಾವನ್ನಪ್ಪುತ್ತಿದ್ದರು. ಇದರಿಂದಾಗಿ ಪುರದ ನಿವಾಸಿಗಳು ಹೌಹಾರಿದ್ದರು. ಈ ಮಧ್ಯ ಶ್ರದ್ದಾವುಳ್ಳ ಅನೇಕ ಭಕ್ತರು ಗುರುಗಳ ಸನ್ನಿಧಿಗೆ ಬಂದು ಈ ಸಾಂಕ್ರಾಮಿಕ ರೋಗದಿಂದ ಜನ ಸಮೂಹವನ್ನು

ಸಂರಕ್ಷಿಸಬೇಕೆಂದು ಮೊರೆಯಿಟ್ಟರು. "ಗುರುಗಳ ಅನುಗ್ರಹದಿಂದ ಆಗ ಊರಲ್ಲಿ ಶಾಂತಿ ನೆಲೆಸಿತು. ಈ ಮಧ್ಯ ಗುರುಗಳ ಪ್ರಶಂಸೆಯನ್ನು ಕೇಳಿ ಲಿಂಗಾಯತ ಸಮಾಜದ ಧರ್ಮಗುರುಗಳು ಚಿತ್ತರಗಿಯಿಂದ ಇಲಕಲ್ಲಿಗೆ ಆಗಮಿಸಿ ಗುರುಗಳ ಜೊತೆ ಭೇಟಿ ಆಗಬೇಕೆಂದು ಇಚ್ಛಿಸುತ್ತಿದ್ದರು. ಶಿಷ್ಯನೊಬ್ಬ ಗುರುಗಳಿಗೆ ಮಾಂಸವನ್ನು ತೆಗೆದುಕೊಂಡು ಹೊರಟಿದ್ದನು. ಆಗ ಕೆಲವು ಅಸೂಯಾ ಪ್ರವೃತ್ತಿವುಳ್ಳವರು ಹಿಡಿದು ಕೇಳಿದರು. ಆಗ 'ಹೂಗಳನ್ನು ತೆಗೆದುಕೊಂಡು ಹೋಗುತ್ತಿದ್ದೇನೆ' ಎಂದು ಹೇಳಿದನು. ಆದರೆ ಆ ಕಿಡಿಗೇಡಿಗಳು ನಂಬಲಿಲ್ಲ. ಮತ್ತು ಅವನನ್ನು ಹಿಡಿದುಕೊಂಡು ಚಿತ್ತರಗಿ ಸ್ವಾಮಿಗಳಾದ ಮಹಾಂತಸ್ವಾಮಿಗಳವರ ·ಹತ್ತಿರ ಎಳೆದುಕೊಂಡು ಹೋಗಿ ಇವನು ಮುಸ್ಲಿಂ ಸಂತನೊಬ್ಬನ ಭಕ್ತನಾಗಿಯೂ ಅವರ ಸೇವೆಗೆ ಮಾಂಸವನ್ನು ತೆಗೆದುಕೊಂಡು ಹೋಗುತ್ತಿದ್ದಾನೆ ಎಂದು ಆಪಾದಿಸಿದರು."[8]

ಆ ಭಕ್ತನು ಭಯ ಭೀತನಾಗಿ ಮನಸ್ಸಿನಲ್ಲಿಯೇ ಗುರುಗಳನ್ನು ಕಾಪಾಡಲು ಕರೆದನು. ಆಗ ಶ್ರೀ ಅಬ್ದುಲ್ ಹಸನ್ ಖಾದ್ರಿ ಇವರು ತಮ್ಮ ಸ್ಥಳದಲ್ಲಿಯೇ ನಮಾಜು ಮಾಡುತ್ತಿದ್ದರು. ತಮ್ಮ ಭಕ್ತನ ಕೂಗು ಕೇಳಿದೊಡನೆಯೇ ಒಂದು ಪವಾಡವೆಂಬಂತೆ ಘಟನಾ ಸ್ಥಳದಲ್ಲಿ ಕಾಣಿಸಿಕೊಂಡು ಹೇಳಿದಂತೆ ತೆಗೆದು ತೋರಿಸು ಎಂದು ತಮ್ಮ ಭಕ್ತನಿಗೆ ಆದೇಶಕೊಟ್ಟರು. ಗುರುಗಳ ಸಮ್ಮುಖದಲ್ಲಿಯೇ ಕಂಡು ತನ್ನ ಗಂಟನ್ನು ಬಿಚ್ಚಿ ತೋರಿಸಿದಾಗ, ಅದರಲ್ಲಿ ಮಲ್ಲಿಗೆ ಹೂಗಳು ಮಾತ್ರ ಇದ್ದವು. ಈ ಪವಾಡವನ್ನು ಕಂಡು ಸರ್ವರೂ ಶ್ರದ್ದೆಯಿಂದ ತಲೆಬಾಗಿದರು. ಅಂದಿನಿಂದ ಶ್ರೀಮಾನ್ ಸ್ವಾಮಿ ಮತ್ತು ಮುರ್ತುಜಾ ಖಾದರಿ ಇವರಲ್ಲಿ ಗಾಢವಾದ ಸ್ನೇಹ ಬೆಳೆಯಿತು. ಇಸ್ಲಾಂ ಧರ್ಮದ ಆದೇಶದಂತೆ, ಸರ್ವ ಧರ್ಮಗಳಿಗೆ ಹಾಗೂ ಧರ್ಮ ಗುರುಗಳಿಗೆ ಮನ್ನಣೆ ಕೊಡಬೇಕೆಂದು ಖಾದ್ರಿಗಳವರು ಸರ್ಮ ಧರ್ಮ ಸಹಿಷ್ಣತೆಯನ್ನು ಮೆರೆದರು.

ಏತನ್ಮಧ್ಯೆ ರುದ್ರಮುನಿ ಸ್ವಾಮಿಗಳವರೂ ಈ ಗುರುಗಳ ಭೇಟಿಗಾಗಿ ಆಗಮಿಸಿದರು. ಶ್ರೀ ಮಹಾಂತ ಸ್ವಾಮಿಗಳು, ಶ್ರೀ ರುದ್ರಮುನಿ ಸ್ವಾಮಿಗಳು ಮತ್ತು ಅಬ್ದುಲ್ ಹಸನ್ ಖಾದ್ರಿಯವರು ಪರಮ ಸ್ನೇಹಿತರಾದರು. ಒಮ್ಮೆ ಶ್ರೀ ಮಹಾಂತ ಸ್ವಾಮಿಗಳವರ ಒಬ್ಬ ಭಕ್ತನು ಸ್ವಾಮಿಗಳ ಪಾದ ಪೂಜೆ ಮಾಡುವ ಉದ್ದೇಶದಿಂದ ಸಡಗರದ ಸಮಾರಂಭದೊಂದಿಗೆ ತಮ್ಮ ಮನೆಗೆ ಕರೆದುಕೊಂಡು ಹೋದನು. ಇನ್ನೇನು ಪೂಜೆ ಪ್ರಾರಂಭಿಸಬೇಕೆನ್ನುವದರೊಳಗೆ ಶ್ರೀ ಅಬ್ದುಲ್ ಹಸನ್ ಖಾದ್ರಿಯವರು ಅಲ್ಲಿಗೆ ಆಗಮಿಸಿದರು. ಸ್ವಾಮಿಗಳು ಹಾಗೂ ಭಕ್ತನು ಹೌಹಾರಿದರು.

ಒಬ್ಬ ಮುಸಲ್ಮಾನ್ ಗುರುಗಳಿಗೆ ತನ್ನ ಪೂಜಾ ಗೃಹದಲ್ಲಿ ಹೇಗೆ ಕೊಂಡೊಯ್ಯಬೇಕು ಎಂದು ಅನುಮಾನಿಸುತ್ತಿದ್ದನು. ಕಾರಣ ಹೊರಮನೆಯಲ್ಲಿ ಒಂದು ಕುರ್ಚಿಯನ್ನು ಹಾಕಿ ಅಬ್ದುಲ್ ಹಸನ್ ಖಾದ್ರಿಯವರನ್ನು ಕೂಡಿಸಿ ಪೂಜಾ ಗೃಹಕ್ಕೆ ತೆರಳಿದನು. ಪೂಜೆಯು ಪ್ರಾರಂಭವಾದಾಗ ನಡೆದ ವಿಚಿತ್ರ ಸಂಗತಿ ಏನೆಂದರೆ ತಮ್ಮ ಗುರುಗಳಾದ ಶ್ರೀ ಮಹಾಂತ ಸ್ವಾಮಿಗಳವರ ಪಕ್ಕದಲ್ಲಿ ಮತ್ತೊಂದು ಕುರ್ಚಿಯ

ಮೇಲೆ ಸೈಯದ್ ಅಬ್ದುಲ್ ಹಸನ್ ಖಾದ್ರಿ ಯವರು ಪ್ರತ್ಯಕ್ಷಗೊಂಡಿದ್ದಾರೆ. ಹೌಹಾರಿ ಹೊರ ಬಂದು ನೋಡುತ್ತಾನೆ. ಹೊರ ಭಾಗದಲ್ಲಿ ಗುರುಗಳು ಹಾಗೆಯೇ ಆಸೀನರಾಗಿದ್ದಾರೆ. ಈ ರೀತಿ ಒಳ ಹೊರಗೆ ಎರಡು ಮೂರು ಸಲ ನೋಡಿದಾಗ್ಯೂ ಅದೇ ಸಂಗತಿ ಕಂಡು ಬಂದಾಗ ಭಕ್ತ ಲಜ್ಜಿತನಾಗಿ ಗುರುಗಳ ಪಾದ ಕಮಲಗಳಿಗೆ ಎರಗಿದನು. ಧರ್ಮ ಗುರುಗಳಾದ ಈರ್ವರೂ ಒಬ್ಬರನೊಬ್ಬರು ನೋಡಿ ಮುಗುಳ್ನಗೆ ನಕ್ಕರು. ಭಕ್ತಾದಿಗಳು ಈರ್ವರ ಪಾದಗಳಿಗೆ ನಮಿಸಿ ಕಾಣಿಕೆಯನ್ನು ಸಲ್ಲಿಸಿದರು.

**ಶ್ರೀ ಅಬ್ದುಲ್ ಹಸನ್ ಖಾದ್ರಿ ಹಾಗೂ ಶ್ರೀ ಮಹಾಂತ ಸ್ವಾಮಿಗಳವರ ಮಧ್ಯೆ ಆದ ಒಪ್ಪಂದ ಮತ್ತು ಅದರ ಆಚರಣೆ :**

ಒಮ್ಮೆ ಇವರೀರ್ವರು ತಮ್ಮ-ತಮ್ಮ ಭಕ್ತ ವೃಂದದ ಮಧ್ಯ ಕುಳಿತುಕೊಂಡಾಗ ಆಕಸ್ಮಾತಾಗಿ ಶ್ರೀ ಖಾದ್ರಿಯವರು ನಾವೀರ್ವರು ಒಂದು ಸಮಯದಿಂದ ಮಿತ್ರರಾಗಿದ್ದೇವೆ. ನಾವೀರ್ವರು ಈ ಮಿತ್ರತ್ವದ ಹಕ್ಕು ಪರಿಪೂರ್ಣಗೊಳಿಸೋಣ. ಅದೇನೆಂದರೆ, ನಾನು ಮೃತಪಟ್ಟಾಗ ನೀನು, ನೀನು ಮೃತಪಟ್ಟಾಗ ನಾನು, ಒಬ್ಬರಿಗೊಬ್ಬರು ಮಣ್ಣು ಕೊಡಬೇಕು. ಇದಕ್ಕೆ ಶ್ರೀ ಮಹಾಂತ ಸ್ವಾಮಿಗಳು ಒಪ್ಪಿಕೊಂಡರು. ದೈವವಶಾತ್ ಅಬ್ದುಲ್ ಹಸನ್ ಖಾದ್ರಿಯವರು ಮೊದಲು ದೈವಾಧೀನರಾದರು. ವಚನದಂತೆ ಶ್ರೀ ಸ್ವಾಮಿಗಳು ಗುರುಗಳ ಸಮಾಧಿಗೆ ಆಗಮಿಸಿ ಮಣ್ಣು ಕೊಟ್ಟರು. ಆದರೆ ಕೆಲವು ಸಮಯದ ನಂತರ ಸ್ವಾಮಿಗಳೂ ಲಿಂಗೈಕ್ಯರಾದಾಗ ಅವರ ಸಮಾಜದ ಜನರು ಧರ್ಮದ ನೇಮದ ಅನುಸಾರವಾಗಿ ಸ್ವಾಮಿಯವರನ್ನು ಸಮಾಧಿಯಲ್ಲಿ ಇಟ್ಟರು.

ಆಗ ಖಾದ್ರಿಗಳವರ ಭಕ್ತಾದಿಗಳಲ್ಲಿ ಮತ್ತು ಮಹಾಂತ ಸ್ವಾಮಿಗಳ ಭಕ್ತಾದಿಗಳಲ್ಲಿ ಚರ್ಚೆ ಪ್ರಾರಂಭವಾಯಿತು. ಗುರುಗಳ ವಚನದಂತೆ ಅಬ್ದುಲ್ ಹಸನ ಖಾದ್ರಿಯವರು ಸ್ವಾಮಿಗಳವರ ಸಮಾಧಿಗೆ ಬಂದು ಮಣ್ಣು ಕೊಟ್ಟ ನಂತರವೇ ಸಮಾಧಿಯನ್ನು ಮುಚ್ಚಬೇಕೆಂದು ಮುಸ್ಲಿಂ ಬಾಂಧವರು ಹಟ ಮಾಡುತ್ತಿದ್ದರು. ಲಿಂಗೈಕ್ಯರಾಗಿ ಒಂದು ಕಾಲವಾದ ನಂತರ ಅವರು ಹೇಗೆ ಬದುಕಿ ಬರುವರೆಂದು ಸ್ವಾಮೀಜಿಯವರ ಶಿಷ್ಯ ಕೋಟಿಯ ತಕರಾರಾಗಿ ಇದರಿಂದಾಗಿ ಕೋಲಾಹಲವೇ ಪ್ರಾರಂಭವಾಯ್ತು. ಆಗ ಕೆಲವು ಬುದ್ದಿಜೀವಿಗಳು 'ಶರಣರ ಮಾತು ಶರಣರೇ ಬಲ್ಲರು'. ಅವರೀರ್ವರು ವಚನಬದ್ಧರಾಗಿರುವರೆಂಬುದನ್ನು ಕಾದು ನೋಡುವದು ನಮ್ಮ ಕರ್ತವ್ಯ. ಸಾಯುವದು ಮತ್ತು ಕೊಳೆಯುವದು ನಮ್ಮಂಥ ಸಾಮಾನ್ಯರ ಮಾತು. ಶರಣರು ಸಾಯುವದಿಲ್ಲ, ನಾವೆಲ್ಲರೂ ಸ್ವಲ್ಪ ಸಮಯ ಕಾದು ನೋಡೋಣವೆಂದು ಸಮಾಧಾನ ಪಡಿಸಿದರು. ಕಡೆಗೆ ಮಧ್ಯಾಹ್ನವಾಯ್ತು ಆ ಸಮಯ ಖಾದ್ರಿಯವರ ಆಸ್ಥಾನದಿಂದ ಬಿರುಗಾಳಿ ಎದ್ದಿತು. ತನ್ನ ಸಂಗಡ ಮಣ್ಣನ್ನು ಹೊತ್ತು ತಂದ ಆ ಸುಳಿಗಾಳಿಯು ನೇರವಾಗಿ ಬೀಸುತ್ತ ಬಂದು ಸ್ವಾಮೀಜಿಯವರ ಸಮಾಧಿಗೆ ಬಂದು ನಿಂತುಕೊಂಡಿತು. ಆಗ ನೋಡುತ್ತಾರೆ ಶ್ರೀ ಸ್ವಾಮಿಗಳವರ ಮೃತ ದೇಹದ ಮೇಲೆ ಮಣ್ಣು ಬಿದ್ದಿದೆ. ಈ ರೀತಿ ಗುರುಗಳ ವಚನ ಪೂರ್ಣವಾಯ್ತು. ಅಂದಿನಿಂದ ಇಲ್ಲಿಯವರೆಗೂ ಹನುಮಸಾಗರದಲ್ಲಿ ಜಾತಿ ಮತಗಳ ಯಾವ

ಗಲಭೆಗಳೂ ಆಗುವದಿಲ್ಲ. ಇಂದಿಗೂ ಜನಸಮೂಹ ಜಾತಿ ಮತಗಳ ಭೇದ ಭಾವಗಳಿಲ್ಲದೇ ಖಾದ್ರಿಯವರ ಆ ಸ್ಥಾನಕ್ಕೆ ದರ್ಶನ ನೀಡುತ್ತಿದ್ದಾರೆ. ಹನುಮಸಾಗರವು ಹಿಂದು ಮುಸ್ಲಿಂ ಬಾಂಧವ್ಯದ ಸಂಗಮವಾಗಿದೆ. ಧರ್ಮ ಗುರುಗಳಾದ ಈರ್ವರ ಸ್ನೇಹದ ಹೆಗ್ಗುರುತಿನಂತೆ ಈಗಲೂ ಯಾವ ಗಲಭೆಗಳಾಗುತ್ತಿಲ್ಲ.

**ಮುಪ್ಪಾವಸ್ಥೆಯಲ್ಲಿ ಅಪಾರ ದುಃಖ :**

ಗುರುಗಳಿಗೆ ಏಕ ಮಾತ್ರ ಕುವರನಿದ್ದನು. ಅವರ ಹೆಸರು ಸೈಯ್ಯದ ಷಾ ಅಬುಲ್ ಹಸನ್ ಖಾದ್ರಿ ನಡು ಹಂಗಾಮದಲ್ಲಿಯೇ ಅವರು ದೈವಾಧೀನರಾದರು. ಇದರಿಂದ ತಂದೆಯವರಿಗೆ ಅಪಾರ ದುಃಖವಾಗಿ ಅವರು ಇಹಲೋಕದ ನಿರಾಶಾಭಾವ ತಾಳಿದರು.

**ಲಿಂಗೈಕ್ಯರಾಗಿ ಪವಾಡ ಮಾಡಿದ್ದು :**

"ಹನುಮಸಾಗರದ ಕೆಲವು ಭಕ್ತಾದಿಗಳು ಗುರುಗಳಲ್ಲಿ ಬಂದು ಗುರುದೀಕ್ಷೆ ಪಡೆಯುವ ಆಪೇಕ್ಷೆಯಿಂದ ಬರುತ್ತಿದ್ದರು. ಮಾರ್ಗ ಮಧ್ಯದಲ್ಲಿಯೇ ಅವರಿಗೆ ಗುರುಗಳ ದರ್ಶನವಾಯಿತು. ಅವರೆಲ್ಲರಿಗೆ ದಾರಿಯಲ್ಲಿಯೇ ಗುರುದೀಕ್ಷೆಯನ್ನು ಕೊಟ್ಟು ತಮ್ಮ ಶಿಷ್ಯ ಶ್ರೇಣಿಯಲ್ಲಿ ಸೇರಿಸಿಕೊಂಡು ಅವರೆಲ್ಲರಿಗೂ ಇಲಕಲ್ಲ ಗ್ರಾಮಕ್ಕೆ ಹೋಗಲು ತಾವು ಆದೇಶ ಕೊಟ್ಟು, ತಾವು ಮುಂದೆ ಹೊರಟು ಹೋದರು. ಆ ಶಿಷ್ಯ ಸಮೂಹವು ಇಲಕಲ್ಲ ಮಾರ್ಗವಾಗಿ ಸ್ವಲ್ಪ ದೂರ ಹೋದ ನಂತರ ಇಲಕಲ್ಲ ಗ್ರಾಮದಿಂದ ಇಬ್ಬರು ಬರುತ್ತಿದ್ದರು. ಅವರೀರ್ವರ ಮಧ್ಯ ಮಾತುಕತೆಗಳು ನಡೆದಾಗ ಶ್ರೀ ಗುರುಗಳು ಲಿಂಗೈಕ್ಯರಾಗಿ ಮೂರು ದಿನಗಳಾದವು. ಇಂದು ನಾವಿಬ್ಬರೂ ಅದೇ ಸಮಾಚಾರವನ್ನು ಹನುಮಸಾಗರ ಹಾಗೂ ಇಲಕಲ್ ಜನರಿಗೆ ತಿಳಿಸಲು ಹೊರಟ್ಟಿದ್ದೇವೆ ಎಂದು ಭಕ್ತಾದಿಗಳು ತಿಳಿಸಿದರು."೩೦ ಹೀಗೆ ಸೈಯದ್ ಷಾಹ ಅಬ್ಬುಲ್ ಹಸನ್ ಖಾದ್ರಿಯವರು ಕೋಮು ಸೌಹಾರ್ದತೆಯನ್ನು ಮೆರೆಯುವಲ್ಲಿ ಸ್ಫೂರ್ತಿಯ ಸೆಲೆಯಾಗಿದ್ದರು.

**ಸೈಯದ್ ಪಾಷಾ ಹಮೀನೂದ್ದೀನ್ ಖಾದ್ರಿ :**

ಹಿಂದೂ, ಇಸ್ಲಾಂ ಮತ್ತು ಜೈನ ಧರ್ಮಗಳ ನಡುವೆ ಸೌಹಾರ್ದ ಮನೋಭಾವನೆ ತುಂಬುವಲ್ಲಿ ಈ ದರ್ಗಾವು ಪ್ರಮುಖ ಪಾತ್ರವಹಿಸಿದೆ. ಇದು ತಾವರಗೇರಾ ಗ್ರಾಮದಲ್ಲಿದ್ದು ಪ್ರತಿ ಗುರುವಾರ ಹಾಗೂ ಪ್ರತಿ ಅಮವಾಸೆ ದಿನದಂದು ತನ್ನದೇ ಆದ ಧಾರ್ಮಿಕ ಸಿದ್ಧಾಂತಗಳನ್ನು ಅನುಸರಿಸುತ್ತಾ ಬಂದಿದೆ. ಸುಮಾರು ೬೦೬ ವರ್ಷಗಳ ಚರಿತ್ರೆ ಹೊಂದಿರುವ ಈ ದರ್ಗಾವು ಅಲ್ಲಿನ ಸರ್ಕಾರದ ಜಾಗದಲ್ಲಿ ಕಟ್ಟಲ್ಪಟ್ಟಿದೆ.

ನಾಲ್ಕು ತಲೆಮಾರಿನ ವ್ಯಕ್ತಿಗಳಾದ ಸೈಯದ್ ವಲೀಸಾಬ್, ಸೈಯದ್ ಹುಸೇನ್, ಸೈಯದ್ ಸಾಹಿಬ್ ಮತ್ತು ಸೈಯದ್ ಹುಸೇನ್ ಎಂಬುವವರು ದರ್ಗಾವನ್ನು ನೋಡಿಕೊಂಡು ಹೋಗುತ್ತಿದ್ದಾರೆ.

ಈ ದರ್ಗಾಕ್ಕೆ ಸಂಬಂಧಿಸಿದಂತೆ ಮೂಜಾವರ್ ಎಂಬ ಸಂಘವನ್ನು ನಿರ್ಮಿಸಿ ಹಿಂದೂ ಮತ್ತು ಮುಸ್ಲಿಂರು ಇಬ್ಬರು ಪದಾಧಿಕಾರಿಗಳಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಈ ದರ್ಗಾಕ್ಕೆ ಹಾಗೂ ಗುಲ್ಬರ್ಗಾದ ಖಾಜಾ ಬಂದೇ ನವಾಜಾ ದರ್ಗಾಕ್ಕೆ ಸಂಬಂಧ ವಿರುವುದು ಕಾಣುತ್ತೇವೆ. ಹೈದ್ರಾಬಾದ್, ಹುಬ್ಬಳ್ಳಿ, ಬಳ್ಳಾರಿ, ಗದಗ ಹೀಗೆ ರಾಜ್ಯದ ಮತ್ತು ಹೊರ ರಾಜ್ಯದ ಸುಮಾರು ಹತ್ತು ಸಾವಿರಕ್ಕಿಂತ ಹೆಚ್ಚು ಭಕ್ತಾದಿಗಳು ಸೇರಿ ಉರುಸ್‌ನ್ನು ಆಚರಿಸುತ್ತಾರೆ. ಅಲ್ಲದೇ ಲಿಂಗಾಯತರು ಸಹ ತಮ್ಮ ಮನೆಯಲ್ಲಿ ಯಾವುದೇ ಮದುವೆ ಮಾಡಬೇಕೆಂದರೆ ಹಂದ್ರ ಹಾಕುವುದಕ್ಕಿಂತ ಮುಂಚೆ ದರ್ಗಾಕ್ಕೆ ದೀಡು ನಮಸ್ಕಾರ ಹಾಕಿ ಓದಿಕೆ ಮಾಡಿದ ನಂತರ ಹಂದ್ರ ಹಾಕುತ್ತಾರೆ. ಅಷ್ಟೇ ಅಲ್ಲದೇ ಮೆರವಣಿಗೆಯ ಸಂದರ್ಭದಲ್ಲಿ ನವದಂಪತಿಗಳು ಮೊದಲು ದರ್ಗಾಕ್ಕೆ ಬಂದು ನಮಸ್ಕರಿಸುವ ಸಂಪ್ರದಾಯ ಇಂದಿಗೂ ಈ ಊರಿನಲ್ಲಿ ಕಾಣುತ್ತೇವೆ.

**ಪವಾಡ ಮತ್ತು ನಂಬಿಕೆಗಳು :**

೧. ಸುಮಾರು ವರ್ಷಗಳ ಕಾಲದಿಂದಲೂ ಈ ದರ್ಗಾದಲ್ಲಿ ಹಲವಾರು ಪವಾಡ ಮತ್ತು ನಂಬಿಕೆಗಳು ಇರುವುದು ಕಾಣುತ್ತೇವೆ. ಅವುಗಳಲ್ಲಿ ಆ ದರ್ಗಾದಲ್ಲಿರುವ ಗಿಡದಿಂದ ಸಕ್ಕರೆಯು ಸದಾ ಬೀಳುತ್ತಿತ್ತು. ಆ ಎಲೆಗಳನ್ನು ಕುಷ್ಟರೋಗಿಗಳು ತಿಂದರೆ ರೋಗ ನಿವಾರಣಿಯಾಗುತ್ತದೆ.

೨. ದರ್ಗಾದ ಒಳಗಡೆ ಒಂದು ಗವಿಯಿದ್ದು ಅದರೊಳಗೆ ಏನಿದೆ ಎಂದು ಕುತೂಹಲದ ಮೂಲಕ ಪರೀಕ್ಷೆ ಮಾಡಲು ಹೋದವರು ರಕ್ತ ಕಾರಿ ಸತ್ತಿರುವ ಉದಾಹರಣೆಗಳಿವೆ. ಮೂರನೇಯದಾಗಿ ಈ ದರ್ಗಾದಿಂದ ಮೈನುದ್ದಿನ್ ಷಾಹಖಾದ್ರಿ ದರ್ಗಾದವರೆಗೆ ದಾರಿ ಇದೆ. ಇದನ್ನು ನೋಡಲು ಹೋಗಿ ಸತ್ತ ಉದಾಹರಣೆಗಳಿವೆ.

೩. ಖಾದ್ರಿಯವರು ಧ್ಯಾನಕ್ಕೆ ಕುಳಿತಾಗ ಹಸು ಬಂದು ಹಾಲುಣಿಸಿ ಹೋಗುತ್ತಿತ್ತು ಹಾಗೆಯೇ ಕುರುಡನೊಬ್ಬ ಖಾದ್ರಿಯವರನ್ನು ಭೇಟಿಯಾಗಿ ಧ್ಯಾನವನ್ನು ಆರಂಭಿಸಿದ, ಆಗ ಖಾದ್ರಿಗಳು ಕುರುಡನಿಗೆ ದರ್ಗಾ ಮುಂದಿರುವ ಖಾಲಿ ಜಾಗದಲ್ಲಿ ಸಸಿಗಳನ್ನು ನೆಡು ಎಂದು ಆಜ್ಞೆಯನ್ನು ಮಾಡಿದಾಗ ಅದನ್ನು ಕುರುಡ ವ್ಯಕ್ತಿ ಪರಿಪಾಲಿಸಿದಾಗ ಆಗ ಆತನಿಗೆ ಕಣ್ಣು ಬಂದವಂತೆ.

೪. ರಾಯಚೂರು ಜಿಲ್ಲೆಯ, ಸಿಂಧನೂರು ಪಟ್ಟಣದ ನಿವಾಸಿ ತಿಮ್ಮನ ಗೌಡರ ಮಗನಾದ ರಾಜಶೇಖರ ಅವರಿಗೆ ಬಹಳ ವರ್ಷ ಮಕ್ಕಳಾಗಿರಲಿಲ್ಲ. ಈ ದರ್ಗಾಕ್ಕೆ ನಡೆದುಕೊಂಡ ಮೇಲೆ ಈ ದಂಪತಿಗಳಿಗೆ ಒಂದು ಗಂಡು ಮಗುವಾಯಿತು. ಇದರ ಹರಕೆಯನ್ನು ತೀರಿಸಲು ದರ್ಗಾಕ್ಕೆ ತಮ್ಮದೇ ಆದ ಸಣ್ಣ ಸಹಾಯವನ್ನು ಕಾಣಿಕೆಯ ರೂಪದಲ್ಲಿ ಕೊಟ್ಟಿದ್ದಾರೆ.[೩೧]

ಸೂಫಿಗಳು ನಾಥರಿಂದ ರಹಸ್ಯ ಯೋಗವನ್ನು ತಿಳಿದಕೊಂಡಿದ್ದರು. ಯೋಗ ಪ್ರಾಣಾಯಾಮಗಳಿಂದ ತಮ್ಮ ದೇಹವನ್ನು ಗಟ್ಟಿಯಾಗಿಟ್ಟುಕೊಂಡಿದ್ದರು. ಹಿಂದೂಗಳಲ್ಲಿ ಕಂಡುಬರುವ ಯೋಗವನ್ನು ಇಸ್ಲಾಂ ಧರ್ಮದ ಸಮಾಜವನ್ನು ಎರಡನ್ನು ಸಮೀಕರಿಸುವುದರಿಂದ ಅವರಲ್ಲಿ ಎರಡು ಧರ್ಮಗಳ ಧಾರ್ಮಿಕತೆಯು ಪ್ರಫುಲ್ಲತೆಯಿಂದ ಕೂಡಿರುತ್ತಿದ್ದವು.

"ಕರ್ನಾಟಕದ ಎಲ್ಲಾ ಪಟ್ಟಣಗಳಲ್ಲಿ ಹಾಗೂ ಕೆಲವು ಹಳ್ಳಿಗಳಲ್ಲಿ ಗೋರಿಗಳಿವೆ. ಈ ಗೋರಿಗಳಲ್ಲಿ 'ವಲೀ'ಗಳಿರುತ್ತಾರೆಂದು ನಂಬಲಾಗಿದೆ. 'ವಲೀ'ಗಳೆಂದರೆ ಅಲ್ಲಾನ ಮಿತ್ರ ಎಂಬ ಅರ್ಥವಿದೆ. ಅನೇಕ ಸೂಫಿ ಸಂತರು ಇಸ್ಲಾಂ ಧರ್ಮ ಪ್ರಚಾರ ಮಾಡುತ್ತಾ ಭಾರತಕ್ಕೆ ಬಂದರು. ಇವರು ರಾಜಕೀಯವನ್ನು ತಿರಸ್ಕರಿಸಿದರು. ಹಿಂದೂ, ಮುಸ್ಲಿಮ್ ಎಂಬ ಭೇದವಿಲ್ಲದೆ, ಜನಸಾಮಾನ್ಯರ ನಡುವೆ ಇರಲು ಬಯಸಿದರು. ಅಲ್ಲಾನ ಭಕ್ತಿಯಲ್ಲಿ ಪರವಶರಾಗಿ ಇಹವನ್ನು ಮರೆತು ಸಾಧನೆಯಲ್ಲಿ ತೊಡಗಿ ಅನೇಕ ಶಕ್ತಿಗಳನ್ನು ತಮ್ಮದಾಗಿಸಿ ಕೊಂಡು, ಪವಾಡಗಳನ್ನು ತೋರಿಸುತ್ತಿದ್ದರು. ಇವರಿಂದ ಆಕರ್ಷಿತರಾದ ಜನಪದರು ಇವರ ಹತ್ತಿರ ಬಂದು ತಮ್ಮ ಸಂಕಷ್ಟಗಳಿಗೆ ಪರಿಹಾರ ಪಡೆಯುತ್ತಿದ್ದರು. ಇವರನ್ನು 'ವಲೀ'ಗಳೆಂದು ಕರೆದದ್ದಲ್ಲದೆ ಅನೇಕರು ಇವರ ಶಿಷ್ಯರಾದರು. ಹೀಗೆ ಗುರು ಶಿಷ್ಯ (ಪೀರ್ ಮುರೀದ್) ಪರಂಪರೆ ಬೆಳೆಯಲು ಕಾರಣವಾಯಿತು. ಇಂತಹ 'ವಲೀ'ಗಳಲ್ಲಿ ಕೆಲವರು ಜೀವಂತ ಸಮಾಧಿಯಾದರೆಂದು, ಪವಾಡಗಳನ್ನು ಮೆರೆದಿದ್ದರೆಂದು, ಒಬ್ಬೊಬ್ಬ 'ವಲೀ'ಗಳ ಬಗ್ಗೆ ಒಂದೊಂದು ಐತಿಹ್ಯಗಳಿವೆ. ವಲೀಗಳಲ್ಲಿ ಕೆಲವರನ್ನು 'ಜಲಾಲುದ್ದೀನ್'ಎಂದು ಕರೆಯುತ್ತಾರೆ. 'ಜಲಾಲುದ್ದೀನ್' ಎಂದರೆ ಉಗ್ರಗಾಮಿಗಳು ಎಂದರ್ಥ. ಇಂತಹವರ ಗೋರಿಯ ಹತ್ತಿರ ಸ್ತ್ರೀಯರು ಹೋಗುವ ಹಾಗಿಲ್ಲ. ದೂರದಲ್ಲಿ ನಿಂತು ದರ್ಶನ ಪಡೆಯುತ್ತಾರೆ. ವಲೀಗಳ ಹೆಸರಲ್ಲಿ ಹರಕೆ ಹೊತ್ತು ಪ್ರಾರ್ಥಿಸಿಕೊಂಡರೆ ಕಷ್ಟಗಳು ನಿವಾರಣೆಯಾಗುತ್ತದೆಂದು, ಕನಸಿನಲ್ಲಿ ಬಂದು ಶಸ್ತ್ರಚಿಕಿತ್ಸೆ ಮಾಡಿ ಕಾಯಿಲೆ ಗುಣಪಡಿಸುತ್ತಾರೆಂದು, ಜನಪದರು ಹೇಳುತ್ತಾರೆ."[31] ಈ ಮಾತು ಈ ಜಿಲ್ಲೆಯ ಸೂಫಿ ಸಂತರ ಪವಾಡಗಳಿಗೆ ಹೊರತಾಗಿಲ್ಲ ಎಂದು ಹೇಳಬಹುದು.

ಈ ಎಲ್ಲಾ ಕೋಮುಸೌಹಾರ್ದತೆಯ ತಾಣಗಳನ್ನು ಗಮನಿಸಿದರೆ ಸರ್ವ ಜಾತಿಯ ಜನರಿಗೆ ನಂಬಿಕೆಯ ತಾಣಗಳಾಗಿ ಕಾಣಿಸಿಕೊಂಡಿವೆ. ಜನರು ತಮ್ಮ ಜಾತಿ, ಮತಗಳನ್ನು ಮೀರಿ ಶ್ರದ್ಧೆ ಭಕ್ತಿಯಿಂದ ನಡೆದುಕೊಳುತ್ತಾರೆ. ಏಕೆಂದರೆ ತಮಗೆ ಬಂದ ರೋಗ-ರುಜಿನ, ಇನ್ನು ಮುಂತಾದ ರೋಗಗಳಲ್ಲದೇ ಮಕ್ಕಳ ಸಂತಾನ, ಮನೆದೋಷ, ಭಯ ಭೀತಿ ಮುಂತಾದವುಗಳ ಸಮಸ್ಯೆ ಬಂದಾಗ ಈ ದರ್ಗಾಗಳಿಗೆ ಬಂದು ನಡೆದುಕೊಂಡಾಗ ಪರಿಹಾರವಾಗಿದೆ ಎಂದು ಹೇಳಿರುವುದು ಸ್ವಾರಸ್ಯಕರವಾಗಿದೆ.

## ಅಡಿ ಟಿಪ್ಪಣಿ

೧) ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ-೧೦

೨) ಸಂದರ್ಶನ: ಸಿರಸಪ್ಪಯ್ಯ ಸ್ವಾಮಿಯವರು – ಕೊಪ್ಪಳ

೩) ಸಂದರ್ಶನ: ಸಿರಸಪ್ಪಯ್ಯ ಸ್ವಾಮಿಯವರು – ಕೊಪ್ಪಳ

೪) ಸಂದರ್ಶನ: ಸಿರಸಪ್ಪಯ್ಯ ಸ್ವಾಮಿಯವರು – ಕೊಪ್ಪಳ

೫) ಸಂದರ್ಶನ: ಸಿರಸಪ್ಪಯ್ಯ ಸ್ವಾಮಿಯವರು – ಕೊಪ್ಪಳ

೬) ಸಂದರ್ಶನ : ರಶೀದ್ ಸಿದ್ದೀಕಿ – ಕೊಪ್ಪಳ

೭) ಸಂದರ್ಶನ : ಖದೀರುದ್ದೀನ್ ಖದೀರ್ – ಕೊಪ್ಪಳ

೮) ಸಂದರ್ಶನ : ಖದೀರುದ್ದೀನ್ ಖದೀರ್ – ಕೊಪ್ಪಳ

೯) ಸಂದರ್ಶನ : ಹನುಮಂತಪ್ಪ – ಹುಲಿಗಿ

೧೦) ಸಂದರ್ಶನ : ಉಮೇಶ ಗೌಡ ಪಾಟೀಲ್ – ಬಿಸರಳ್ಳಿ

೧೧) ಸಂದರ್ಶನ : ಎಚ್.ಎಸ್.ಪಾಟೀಲ್ – ಬಿಸರಳ್ಳಿ

೧೨) ಸಂದರ್ಶನ : ಸಾದೀಕ್ ಅಲಿ – ಹಾಲವರ್ತಿ

೧೩) ಸಂದರ್ಶನ : ಪಕೀರಪ್ಪ – ಹಾಲವರ್ತಿ

೧೪) ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ-೧೨-೧೩

೧೫)ಸಂದರ್ಶನ : ಮಹ್ಮದ್ ಹುಸೇನ್ – ತಳಕಲ್

೧೬) ಸಂದರ್ಶನ : ಮಹ್ಮದ್ ಹುಸೇನ್ – ತಳಕಲ್

೧೭) ಸಂದರ್ಶನ : ಜಿ.ಎನ್. ಪಾಟೀಲ್ – ಲಕಮಾಪುರ

೧೮) ಸಂದರ್ಶನ : ಉಮೇಶ ಅಂಗಡಿ – ಲಕಮಾಪುರ

೧೯) ಸಂದರ್ಶನ : ಜಿ.ಎನ್. ಪಾಟೀಲ್ – ಲಕಮಾಪುರ

೨೦) ಸಂದರ್ಶನ : ಉಮೇಶ ಅಂಗಡಿ – ಲಕಮಾಪುರ

೨೧) ಸಂದರ್ಶನ : ಈಶ್ವರ ಮೇಟಿ –ಮುರುಡಿ

೨೨) ಪ್ರಕಾಶ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮೊಹರಂ ಪದಗಳ ಒಂದು ಅಧ್ಯಯನ (ಅಪ್ರಕಟಿತ –ಎಂ.ಫಿಲ್) ಪುಟ– ೪೨

೨೩) ಪ್ರಕಾಶ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮೊಹರಂ ಪದಗಳ ಒಂದು ಅಧ್ಯಯನ (ಅಪ್ರಕಟಿತ –ಎಂ.ಫಿಲ್) ಪುಟ–೪೮

೨೪) ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ-೧೧

೨೫) ಸಂದರ್ಶನ : ಸುರೇಶ ಅಂಗಡಿ ಕಾರಟಗಿ

೨೬) ಎಚ್.ಎಸ್. ಪಾಟೀಲ್, ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ ಪುಟ-೧೨

೨೭) ಸಂದರ್ಶನ : ಶರಣಪ್ಪ.ಬಿ ಹನುಮಸಾಗರ

೨೮) ಸಂದರ್ಶನ : ಶರಣಪ್ಪ. ಬಿ ಹನುಮಸಾಗರ

೨೯) ಸಂದರ್ಶನ : ಗಂಗಣ್ಣ ಹನುಮಸಾಗರ

೩೦) ಸಂದರ್ಶನ : ಈರಪ್ಪ ಹನುಮಸಾಗರ

೩೧) ಸಂದರ್ಶನ : ಗಂಗಣ್ಣ ಹನುಮಸಾಗರ

೩೨) ಷಹಸೀನಾ ಬೇಗಂ, ಕರ್ನಾಟಕ ಮುಸ್ಲಿಂ ಜಾನಪದ ಪುಟ – ೧೯೨–೧೯೩.

# ಅಧ್ಯಾಯ ೫

## ಕರ್ನಾಟಕದ ಲೋಕಾನುಭವಿಗಳ ಅನುಸಂಧಾನ

೫.೧ ಪೀಠಿಕೆ

೫.೨ ಸೂಫಿಗಳ ಲೋಕಾನುಭವ

೫.೩ ಭಾರತದಲ್ಲಿನ ಸೂಫಿಗಳು

೫.೪ ಕರ್ನಾಟಕದಲ್ಲಿನ ಸೂಫಿಗಳು

೫.೫ ಕೊಪ್ಪಳ ಜಿಲ್ಲೆಯಲ್ಲಿನ ಸೂಫಿಸಂತರು ಹಾಗೂ ತತ್ವಪದಕಾರರು

# ಅಧ್ಯಾಯ-೫

## ಕರ್ನಾಟಕದ ಲೋಕಾನುಭವಿಗಳ ಅನುಸಂಧಾನ



### ೫.೧ .ಪೀಠಿಕೆ :

ಸೂಫಿಗಳು ಮತ್ತು ಅನುಭಾವಿಗಳು ಬೇರೆ ಬೇರೆ ಧಾರ್ಮಿಕ ಪಂಗಡಗಳಿಂದ ಬಂದವರು. ಅವರ ನಡುವೆ ಹೇಳಿಕೊಳ್ಳುವತಂಹ ವ್ಯತ್ಯಾಸವಿಲ್ಲ. ಅನುಭಾವಿಗಳು ಮತ್ತು ಸೂಫಿಗಳು ಪರಸ್ಪರ ಒಬ್ಬರಮೇಲೊಬ್ಬರು ಪ್ರಭಾವ ಬೀರಿದಂತೆ ಕಾಣುತ್ತಾರೆ. ಅರೇಬಿಯಾದ ಹಾಗೂ ಸೂಫಿ ಸಾಧಕರು ಭಾರತೀಯ ಅನುಭಾವಿಕ ಸಾಧಕರನ್ನು ಅವರು ಮಂಡಿಸಿರುವ ತತ್ವಗಳನ್ನು ಪ್ರಭಾವಿಸಿರುವ ಕುರುಹುಗಳು ಅನುಭಾವಿ ಸಾಹಿತ್ಯದಲ್ಲಿ ಹೇರಳವಾಗಿ ದೊರಕುತ್ತವೆ. ಅನುಭಾವಿಗಳನ್ನು ಭಾರತೀಯ ಸೂಫಿಗಳೆಂತಲೂ, ಸೂಫಿಗಳನ್ನು ಇಸ್ಲಾಮಿನ ಅನುಭಾವಿಗಳು ಎಂತಲೂ ಕರೆಯುವ ರೂಢಿ ನಮ್ಮಲ್ಲಿದೆ. ಇಬ್ಬರ ದೈವಿಕ ಉನ್ನತ್ತತೆಯೂ ಒಂದೇ ತೀವ್ರತೆಯದು. ಐಕ್ಯಸ್ಥಿತಿ ಪಡೆದು 'ಕ-ಅನಲ್‌ಹಕ್'(ಅಹಂಬ್ರಹ್ಮಾಸ್ಮಿ) ಅವಸ್ಥೆಗೆರುವ ಅನುಭಾವಿಗಳೆಲ್ಲಾ ಸೂಫಿಗಳಾಗುತ್ತಾರೆ.

"ಹಿಂದು-ಮುಸಲ್ಮಾನರ ಸ್ನೇಹಪೂರ್ವಕವಾದ ವ್ಯವಹಾರದಿಂದ ಇಬ್ಬರ ಮತಧರ್ಮಗಳೂ, ಆಚಾರಗಳೂ ಅತೀಯಾದ ಬದಲಾವಣೆಯನ್ನು, ಪುಷ್ಠಿಯನ್ನು ಹೊಂದಿದವು. ಮುಸ್ಲಿಂ ರಾಜರುಗಳು, ಮುಖಂಡರು ತಮ್ಮ ರಾಜಕೀಯ ಉತ್ಕರ್ಷದಲ್ಲಿಯೇ ಮಗ್ನರಾಗಿದ್ದುದ್ದರಿಂದ ಹಿಂದುಗಳ ಧರ್ಮದ ಗೊಡೆವೆಗೆ ಹೋಗಲಿಲ್ಲ. ಇಸ್ಲಾಂ ಮತ ಪ್ರಚಾರದಲ್ಲಿ ಕೇವಲ ಆಲಸ್ಯವನ್ನೇ ತೋರಿದ್ದರು. ರಾಜಕೀಯ ಸಹಾಯದಿಂದ ಇಸ್ಲಾಂ ಧರ್ಮವು ಭಾರತದಲ್ಲಿ ಹಬ್ಬಲಿಲ್ಲ. ಇದನ್ನು ವಿಕಾಸಪಡಿಸುವುದು ಮಹಾತ್ಮರಾದ, ಉದಾರ ಚರಿತ್ರರಾದ ಮುಸಲ್ಮಾನೀ ಪೀರ್‌ಗಳ ಧರ್ಮಕಾರ್ಯ. ಅವರೆ ಹಿಂದುಗಳ ವೇದಾಂತ ತತ್ವವನ್ನು ಹೋಲುವ "ಸೂಫಿ" ಧರ್ಮವನ್ನು ಸ್ಥಾಪನೆ ಮಾಡಿದರು."[೧]

ಸೂಫಿ ಎಂಬ ಪದದ ಅರ್ಥ ವಿವರಣೆ ನೀಡುವುದಕ್ಕೂ ಮೊದಲು ೧೨ನೇ ಶತಮಾನದಲ್ಲಿ ನಡೆದ ಶರಣ ಚಳುವಳಿಯತ್ತ ದೃಷ್ಟಿ ಹರಿಸಬೇಕು. ಏಕೆಂದರೆ, "ಸೂಫಿ" ಪಂಥದ ಪರಿಚಯವನ್ನು ಶರಣ ಚಳುವಳಿಯಂತೆ ಕರ್ನಾಟಕದಲ್ಲಿ ಕಂಡುಕೊಳ್ಳಬಹುದು. ಬಸವಣ್ಣನವರ ನೇತೃತ್ವದಲ್ಲಿ ಶರಣರೆಲ್ಲ ಒಂದೆಡೆಗೆ ಸೇರಿ ಶರಣ ಸಂಸ್ಕೃತಿಯನ್ನು ಹುಟ್ಟು ಹಾಕಿದರು. ಈ ಶರಣರ ಗುಂಪಿನಲ್ಲಿ ಕೇವಲ

ಒಂದೆರಡು ಜಾತಿ, ಮತ ಧರ್ಮದವರು ಪಾಲ್ಗೊಳ್ಳದೆ ಇಡೀಯಾಗಿ ಸಮಾಜ ಪಾಲ್ಗೊಂಡಿದ್ದುದು ಅಂದಿನ ವಿಶೇಷ. ಈ ಶರಣರಿಂದ "ವೀರಶೈವ" ಎಂಬ ಸಾಂಸ್ಕೃತಿಕ ಹಾಗೂ ಧಾರ್ಮಿಕ ಲೋಕ ಹುಟ್ಟಿಕೊಂಡಿತು. ಈ ಮೊದಲು ವೀರಶೈವ ಪಂಗಡ, ಗುಂಪು ಇರಲಿಲ್ಲವೆಂದಲ್ಲ. ಅದರ ಪ್ರಾಚೀನತೆ ತಮಿಳುನಾಡಿನ ೬೩ ಸಕಲ ಪುರಾತನರಲ್ಲಿಗೆ ತಲುಪುತ್ತದೆ. ತಮಿಳುನಾಡಿನಲ್ಲಿ ಈ ಶೈವ ಸಂಪ್ರದಾಯವನ್ನು ನಂತರದಲ್ಲಿನ ಧಾರ್ಮಿಕ, ರಾಜಕೀಯ ಚಟುವಟಿಕೆಗಳು ತೆರೆಯ ಹಿಂದೆ ಸರಿಸಿದವು. ಆದರೆ ಬಸವೇಶ್ವರರ ಕಾಲದಲ್ಲಿ ಈ ಶೈವ ಸಂಪ್ರದಾಯ ಮತ್ತೊಮ್ಮೆ ಸಂಘಟಿತವಾಗಿ ವೀರಶೈವ ಎಂಬ ಹೆಸರಿನೊಂದಿಗೆ ಮರು ಹುಟ್ಟು ಪಡೆದುಕೊಂಡಿತು.

ಅಂದಿನ ಧಾರ್ಮಿಕ ಮತ್ತು ರಾಜಕೀಯ ಏರು-ಪೇರುಗಳಿಂದ ಧಾರ್ಮಿಕವಾಗಿ ಸಮಾಜವೂ ಮೇಲ್ವರ್ಗ ಮತ್ತು ಕೆಳವರ್ಗಗಳಿಂದ ಒಡೆದು ಹೋಗಿತ್ತು. ಇದಕ್ಕೆ ಪ್ರೇರಕವೆಂಬಂತೆ ಆಳರಸರು ಕೆಲವು ಧರ್ಮಿಯರಿಗೆ ಸಮಾಜದಲ್ಲಿ ಉನ್ನತ ಸ್ಥಾನ-ಮಾನ ನೀಡುವಲ್ಲಿ ಪಾತ್ರವಹಿಸಿದ್ದರು. ಇಂತಹ ಕ್ಲಿಷ್ಟ ಸಂದರ್ಭದ ಅನ್ಯಾಯಕ್ಕೆ ಒಳಗಾದವರೆಲ್ಲ ಬಂಡೇಳಲು ಸೂಕ್ತ ಸಂದರ್ಭಕ್ಕಾಗಿ ಕಾಯುತ್ತಿದ್ದರು. ಈ ಕಾರಣದಿಂದ ಸಾಮಾಜಿಕ ನ್ಯಾಯವಿಲ್ಲದ ಸಮಾಜದಲ್ಲಿ ಒಂದು ಸಂಘಟನೆ ರೂಪಗೊಂಡಿತು. ಅದುವೇ 'ವೀರಶೈವ' ಧರ್ಮವೆನಿಸಿತು. ಈ ಸಂಘಟನೆಯ ಮುಖ್ಯ ಗುರಿ ಸಮಾಜದಲ್ಲಿನ ಧಾರ್ಮಿಕ ಅಸಮಾನತೆಯನ್ನು ಹೋಗಲಾಡಿಸುವುದಾಯಿತು. ಈ ಸಂಘಟನೆಯನ್ನು ಕಟ್ಟಿ ಬೆಳೆಸಿದವರೆಲ್ಲ ಒಂದೆ ಜಾತಿ, ಮತ, ಧರ್ಮಗಳಿಗೆ ಸೇರದೇ ಬೇರೆ ಬೇರೆ ಜಾತಿ, ಮತ ಧರ್ಮಗಳಿಂದ ಬಂದವರಾಗಿದ್ದರು. ಬಸವೇಶ್ವರರು ಬ್ರಾಹ್ಮಣತ್ವವನ್ನು ವಿರೋಧಿಸಿ ಈ ಸಂಘಟನೆಯ ನಾಯಕರಾದರೆ, ಅಲ್ಲಮಪ್ರಭು ನಾಥಪಂಥದ ಹಿನ್ನಲೆಯಿಂದ ಬಂದವರು. ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಡೋಹರ ಕಕ್ಕಯ್ಯ, ಕಿನ್ನಾರಿ ಬೊಮ್ಮಯ್ಯ, ಮಡಿವಾಳ ಮಾಚಯ್ಯ ಕೆಳಸ್ಥರದಿಂದ ಬಂದವರು. ಇನ್ನುಳಿದವರು ಎಂದರೆ ಎಲ್ಲಾ ವರ್ಗದ ಶರಣರು ಇದರಲ್ಲಿ ಪಾಲ್ಗೊಂಡಿದ್ದರು.

ಶರಣರೆಲ್ಲರೂ ತಮ್ಮ ಸಿದ್ಧಾಂತ ಹಾಗೂ ತತ್ವಗಳನ್ನು ಪ್ರಸಾರಗೊಳಿಸಲು 'ವಚನ' ಎಂಬ ಮಾಧ್ಯಮವನ್ನು ಬಳಸಿಕೊಂಡರು. ವಚನ' ಎಂದರೆ 'ಮಾತು', 'ಭಾಷೆ' 'ಆಣೆ' ಎಂದರ್ಥ. ಈ ವಚನಗಳನ್ನು ಶೃತಿ ಹಿಡಿದು ಹಾಡಿದರೆ ಹಾಡುಗಳಾಗುತ್ತಿದ್ದುವು. ಓದಿದರೇ ಗದ್ಯವಾಗುತ್ತಿದ್ದವು. ಇಂಥಹ 'ವೀರಶೈವ' ಧರ್ಮ ಶೈವ ಧರ್ಮದ ಅವಿಭಾಜ್ಯ ಅಂಗವಾಗಿದ್ದರೂ, ಅದರಲ್ಲಿ ಮಾನವೀಯತೆ, ಸಮಾನತೆ, ಕಾಯಕ, ಇಷ್ಟಲಿಂಗ ಪೂಜೆಗಳೆಂಬ ಸಿದ್ಧಾಂತಗಳಿಂದ ಹೆಚ್ಚು ಪ್ರಚಾರಕ್ಕೆ ಬಂದಿತು. ಇದಕ್ಕೆ ಅಂದಿನ ರಾಜಾಶ್ರಯವು ನೀಡಿತ್ತಾದರೂ, ತದನಂತರದಲ್ಲಿ ರಾಜಪ್ರಭುತ್ವ ಶರಣ ಚಳುವಳಿಯನ್ನು ಹತ್ತಿಕ್ಕಿತು. ಇದರಿಂದಾಗಿ ಬಿಜ್ಜಳನ ರಾಜಧಾನಿ ಶರಣ ಕ್ರಾಂತಿಯಾಗಿ ಕಲ್ಯಾಣದಲ್ಲಿ ನೆಲೆನಿಂತು ಶರಣರೆಲ್ಲಾ ನಾಡಿನಾದ್ಯಂತ ಚದುರಿದರು. ಚನ್ನಬಸವಣ್ಣ ಒಂದು ಗುಂಪಿನೊಂದಿಗೆ ಉಳವಿಕಡೆಗೆ, ಬಸವೇಶ್ವರರು

ಕೂಡಲಸಂಗಮದ ಕಡೆಗೆ, ಅಕ್ಕಮಹಾದೇವಿ ಅಲ್ಲಮಪ್ರಭು ಆದಿಯಾಗಿ ಶ್ರೀಶೈಲದ ಕಡೆಗೆ ನಡೆಯನ್ನು ನಡೆಸಿದರು.

**ಶರಣ ಚಳುವಳಿಯ ವೈಶಿಷ್ಟ್ಯತೆಗಳು**

೧) ೬೩ ಪುರಾತನರ ಸಕಲ ಶೈವ ಧರ್ಮಸ್ಥರ ಮುಂದುವರೆದ ಭಾಗವೆಂಬಂತೆ, ೧೨ನೇ ಶತಮಾನದಲ್ಲಿ ವೀರಶೈವ ಧರ್ಮ ಪುನರುಜ್ಜೀವನಗೊಂಡಿದ್ದು.

೨) ಈ ವೀರಶೈವ ಧರ್ಮವು ಬಸವಣ್ಣನ ನೇತೃತ್ವದಲ್ಲಿ ಸಂಘಟನೆಯಾಗಿ ಅದು ಕಲ್ಯಾಣ ಪ್ರದೇಶವನ್ನು ತನ್ನ ಕಾರ್ಯ ಕ್ಷೇತ್ರವಾಗಿಸಿಕೊಂಡಿತ್ತು.

೩) ಶರಣ ಸಂಸ್ಕೃತಿಯನ್ನು ಹುಟ್ಟಿ ಹಾಕಿದವರೆಲ್ಲ ಒಂದೇ ಜಾತಿಗೆ ಸೇರಿದವರಾಗಿರದೇ ಸಮಾಜದಲ್ಲಿನ ಎಲ್ಲ ಮತ ಧರ್ಮಗಳವರು ಇದರಲ್ಲಿ ಭಾಗವಹಿಸಿದ್ದುದು ವಿಶೇಷ.

೪) ಇದುವರೆಗೂ ಹೆಚ್ಚು ಪ್ರಚಲಿತವಿದ್ದ ಶಿಷ್ಠ ಸಾಹಿತ್ಯಕ್ಕೆ ಬದಲಾಗಿ ಸಾಮಾನ್ಯ ಜನರ ಭಾಷೆಗೆ ಹತ್ತಿರವಾದ ವಚನ ಸಾಹಿತ್ಯದ ಪ್ರಕಾರವನ್ನು ಶರಣಸಂಸ್ಕೃತಿ ಹುಟ್ಟು ಹಾಕಿತು.

೫) ವಚನ ಸಾಹಿತ್ಯ ಓದುಗರಿಗೆ ಓದಾಗಿ, ಹಾಡುವವರಿಗೆ ಹಾಡಾಗಿ ಜನಮಾನಸದಲ್ಲಿ ಶ್ರೇಷ್ಠತೆಯನ್ನು ಪಡೆಯಿತು. 'ವಚನ' ಎಂಬ ಸಾಹಿತ್ಯ ಪ್ರಕಾರವನ್ನು ಮೊಟ್ಟಮೊದಲು ಕನ್ನಡ ಸಾಹಿತ್ಯಕ್ಕೆ ಪರಿಚಯಿಸಿದ ಕೀರ್ತಿ ಈ ಶರಣರಿಗೆ ಸಲ್ಲುತ್ತದೆ.

೬) ಮೊದಮೊದಲು ಈ ಶರಣರಿಗೆ ಕಲ್ಯಾಣಿ ಕಲಚೂರಿಗಳ ರಾಜಾಶ್ರಯ ಸಿಕ್ಕಿತಾದರೂ ತದನಂತರ ಶರಣರೆಲ್ಲ ರಾಜಪ್ರಭುತ್ವದ ಕೆಂಗಣ್ಣಿಗೆ ಗುರಿಯಾದರು. ಶರಣರಿಗೂ ಆಳರಸರಿಗೂ ಒಪ್ಪಿಕೊಳ್ಳಲಾಗದಂತಹ ಕೆಲವು ವಿಚಾರಗಳಿಂದಾಗಿ ಜಗಳಗಳುಂಟಾಗಿ ಪ್ರಬಲವಾದ ಪ್ರಭುತ್ವವು ಶರಣರಿಗೆ ಹಿಂಸಿಸಲು ಪ್ರಾರಂಭಿಸಿದಾಗ ಶರಣರೆಲ್ಲರು ಕಲ್ಯಾಣವನ್ನು ತೊರೆಯಬೇಕಾಯಿತು.

೭) ಶರಣ ಕ್ರಾಂತಿಯ ನಂತರ ಶರಣರೆಲ್ಲ ಗುಂಪು ಗುಂಪಾಗಿ ನಾಡಿನಾದ್ಯಂತ ತಮ್ಮ ನೆಲೆಗಳನ್ನು ಹುಡುಕಿಕೊಂಡೋಗಿ ತಮ್ಮ ಶರಣ ಸಂಸ್ಕೃತಿಯನ್ನು ಮುಂದುವರೆಸಿದರು.

**೫.೨ ಸೂಫಿಗಳ ಲೋಕಾನುಭವ**

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸೂಫಿ ಸಂಸ್ಕೃತಿಯನ್ನು ಅರಿಯುವುದಾದರೆ ಸರಳವಾಗಿ ನಮಗೆ ಇದರ ಸಂಸ್ಕೃತಿಯ ಅರ್ಥವಾಗುತ್ತದೆ. ಸೂಫಿ, ಎಂಬುದಕ್ಕೆ ಹಲವಾರು ವಿದ್ವಾಂಸರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. "ಸೂಫಿ ಎಂದರೆ – ದ್ರಾಕ್ಷಾರಸವನ್ನು ಕುಡಿಯದೆ ಅಮಲಿನಲ್ಲಿರುವವನಾಗಿ, ಊಟ ಮಾಡದೆ ತೃಪ್ತನಾಗಿ, ತಳಮಳಗೊಂಡವನಾಗಿ, ಉಪವಾಸವಿದ್ದು, ನಿದ್ದೆಯಿಲ್ಲದೆ, ವಿನಯದ ವಸ್ತ್ರವನ್ನು ಹೊದ್ದ ಒಬ್ಬ ರಾಜ; ಅವಶೇಷಗಳ ಅಡಿಯಲ್ಲಿರುವ ಖಜಾನೆ, ಗಾಳಿಯಲ್ಲಿಲ್ಲ, ಭೂಮಿಯಲ್ಲಿಲ್ಲ, ಬೆಂಕಿಯವನೂ ಅಲ್ಲ, ನೀರಿನವನೂ ಅಲ್ಲ, ಅವನು ದಡವಿಲ್ಲದ ಸಮುದ್ರ, ಅವನಿಗೆ ನೂರು ಚಂದ್ರರು, ನೂರು ಆಕಾಶಗಳು, ನೂರು

ಸೂರ್ಯರಿದ್ದಾರೆ, ಸಾರ್ವತ್ರಿಕ ಸತ್ಯದ ಮೂಲಕ ಜ್ಞಾನಿಯಾದವನು – ಪುಸ್ತಕದಿಂದಾದ ವಿದ್ವಾಂಸನಲ್ಲ". ಎಂದು ಮೌಲಾನಾ ಜಲಾಲುದ್ದೀನ್ ರೂಮಿಯವರು ಅಭಿಪ್ರಾಯ ಪಟ್ಟಿದ್ದಾರೆ. "ಸೂಫಿ ಎಂದರೆ ಅನುಭಾವಿ, ಯೋಗಿ, ಸಿದ್ದ ಎಂದರ್ಥವಾದರೆ ಸಾಕು. ಆದರೆ ವಿದ್ವಾಂಸರು ಈ ಶಬ್ದದ ಮೂಲ ಕುರಿತು ಬೇಕಾದಷ್ಟು ಚಿಂತನೆ ಮಾಡಿದ್ದಾರೆ. ಗ್ರೀಕಿನ 'ಸೋಫಿಯಾ' (=ಜ್ಞಾನ)ದಿಂದ ಹಿಡಿದು ಅರಬ್ಬಿಯ 'ಸುಫ್ಫಾ'(=ಜಗುಲಿ) 'ಸೂಫ್' (=ಉಣ್ಣೆ) ಮುಂತಾದ ಶಬ್ದಗಳವರೆಗೆ, ಸೂಫಿ ಶಬ್ದಕ್ಕೆ ನಿರ್ವಚನ ಮಾಡಿದ್ದಾರೆ. ಆದಿಮ ಸೂಫಿಗಳು ಮದೀನಾ ಮಸೀದಿಯ ಜಗುಲಿಗಳಲ್ಲಿ ವಾಸಿಸುತ್ತಿದ್ದರು, ಉಣ್ಣೆಯ ನಿಲುವಂಗಿ ಧರಿಸುತ್ತಿದ್ದರು ಎಂದು ಅರ್ಥೈಸಿದ್ದಾರೆ."[೨]

"ಸೂಫಿ ಪಂಥದ ಹುಟ್ಟಿನ ಬಗೆಗೆ ಇರುವ ಉತ್ತರದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಇದರ ಮೂಲ ಪುರುಷ ಆದಮ್ ನಬಿಯ ಜೊತೆಗೆ ಸೂಫಿ ಪಂಥ ಹುಟ್ಟಿಕೊಂಡಿತ್ತೆಂದು ಹೇಳುತ್ತಾರೆ. ಅಲ್ಲದೇ ಇಬ್ರಾಹಿಂ, ದಾವೂದ್, ಮೂಸಾ, ಈಸಾ ಮುಂತಾದ ನಬಿಗಳ ಸಮಯದಲ್ಲೂ ಸೂಫಿ ಪಂಥವಿತ್ತೆಂಬ ವಾದವಿದೆ. ಸೂಫಿ ಪಂಥದ ಮೂಲ ಇಸ್ಲಾಂ ಧರ್ಮಕ್ಕಿಂತ ಹಿಂದೆಯೆ ಇತ್ತು. ಆದರೂ ಪೈಗಂಬರರು ಇಸ್ಲಾಮ್ ಧರ್ಮ ಬೋಧನೆಗೆ ತೊಡಗಿದ ನಂತರ ಸೂಫಿ ಪಂಥ ಹೆಚ್ಚಾಗಿ ಇಸ್ಲಾಮಿನೊಂದಿಗೆ ಮಿಲನಗೊಂಡಿತ್ತಲ್ಲದೆ ಸೂಫಿ ಪಂಥಕ್ಕೆ ಒಂದು ಗಟ್ಟಿಯಾದ ನೆಲೆ ಸಿಕ್ಕಿತು. ಮಹಮ್ಮದ್ ಪೈಗಂಬರರು ಈ ಸೂಫಿ–ಅನುಭಾವಿಗಳಿಗೆ ತುಂಬಾ ಗೌರವವನ್ನು ಕೊಟ್ಟು ವಿಶೇಷ ಸ್ಥಾನ–ಮಾನವನ್ನು ಕಲ್ಪಿಸಿದ್ದರು. ತಮ್ಮನ್ನು ಮುಸ್ಲಿಂರೆಂದು ಕರೆಯುವುದನ್ನು ಇಷ್ಟಪಡದೆ ನಾವು ಸೂಫಿಗಳು ಎಂದೇ ಹೇಳಲು ಇಷ್ಟಪಡುವ ಕೆಲವು ಸೂಫಿಗಳಿದ್ದಾರೆ."[೩]

ಈ ಸೂಫಿ ಶಬ್ದ ಹಜರತ್ ಮಹಮ್ಮದರು ತೀರಿಕೊಂಡ ಎರಡನೂರು ವರ್ಷದ ತರುವಾಯ ಅಸ್ತಿತ್ವಕ್ಕೆ ಬಂದಿತು ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಸೂಫಿ ಪಂಥದ ಸಮಾನಾರ್ಥ ಅರಬ್ಬೀ ಶಬ್ದದ ತಸವುಪ್ ೩೯೨ರಲ್ಲಿ ರಚಿತವಾದ ಸಿಯ್ಯದ್‌ನಲ್ಲಿಲ್ಲ. ಸೂಫಿ ಶಬ್ದದ ಮೊದಲ ಪ್ರಯೋಗ ಅರಬ್ಬೀ ಲೇಖಕ ಜಾಯಿದ್ (೮೯೯)ರಲ್ಲಿ ಕಂಡು ಬರುತ್ತದೆ. ಕೆಲವರು ಅರೇಬಿಯಾದ ಸಫ್ ಜನಾಂಗಕ್ಕೆ ಸೂಫಿ ಶಬ್ದದ ನಂಟನ್ನು ಗಂಟು ಹಾಕುತ್ತಾರೆ. ಕೆಲವರು ಮದೀನದಲ್ಲಿ ಮಸೀದಿಯದುರಿಗೆ ಒಂದು ಜಗುಲಿ 'ಸುಫ್ಫಾ' ಇತ್ತು ಅದರ ಮೇಲೆ ಕುಳಿತುಕೊಳ್ಳುತ್ತಿದ್ದ ಫಕೀರರೇ ಸೂಫಿಗಳೆಂದು ಹೇಳುತ್ತಾರೆ. ಇನ್ನೂ ಕೆಲವರು ಸೂಫಾ ಎಂದರೆ 'ಪಂಕ್ತಿ' 'ಸಾಲು' ತಮ್ಮ ಸದಾಚಾರ ಹಾಗೂ ಸದ್ ವ್ಯವಹಾರದಿಂದಾಗಿ ಇತರರಿಂದ ಭಿನ್ನವಾದ ಒಂದು ಪಂಕ್ತಿಯಲ್ಲಿ ನಿಲ್ಲತಕ್ಕವರು ಸೂಫಿಗಳು, ಇದರಂತೆ ಸೂಫಿ ಶಬ್ದ 'ಸಾಫ್', ಶುಭ್ರ ಜೀವನವನ್ನು ನಡೆಸುತ್ತಿದ್ದರಿಂದ ಇವರು ಸೂಫಿ ಎನಿಸಿಕೊಂಡರು ಎಂದೂ ಇನ್ನುಳಿದವರು ವಾದಿಸುತ್ತಾರೆ.

ಅರಬ್ಬಿದೇಶದ ಮಹಮ್ಮದ್ ಪೈಗಂಬರರು ಕಲಹ ಪ್ರಿಯರಾದ ಅರಬ್ಬೀ ದೇಶದವರನ್ನು ಪಾವನರನ್ನಾಗಿಯು, ಸುಶಿಕ್ಷಿತರನ್ನಾಗಿ ಮಾಡಿ ಒಂದು ಹೊಸ ರಾಜ್ಯವನ್ನು ಸ್ಥಾಪಿಸಿದರು. ಹೀಗೆ ತಮ್ಮ ಕೀರ್ತಿಯನ್ನು ಜಗತ್ತಿನಲ್ಲಿ ಅಜರಾಮರವಾಗಿ ನೆಲೆಗೊಳಿಸಿದರು. ಅವರ ತರುವಾಯ ಅವರ ಅನುಯಾಯಿಗಳು ಅರ್ಧಶತಮಾನದೊಳಗಾಗಿ ಅಟ್ಲಾಂಟಿಕ್ ಸಮುದ್ರದಿಂದ ಸಿಂಧೂನದಿಯವರೆಗೆ ಒಂದು ವಿಶಾಲವಾದ ಧರ್ಮಸಾಮ್ರಾಜ್ಯವನ್ನು ಸ್ಥಾಪಿಸಿದರು. ಇದರಿಂದ ಅರಬ್ಬೀ ದೇಶದವರಲ್ಲಿ ಒಂದು ಉತ್ಕೃಷ್ಟವಾದ ಕಲಾಕ್ಷೇತ್ರವೇ ಸ್ಥಾಪಿತವಾದಂತಾಯಿತು. ತಾವು ಆಕ್ರಮಣ ಮಾಡಿದ ಜನರ ಧರ್ಮ ಮತ್ತು ಅರ್ಥಗಳನ್ನು ರಕ್ಷಿಸಿ ಅರಬ್ಬೀ ದೇಶಿ ಯರು ತಮ್ಮ ಉದಾರನೀತಿಯನ್ನು ಪ್ರಕಟಿಸಿದರು. ಬಾಗ್ದಾದ್ ನಗರದ ಮುಸಲ್ಮಾನ್ ಚಕ್ರವರ್ತಿಗಳು ಕೇವಲ ಮಹತ್ವಕಾಂಕ್ಷಿಗಳಾಗಿದ್ದರಿಂದ ಪ್ರಜೆಗಳ ಭಿನ್ನ ಭಿನ್ನ ಮತ ಧರ್ಮಗಳಿಗೆ ಸರಿಸಮಾನವಾದ ಗೌರವವನ್ನಿತ್ತರು. ಅವರ ಆಸ್ಥಾನಗಳಲ್ಲಿ ಅನ್ಯಧರ್ಮಿಯರು ವಿಶೇಷವಾದ ಅಧಿಕಾರಗಳನ್ನು ಪಡೆದು ಮೆರೆಯುತ್ತಿದ್ದರು.

ಇವರಲ್ಲಿ ಒಬ್ಬನಾದ ಮಹಮದ್‌ಬಿನ್ ಖಾಸಿಂ ಎಂಬ ಶೂರನು ಕ್ರಿ.ಶ.೭೧೨ ರಲ್ಲಿ ಸಿಂಧೂ ಪ್ರಾಂತ್ಯವನ್ನು ಮುಸಲ್ಮಾನ್ ಸಾಮ್ರಾಜ್ಯಕ್ಕೆ ಸೇರಿಸಿದನು. ಧೀರನೂ ಉದಾತ್ತನೂ ಆದ ಖಾಸಿಮನು ನಿಷ್ಕಾರಣವಾಗಿ ಶಸ್ತ್ರರಹಿತವಾದ ಭಾರತೀಯರನ್ನು ಹಿಂಸೆಗೆ ಈಡುಮಾಡದೆ ಅವರಿಗೆ ತನ್ನ ರಾಜ್ಯದ ಆಡಳಿತವನ್ನು ಒಪ್ಪಿಸಿದನು. ಅವರ ಧರ್ಮಭೋಧಕರಾದ ಬ್ರಾಹ್ಮಣರನ್ನೂ ಅವರ ಪೂಜ್ಯಸ್ಥಾನಗಳಾದ ದೇವಸ್ಥಾನಗಳನ್ನೂ ಅತಿ ಗೌರವದಿಂದ ಪಾಲಿಸಿದನು. ಇವುಗಳ ಸಂರಕ್ಷಣೆಗಾಗಿ ರಾಜ್ಯದ ಉತ್ಪತ್ತಿಯಲ್ಲಿ ಶೇಕಡ ಮೂರರಂತೆ ಮೀಸಲಾಗಿಟ್ಟನು.

ಈ ಸೂಫಿ ಎಂಬುದನ್ನು ಈ ರೀತಿಹೇಳಿರುವುದು ತಿಳಿಯುತ್ತದೆ. ನಾವು ಭಾರತಕ್ಕೆ ಬಂದಂತಹ ಮೊದಲ ಪ್ರಸಿದ್ಧ ಸೂಫಿ ಅಲೀ–ಉಲ್–ಹುಜವೇರಿ (ಕ್ರಿ.ಶ.೧೦೦೦–೧೦೬೩) ರಚಿಸಿದ 'ಕಶಪುಲ್ ಮಹಜುಬ' ಎಂಬ ಕೃತಿ (ಈ ಕೃತಿ ಫಾರಶೀ ಭಾಷೆಯಲ್ಲಿದ್ದು ಇದುವೇ ಸೂಫಿಗಳ ಬಗ್ಗೆ ಬೆಳಕು ಚೆಲ್ಲುವ ಮತ್ತು ಭಾರತದಲ್ಲಿ ರಚಿಸಿದ ಮೊದಲ)ಯಲ್ಲಿ ಸೂಫಿಗಳ ಬಗ್ಗೆ ನಿಖರವಾಗಿ ಹೇಳಲಾಗಿದೆ.

ಅಲೀ–ಉಲ್–ಹುಜವೇರಿಯ ಪ್ರಕಾರ ಸೂಫಿ ಎಂಬುದಕ್ಕೆ ತನ್ನ ಆಚಾರ ಮತ್ತು ವಿಚಾರಗಳನ್ನು ಯಾರು ವ್ಯವಸ್ಥಿತಗೊಳಿಸಿಕೊಂಡು ಇರುತ್ತಾನೆಯೋ ಅವನೇ ಸೂಫಿ. ಅವರ ಹೃದಯ ವಿಕಾರ ರಹಿತವಾಗಿರುತ್ತದೆ. ಸೂಫಿಯು ಸಹನಶೀಲನೂ, ನಿಗ್ರಹಿಯೂ ಆಗಿರುತ್ತಾನೆ. ಇದರಂತೆ ಹುಜವೇರಿ 'ಸೂಫಿ' ಗಳ ಸಂಸ್ಕೃತಿ ಆಚಾರ ವಿಚಾರ ತತ್ವಗಳ ಬಗ್ಗೆ ಹೇಳುವಂತೆ ಸೂಫಿಗಳಲ್ಲಿ ೩ ಬಗೆಗಳಿವೆ.

೧. ಯಾರಲ್ಲಿ ಆಹಂಭಾವವು ನಷ್ಟವಾಗಿ ಪರಮಾತ್ಮ ಸ್ವರೂಪದ ನವಜೀವನವು ಪ್ರಾಪ್ತವಾಗಿರುತ್ತದೆಯೋ ಅವನೇ ನಿಜವಾದ ಸೂಫಿ. ಈ ಸೂಫಿಗಳು ಸಾಹೇಬ ಫಜೂಲ ಅಂದರೆ ಪರಮಾತ್ಮನ ಸ್ವರೂಪದಲ್ಲಿ ಐಕ್ಯವನ್ನು ಸಾಧಿಸುವರು.

೨. ಎರಡನೆಯ ಬಗೆಯ ಸೂಫಿಯು ಮತ್ ಸೂಫ್ ಅಂದರೆ ತಪಸ್ಸಿನಿಂದ ಮತ್ತು ನಿಗ್ರಹದಿಂದ ಸೂಫಿಯಾಗುವ ಪ್ರಯುತ್ನದಲ್ಲಿ ಇರುತ್ತಾರೆ. ಇಲ್ಲಿ ಸೂಫಿಗಳು ತತ್ವಾನುಸಾರ ನಡೆಯುವವರು.

೩. ಮೂರನೆ ಬಗೆಯಲ್ಲಿ ಸೂಫಿಯು ಮಸ್ತಸೂಫಿ: ಇಲ್ಲಿ ಲೌಕಿಕವಾಗಿ ಕೀರ್ತಿಸುತ್ತಾ ಸೂಫಿಯಂತೆ ನಡೆಯುತ್ತಿರುತ್ತಾರೆ. ಈ ಬಗೆಯ ಸೂಫಿಗಳನ್ನು ಸಾಹೇಬ ಫಜೂಲ ಅಂದರೆ ಡಂಭಾಚಾರಿಗಳೆಂದೂ ಕರೆಯುತ್ತಾರೆ.

ಮುಂದುವರೆದಂತೆ ಹುಜವೇರಿ ಸೂಫಿ ಮತವು ಎಂಟು ಗುಣಗಳಿಂದ ಅಧಿಕೃತವಾಗಿರುತ್ತದೆ ಎಂದೂ ಹೇಳುತ್ತಾನೆ.

**ಸೂಫಿ ಮತದ ಎಂಟು ಗುಣಗಳು:**

೧) ಇಬ್ರಾಹಿಂ– ಔದಾರ್ಯವುಳ್ಳವನಾಗಿರುವುದು.

೨) ರಜಾ – ಪರಮೇಶ್ವರನ ಇಚ್ಛೆಯಲ್ಲಿ ಸಂತುಷ್ಟನಾಗಿರುವುದು.

೩) ಇಸ್ಮಾಯಿಲ್ ಸಬರ – ಸಹನ ಶೀಲತೆಯುಳ್ಳವನಾಗಿರುವುದು.

೪) ಅಯಾಬ್ ಗುರಬತ್ – ದಾರಿದ್ರ್ಯವಂತನಾಗಿರುವುದು.

೫) ಮಾಹಿಯಾ ಸಯ್ಯಹ – ಸಂಚಾರದಲ್ಲಿರುವುದು.

೬) ಯೇಸು ಲಿಬಾಶ – ವೇಷಧಾರಿಯಾಗಿರುವುದು.

೭) ಮುಸಾ ಫಕ್ರ – ವೈರಾಗ್ಯವಂತನಾಗಿರುವುದು.

೮) ಮಹಮ್ಮದ್ ಪೈಗಂಬರ್ – ತತ್ವದಲ್ಲಿ ನಂಬಿಕೆ ಇರುವುದು.

ಮೇಲೆ ಹೇಳಿರುವ ಸೂಫಿಗಳ ಗುಣಗಳನ್ನು ಪ್ರಸಿದ್ಧ ಎಂಟು ಸೂಫಿಗಳ ಹೆಸರಿನಲ್ಲಿ ಗುರುತಿಸಲಾಗಿದೆ. ಸೂಫಿ ಪಂಥವೆಂಬುದು ಕೇವಲ ಜ್ಞಾನ ಮತ್ತು ಆಚಾರ ಪಾಲನೆಗಳ ಹೆಸರಲ್ಲ, ಅದು ಕೇವಲ ಜ್ಞಾನವಾಗಿದ್ದರೆ ಶಿಕ್ಷಣದ ಮೂಲಕ ಪ್ರಾಪ್ತಗೊಳಿಸಿಕೊಳ್ಳಬಹುದಿತ್ತು. ಕೇವಲ ಆಚಾರವಾಗಿದ್ದರೆ, ಅದು ನಿಗ್ರಹದ ಮೂಲಕ ಪ್ರಾಪ್ತವಾಗುತ್ತಿತ್ತು. ಆದರೆ ಸೂಫಿಗಳ ಪಂಥವೆಂಬುದು ಜ್ಞಾನ ಆಚಾರ ಮತ್ತು ನೀತಿಗಳಿಂದ ಕೂಡಿದ್ದಾಗಿದೆ.

**ಸೂಫಿ ಗುರು ಪರಂಪರೆಯ ಒಂದು ನೋಟ**

ಭಾರತ ಪ್ರವೇಶಿಸುವುದಕ್ಕಿಂತ ಪೂರ್ವದಲ್ಲಿ ಸೂಫಿ ಸಂಸ್ಕೃತಿ ಇಸ್ಲಾಂ ಧರ್ಮದ ಉದಯದೊಂದಿಗೆ ಹುಟ್ಟಿತು ಎನ್ನಬಹುದು. ಆದರೆ ಮೊದಮೊದಲು ಸೂಫಿ ಸಂಸ್ಕೃತಿ ನಮಗೆ ಅಷ್ಟಾಗಿ ಕಂಡುಬರುವುದಿಲ್ಲ. ಏಕೆಂದರೆ ಸೂಫಿ ಸಂಸ್ಕೃತಿ ಹುಟ್ಟಿದ್ದು ಇಸ್ಲಾಂ ಧರ್ಮದ ಅಂಗವಾಗಿ. ಮಹಮ್ಮದ್ ಪೈಗಂಬರ ತತ್ವ ಸಿದ್ಧಾಂತವನ್ನು ಪ್ರಚುರಪಡಿಸುವ ಹೊಣೆ ಇವರ ಮೇಲಿತ್ತು. ಹೀಗಾಗಿ ಇಸ್ಲಾಂ

ಧರ್ಮದ ಪ್ರಚಾರ ಮಾಡುತ್ತಾ ಸೂಫಿಗಳೆಲ್ಲ ಒಂದು ಕಡೆ ಸೇರಿದರು. ಸೂಫಿ ಸಂಸ್ಕೃತಿ ಬೆಳೆಸಿಕೊಂಡ ಬಂದ ರೀತಿ ಹೀಗೆ ನೋಢಬಹುದು.




೧) ಇಯಾದಿಯಾ – ಖಾಜಾ ಪುಜೇಲ್ ಬಿನ್ ಇಯಾಜ್

೨) ಆಧಮಿಯಾ – ಅಬು ...ರಾಕ್ ಇಬ್ರಾಹಿಂ ಬಿನ ಆಧ್‌ಮ್

೩) ಹುಚೇರಿಯಾ – ಖ್ವಾಜಾ ಅಬು ಇಸಾಕ್ ಶಾಮಿ ಚಿಶ್ತಿ

ದೇವ ಸ್ಮರಣೆ (ಧ್ಯಾನ) ಮಾಡುವ ಅತ್ಯುತ್ತಮ ಮಾರ್ಗ "ನಮಾಜ್" (ಪ್ರಾರ್ಥನೆ) ಯಾಗಿದೆ. ಅದು ನಿರಂತರವಾಗಿ ಆಚರಣೆಗೆ ತರುವುದಾಗಿದೆ. ಪ್ರವಾದಿಗಳು ಈ ಹೊಣೆಯನ್ನು ಪರಿಪೂರ್ಣಗೊಳಿಸಿದರು. ತಾಳ್ಮೆಯಿಂದ, ಪ್ರೀತಿಯಿಂದ ಮತ್ತು ಮಾನವೀಯ ಮೌಲ್ಯಗಳಿಂದ ದೈವಿವಾಣಿಯ ಪ್ರಚಾರ ಮಾಡಿದರು. ಈ ಕಾರ್ಯ ಕೈಗೊಳ್ಳುವಾಗ ಅನೇಕ ಕಷ್ಟಗಳು ಎದುರಾದವು, ಆದರೂ ದೇವನ ಸ್ಮರಣೆಯನ್ನು ಮಾಡುತ್ತಾ ತಮ್ಮ ಪ್ರಚಾರ ಕಾರ್ಯವನ್ನು ಮುಂದುವರೆಸಿದರು.

**ಸೂಫಿಗಳು ಮತ್ತು ಅವರ ಕಾಲ**

| | |
|---|---|
| ೧) ಹಸನ | ಕ್ರಿ.ಶ.ಸು. ೮ನೇ ಶತಮಾನ |
| ೨) ಇಬ್ರಾಹಿಂ ಬಿನ್ ಆದಂ | ಕ್ರಿ.ಶ.ಸು. ೮ನೇ ಶತಮಾನ |
| ೩) ಊಜಾಈಲ್ ಬಿನ್ ಇಯಾತ್ | ಕ್ರಿ.ಶ.ಸು. ೮ನೇ ಶತಮಾನ |
| ೪) ರಾಬಿಯಾ | ಕ್ರಿ.ಶ.ಸು. ೮ನೇ ಶತಮಾನ |
| ೫) ಮಾಸಮುಲ್ಲ ಕರ್‍ರವಿ | ಕ್ರಿ.ಶ.ಸು. ೯– ೧೧ನೇ ಶತಮಾನ |
| ೬) ಸುಲೆಮಾನ್ ಉದ್ದಾರಾನೀ | ಕ್ರಿ.ಶ.ಸು. ೯– ೧೧ನೇ ಶತಮಾನ |
| ೭) ಜುನ್ನುಬ್ ಮಿಸ್ತ್ರಿ | ಕ್ರಿ.ಶ.ಸು. ೯– ೧೧ನೇ ಶತಮಾನ |

೮) ಮನ್ಸೂರ್ — ಕ್ರಿ.ಶ.ಸು. ೯– ೧೧ನೇ ಶತಮಾನ

೯) ಗಝಾಲಿಯನ್ — ಕ್ರಿ.ಶ.ಸು. ೧೧–೧೦ನೇ ಶತಮಾನ

೧೦) ಫರಿದೋದ್ದೀನ್ ಅತ್ತಾರ್ — ಕ್ರಿ.ಶ.ಸು ೧೩ನೆ ಶತಮಾನ

೧೧) ಜಲಾಲುದ್ದೀನ್ ರೋಮೀ — ಕ್ರಿ.ಶ.ಸು. ೧೫ನೇ ಶತಮಾನ

೧೨) ಶೇಖ್ ಸೌದಿ — ಕ್ರಿ.ಶ.ಸು. ೧೫ನೆ ಶತಮಾನ

೧೩) ಹಾಫೀಜ್ — ಕ್ರಿ.ಶ.ಸು. ೧೫ನೇ ಶತಮಾನ

೧೪) ಜಾಮೀ — ಕ್ರಿ.ಶ.ಸು. ೧೫ನೇ ಶತಮಾನ.

ಈ ಮೇಲಿನ ಸೂಫಿಗಳೆಲ್ಲ ಸೂಫಿ ಪಂಥ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಆದರೆ ಅಂದಿನ ರಾಜಕೀಯ ತಿಕ್ಕಾಟಗಳಿಂದಾಗಿ ಸೂಫಿಗಳು ತಮ್ಮ ಮೂಲ ನೆಲೆಯನ್ನು ಕಳೆದುಕೊಳ್ಳುವ ಪ್ರಸಂಗ ಬಂದೊದಗಿತು. ಅಲ್ಲಿನ ಸೂ಼ಗಳು ಆಳರಸರನ್ನು ಹಾಗೂ ಅವರ ಧರ್ಮದ ವಿಚಾರವನ್ನು ನೇರವಾಗಿ ವಿರೋಧಿಸಿದರು. ಇದು ಅಲ್ಲಿನ ಅರಸರಿಗೆ ಹಿಡಿಸಲಿಲ್ಲ, ಆದ್ದರಿಂದ ಆಳರಸರು, ಸೂಫಿಗಳನ್ನು ತಮ್ಮ ರಾಜ್ಯದಿಂದ ಹೊರ ಹಾಕಲು ಪ್ರಾರಂಭಿಸಿದ್ದರು. ಇದರಿಂದಾಗಿ ಏಷ್ಯಾದಲ್ಲಿನ ಬಹುತೇಕ ಸೂಫಿಗಳು ತಮ್ಮ ಮೂಲ ನೆಲೆಯನ್ನು ಬಿಟ್ಟು ಸೂಫಿ ತತ್ವ ಪ್ರಚಾರ ಮಾಡುತ್ತ ಬೇರೆಡೆಗೆ ಹೊರಡುತ್ತ ಅವರಲ್ಲಿ ಬಹುತೇಕರು ಭಾರತದೆಡೆಗೆ ಬಂದರು. ಈ ಸೂಫಿಗಳು ಭಾರತದೆಡೆಗೆ ಬರಲು ಮುಖ್ಯವಾದ ಅಂಶಗಳನ್ನು ಈ ಕೆಳಗಿನಂತೆ ನೋಡಬಹುದು.

೧) ಭೌಗೋಳಿಕವಾಗಿ ಒಂದೇ ಖಂಡ (ಏಷ್ಯಾ) ವಾಗಿದ್ದರೂ ಜನಾಂಗೀಯ ಗುಣಧರ್ಮವನ್ನು ಹೊಂದಿದ್ದರಿಂದ.
೨) ಅದಾಗಲೆ ಮುಸ್ಲಿಂ ರಾಷ್ಟ್ರಗಳು ಭಾರತದೊಂದಿಗೆ ವ್ಯಾಪಾರ ಸಂಬಂಧಗಳನ್ನು ಬೆಳೆಸಿಕೊಂಡಿದ್ದರಿಂದ.
೩) ಮುಸ್ಲಿಂ ರಾಷ್ಟ್ರಗಳು ಭಾರತದ ಗಡಿಗೆ ಹೊಂದಿಕೊಂಡಿರುವದರಿಂದ.
೪) ಮುಸ್ಲಿಂ ಅರಸರ ಭಾರತದ ಪ್ರವೇಶದಿಂದಾಗಿ.

**೫.೩. ಭಾರತದ ಸೂಫಿಗಳು:**

ಸೂಫಿಗಳು ಭಾರತಕ್ಕೆ ೧೨ನೇ ಶತಮಾನದಿಂದ ನೆಲದಾರಿಯ ಮುಖಾಂತರ ಬರತೊಡಗಿದರು. ಅಷ್ಟರಲ್ಲಿ ಭಾರತದಲ್ಲಿ ಪಾದ್ರಿಗಳು ನೆಲೆಯೂರಿ ತಮ್ಮ ಪ್ರಭಾವವನ್ನು ಎಲ್ಲಡೆ ಪಸರಿಸಿದ್ದರು. ಇದೇ ಸಮಯದಲ್ಲಿ ಅಪಘಾನಿಸ್ತಾನದ ಪರ್ಶಿಯಾದಲ್ಲಿ ಸೂಫಿಗಳ ವಿರುದ್ದ ಪಿತೂರಿಗಳು ನಡೆಯತೊಡಗಿದ್ದವು. ಅಲ್ಲಿ ಕೆಳಸ್ತರದ ಜನರಲ್ಲಿ ಅಂದರೆ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಂತಹ ಜನರಿಗೆ ಸಹಾಯವಾಗಲು ತನ್ನ ಅನುಯಾಯಿಗಳನ್ನು ಕಳುಹಿಸಲು ಪ್ರಾರಂಭಿಸಿದರು. ಸೂಫಿಗಳು ಸಾಮಾನ್ಯವಾಗಿ

ನಗರವಾಸಿಗಳಾಗಿದ್ದರು. ನಗರಗಳು ಅನೇಕ ಜಾತಿ ಮತ ಪಂಥಗಳಿಂದ ಮತ್ತು ವಿಭಿನ್ನ ಸಂಸ್ಕೃತಿಗಳಿಂದ ಕೂಡಿತ್ತು. ಸೂಫಿಗಳಿಗೆ ಇಲ್ಲಿ ಭಾಷಿಕ ಹಾಗೂ ಸಾಂಸ್ಕೃತಿಕ ಕಲಬೆರಿಕೆಗಳು ಸುಲಭ ಸಾಧ್ಯವಾಗಿದ್ದರಿಂದ ಉರ್ದುವಿನಂತಹ ಭಾಷೆಯು ಉಲ್ಬಣಗೊಳ್ಳಲು ಹಾಗೂ ಅದರ ಬೆಳವಣಿಗೆಗಳು ಬಹು ಬೇಗನೆ ಪ್ರಸರಿಸಿತು.

ಸೂಫಿಯು ಪ್ರೇಮ ಧರ್ಮಿಯನಾಗಿದ್ದಾನೆ. 'ಆತ್ಮಪತಿ ಪರಮಾತ್ಮ ಸತಿ' ಎನ್ನುವ ಮಧುರ ಭಾಂಧವ್ಯದ ತತ್ವವನ್ನು ಇವರು ಉಪಾಸನೆಗೆ ಆಯ್ದು ಕೊಂಡವರು. ಸೂಫಿಗಳು ಕೆಲವರು ದ್ವೈತ ಮತ್ತು ಕೆಲವರು ಅದ್ವೈತ ಸ್ಥಿತಿಯುಳ್ಳವರಾಗಿದ್ದರು. ಆದರೂ ಇವರು ಜಗತ್ತನ್ನು ಮಾಯೇ ಎಂದು ಭಾವಿಸಲಿಲ್ಲ. ಅರಬಸ್ಥಾನದಲ್ಲಿರುವ ಜ್ಞಾನಮಾರ್ಗಿಯೂ, ಪರ್ಶಿಯಾದಲ್ಲಿ ಪ್ರೆಮ ಮಾರ್ಗಿಯಾ ಆಗಿದ್ದ ಸೂಫಿಯು ಅನುಭವಕ್ಕೆ ಬಂದಂತ ಸಂದರ್ಭದಲ್ಲಿ ಭಾರತದ 'ಭಕ್ತಿಪಂಥ'ಗಳ ಧ್ಯಾನಮಾರ್ಗಿಯಾಗುವ ಒತ್ತಾಸೆ ನೀಡಿವೆ.

"ಸೂಫಿಯು ನಾಥರೊಡನೆ ಒಡನಾಟ ಬೆಳೆಸುವಲ್ಲಿ ಯಶಸ್ವಿಯಾಯಿತು. ಸಿಂದೂ ನದಿಯಿಂದ ಶಿಶುವಾಗಿ ಹುಟ್ಟಿ ಬರುವ ದರಿಯಾನಾಥ (ದರಿಯಾ – ನದಿ) ಎಂಬುವನ ಕಥೆ ಗಮನಿಸಬೇಕು. ಈತನಿಗೆ ಶೇಕ್ ತಾಹಿರ್. ಖ್ವಾಜಾ, ಖಿಜಾ, (ಈತ ಫಾರಸಿ ಪುರಾಣಗಳಲ್ಲಿ ಅಮೃತ ದೇವತೆ) ಇತ್ಯಾದಿ ಹೆಸರುಗಳಿವೆ. ದಿಯಾನಾಥನು ಶೇಕ್ ತಾಹೀರ್ (ಶೇಖ್ – ಸೂಫಿಗುರು) ಆದಂತೆ ಕಾವ್ಯನಾಥನು ಸಿಂಧ ಮುಸ್ಲಿಂರಲ್ಲಿ ಖಿಯಾಮುದ್ದಿನ್ ಆಗುತ್ತಾನೆ. ಮೊನಪ್ಪ ಮೌನುದ್ದಿನ್ ಆದಂತೆ ದರಿಯಾನಾಥ ಕಾಯಾನಾರ್ಥ ದರ್ಗಾ ಮತ್ತು ಗುಡಿಗಳು ಪೇಶಾವರದಿಂದ ಕಾಬೂಲ್ ತನಕ ಇವೆ. ಇವರಿಗೆ ಗುಡಿ ಹಾಗೂ ದರ್ಗಾಗಳೆರಡೂ ಕಟ್ಟಲು ಒಂದು ಕತೆಯಿದೆ. ಇವರು ಸತ್ತಾಗ ಹಿಂದೂ ಮುಸ್ಲಿಂ ಸಮುದಾಯದವರು 'ಇವನಮ್ಮವ' ಎಂಬ ಹಕ್ಕು ಸಾಧಿಸಿದರಂತೆ, ಕೊನೆಗೆ ಒಪ್ಪಂದವಾಗಿ ಒಬ್ಬರು ಗುಡಿಯನ್ನು ಮತ್ತೊಬ್ಬರು ದರ್ಗಾವನ್ನು ಕಟ್ಟಿಕೊಂಡರು."

ಇಂತಹ ಹಲವು ಸಂದರ್ಭಗಳು ಹಿಂದೂ ಮತ್ತು ಮುಸ್ಲಿಂ ಒಂದೇ ಸ್ಥಳದಲ್ಲಿ ಅನಿವಾರ್ಯವಾಗಿ ಒದಗಿಬಂದು ಧಾರ್ಮಿಕತೆಯಲ್ಲಿ ಏಕತೆಯನ್ನು ಕಂಡುಕೊಳ್ಳಲು ಪ್ರೇರಣೆಯಾಯಿತು.

ಸೂಫಿಗಳು ಕಣ್ಣಿಗೆ ಕಾಣದ ದೇವರಿಗಿಂತಲೂ ಕಣ್ಣಿಗೆ ಕಾಣುವ ಗುರುವಿನ ಮೇಲೆ ಅಪಾರವಾದ ಭಕ್ತಿ ಮತ್ತು ನಂಬಿಕೆಯುಳ್ಳವರಾಗಿದ್ದರು. ತಮ್ಮ ಹೆಸರುಗಳ ಮುಂದೆ ಪೀರ್ ಎಂಬುದನ್ನು ಸೇರಿಸಿಕೊಂಡರು. 'ಪೀರ್' ಎಂದರೆ ಗುರು. ಹಾಗಾಗಿ ಹಿಂದುವಿನಲ್ಲಿ ಜನ್ಮತಾಳಿದಂತಹ ಸಂತರು ತಮ್ಮ ಹೆಸರುಗಳ ಮುಂದೆ ಪೀರ್ ಎಂಬುದನ್ನು ಸೇರಿರುವ ಉದಾಹರಣೆಗಳು ಕರ್ನಾಟಕದಲ್ಲಿ ತುಂಬಾ ಇವೆ. ಯಮನೂರಿನ ಚಾಂಗದೇವನು ಚಾಂಗಪೀರ್ ಆಗುವುದು. ಕಾಗಿನಲೆಯ ಸಂಗಮೇಶ್ವರ ಆದಂತ ಪೀರ್, ಆಗುವ ಹಾಗೆಯೇ ಮುಸ್ಲಿಂರಲ್ಲಿ ಜಾಫರ್ ಪೀರರೆಂಬ ಹೆಸರಿನ ನಾಥಯೋಗಿಗಳಿದ್ದಾರೆ. ಮೀರ್

ಜೋಗಿಗಳು ಕೂಡ ಮುಸ್ಲಿಂರು ಹಿಂದೂ ಮತ್ತು ಮುಸ್ಲಿಂ ಸಂತರು ಮರಣ ಹೊಂದಿದ ಮೇಲೆ ಅವರ ಗೋರಿಗಳು ಒಂದೇ ಸ್ಥಳದಲ್ಲಿ ಐಕ್ಯವಾಗಿರುವುದನ್ನು ನೋಡಬಹುದು. ಹಾಗೇಯೇ ನಾಥ ಸಿದ್ಧರ ಕೆಲವು ಗೋರಿಗಳು ದರ್ಗಾಶೈಲಿಯಲ್ಲಿ ಇರುವುದನ್ನು ಕಾಣಬಹುದು. ಉದಾಹರಣೆಗೆ ಬೀಳಗಿ ತಾಲೂಕಿನ ಸಿದ್ದಾಪುರದ ದಿಗಂಬರೇಶ್ವರ ಗದ್ದುಗೆಯಿರುವ ಮಠದ ಸ್ಥಳದಲ್ಲಿ ದರ್ಗಾ ಶೈಲಿಯ ಗೋರಿಯಿದೆ. ಈ ಗೋರಿಯು ಯಾವನೋ ಒಬ್ಬ ಸೂಫಿ ಸಂತರಿಗೆ ಸೇರಿದನಾಗಿದ್ದು ಸಿದ್ದರ ಮತ್ತು ಸೂಫಿಗಳ ಧಾರ್ಮಿಕ ಸಂಬಂಧವನ್ನು ಸೂಚಿಸುವ ಕನ್ನಡಿಯಂತಿವೆ.

ಭಾರತದ ಕಡೆ ಸೂಫಿಗಳು ಪ್ರಮುಖವಾಗಿ ಸಮುದ್ರ ಮಾರ್ಗ ಮತ್ತು ಭೂ ಮಾರ್ಗದಿಂದ ಪ್ರವೇಶ ಪಡೆದರು. ಮೊಟ್ಟ ಮೊದಲು ಸೂಫಿಗಳು ಅರಬ್ಬೀ ಸಮುದ್ರದಿಂದ ಭಾರತದ ವ್ಯಾಪಾರಿಗಳ ಮೂಲಕ ಪ್ರವೇಶಿಸಿದರು. ತದನಂತರ ಭೂಮಾರ್ಗದಿಂದಲೂ ಭಾರತಕ್ಕೆ ಪ್ರವೇಶಿಸಿದರು.

೧. ಚಿಸ್ತಿ ಸಂಪ್ರದಾಯ

೧) ಖಾಜಾ ಅಬು ಇಸಾಕ ಶಾಮಿ ಚಿಶ್ತಿ (ಸ್ಥಾಪಕ)
೨) ಖಾಜಾ ಅಬು ಅಹ್ಮದ್
೩) ಖಾಜಾ ಅಬು ಮಹ್ಮದ
೪) ಖಾಜಾ ಅಬು ಯೂಸುಫ್.

೨) ಖಾದರೀ ಸಂಪ್ರದಾಯ:-

೧) ತಾರಾ ಔಸಿಯಾ-(ಸ್ಥಾಪಕ)
೨) ಅಬ್ದುಲ್ ಕಾದರಗಿಲಾನಿ (ಇವನಿಂದಲೇ ಈ ಸಂಪ್ರದಾಯಕ್ಕೆ ಹೆಸರು ಅಥವಾ ಮಹೆಬೂಬ ಸುಬಾನಿ ಬಂದಂತಿದೆ)
೩) ಮಹ್ಮದ್ ಗೌಸ-ಭಾರತಕ್ಕೆ ಖಾದರೀ ಸಂಸ್ಕೃತಿಯನ್ನು ಪರಿಚಯಿಸಿದವನು.

೩) ಸುಹರಾವರ್ದಿ ಸಂಪ್ರದಾಯ:-

೧) ಜಿಯಾವುದ್ಧೀನ್ ನಜೀಬ ಸುಹರಾವರ್ದೀ-ಸ್ಥಾಪಕ.
೨) ನಿಜಾಮೋದ್ದಿನ್ ಕುಬರಾ
೩) ಶಹಬೋದ್ದಿನ್ ಸೋಹರಾವಿರ್ದೀ
೪) ಬಹಾವೋದ್ದಿನ್ ಜಕರಿಯಾ.

೪) ನಕ್ಷಾ ಬಂದಿ ಸಂಪ್ರದಾಯ;-

೧) ಖಾಜಾ ಬಹಾವುದ್ದಿನ್ ನಕ್ಷಾ ಬಂದ್- ಸ್ಥಾಪಕ
೨) ಖಾಜ್ ಅಮೀರ ಕುಲಾಲ ಸೋರವಾರೀ
೩) ಖಾಜಾ ಮಹ್ಮದ್ ಬಾಬಾ ಸಮಾಸೀ
೪) ಖಾಜಾ ಅಜಿಯಾಂತ ಶೇಖ ಅಲೀ ರಮತಾನಿ
೫) ಖಾಜಾ ಮಹ್ಮದ್ ಅಂಜೀರ್ ಫಗನವೀ

೬) ಖಾಜಾ ಅಬದುಲ್ ಖಾಲಿಕ ಗಜನವಾನಿ

೭) ಖಾಜಾ ರಿಫ್ ರೇವಗಾರಿ

೮) ಖಾಜಾ ಅಬುಯಾಸೂಫ್ ಹಮದಾನೀ

೯) ಶೇಖ್ ಅಲೀ ಫರಮಾದೀ

೧೦) ಅಬ್ದುಲ್ ಹಸನ ಖಾರಕಾನಿ

೧೧) ವ್ಯಾಜಿತ ಬಿಸ್ತಾಮೀ

೧೨) ಜಾಫರ್ ಸಾದಿಕ್.

ಈ ಮೇಲಿನ ಸೂಫಿಗಳು ಕ್ರಮವಾಗಿ ಚಸ್ತಿ, ಖಾದರೀ, ಸುಹರಾವ, ನಕ್ಷಿಬಂದೀ ಸಂಪ್ರದಾಯಗಳನ್ನು ಬೆಳಕಿಗೆ ತಂದರು. ಇವುಗಳಲ್ಲಿ ಚಿಸ್ತಿ ಸಂಪ್ರದಾಯ ಭಾರತದಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಮುಖ್ಯವಾಗಿ ಚಿಸ್ತಿ ಸಂಪ್ರದಾಯದ ಕುರಿತು ಚರ್ಚಿಸಲಾಗಿದೆ

**೧.ಚಿಸ್ತಿ ಸಂಪ್ರದಾಯ:**

ಭಾರತದ ಧರ್ಮಗಳಲ್ಲಿ ಸೂಫಿ ಪಂಥವು ತನ್ನದೇ ಆದಂತಹ ಭೂಮಿಕೆಯನ್ನು ಹೊಂದಿದೆ. ಈ ನೆಲದ ಮೂಲಕ ನೇರ ಸಂಪರ್ಕವನ್ನು ಪಡೆದುಕೊಂಡು ಆಗಮಿಸಿದ ಸೂಫಿಗಳು ಹೆಚ್ಚಾಗಿ

ಅರೇಬಿಯಾದಿಂದ ಭಾರತಕ್ಕೆ ಭೂಮಾರ್ಗದಿಂದ ಬಂದವರಾಗಿದ್ದರು. ಹೀಗೆ ಭೂಮಾರ್ಗದಿಂದ ಬಂದ ಸೂಫಿಗಳಿಗೆ ಧರ್ಮ ಮತ್ತು ರಾಜ್ಯ ವಿಸ್ತರಣೆಗೆ ಸಹಾಯ ಮಾಡಬೇಕೆಂಬ ಒತ್ತಡವನ್ನು ಮುಸ್ಲಿಂ ಆಳರಸರು ಹೇರಿದ್ದರು.

ಒಟ್ಟಾರೆಯಾಗಿ ಸೂಫಿಗಳು ಪ್ರೇಮಮಯವಾಗಿದ್ದು, ಆತ್ಮಪತಿ ಪರಮಾತ್ಮ ಸತಿ ಎನ್ನುವ ಮಧುರ ಭಾವ, ತತ್ವವನ್ನು ಇವರು ಉಪಾಸನೆಗೆ ಆಯ್ದುಕೊಂಡವರು. ಸೂಫಿಗಳಲ್ಲಿ ಕೆಲವರು ದ್ವೈತ ಮತ್ತು ಕೆಲವರು ಅದ್ವೈತ ಸ್ಥಿತಿಯುಳ್ಳವರಾಗಿದ್ದರು. ಪೂರ್ವದಲ್ಲಿ ಅರಬಸ್ತಾನದಲ್ಲಿ, ಜ್ಞಾನಮಾರ್ಗಿಯಾಗಿ, ಪರ್ಶಿಯಾದಲ್ಲಿ ಪ್ರೇಮಿಮಾರ್ಗಿಯಾಗಿ ಬಂದ ಸೂಫಿಗಳು ಭಾರತಕ್ಕೆ ಅನುಭಾವಿಗಳಾಗಿ ಕಾಣಿಸಿಕೊಂಡರು. ಸೂಫಿಗಳ ಕಣ್ಣಿಗೆ ಕಾಣದ ದೇವರಿಗಿಂತ ಕಣ್ಣಿಗೆ ಕಾಣುವ ಗುರುವಿನ ಮೇಲೆ ಅಪಾರವಾದ ಭಕ್ತಿ ಮತ್ತು ನಂಬಿಕೆಯುಳ್ಳವರಾಗಿದ್ದರು. ತಮ್ಮ ಹೆಸರುಗಳ ಮುಂದೆ ಪೀರ್ ಎಂದು ಸೇರಿಸಿಕೊಂಡರು. 'ಪೀರ್' ಎಂಬುದನ್ನು 'ಗುರು' ವೆಂದು ಹೋಲಿಸಿದರು, ಹಿಗಾಗಿಯೇ ಹಿಂದುವಿನಲ್ಲಿ ಜನ್ಮತಾಳಿದಂತಹ ಸಂತರು ತಮ್ಮ ಹೆಸರುಗಳ ಮುಂದೆ ಪೀರ್ ಎಂಬುದನ್ನು ಸೇರಿಸಿಕೊಂಡಿದ್ದು. ಭಾರತಕ್ಕೆ ಬಂದ ಚಿಸ್ತಿ ಸಂಪ್ರದಾಯದಲ್ಲೊಬ್ಬರಾದ ಖ್ವಾಜಾ ಮೊಯೀನುದ್ದೀನ್ ಚಿಸ್ತಿ ಅವರ ಜೀವನದ ಒಂದು ತುಣಕನ್ನು ಗಮನಿಸಬಹುದು.

**ಖಾಜಾ ಮೊಯೀನುದ್ದೀನ್ ಚಿಸ್ತಿ:**

ಭಾರತ ದಿನವೂ ಲಕ್ಷಗಟ್ಟಲೆ ಹಿಂದೂ, ಮುಸ್ಲಿಮ್, ಸಿಖ್ ಧರ್ಮೀಯರನ್ನು ವಿಶ್ವದಾದ್ಯಂತದಿಂದ ಆಕರ್ಷಿಸುವ ತಾಣವಾಗಿದೆ. ಅತ್ಯಂತ ಜನಪ್ರಿಯ ಸೂಫಿ ಸಂತ ಖ್ವಾಜಾ ಮೊಯೀನುದ್ದೀನ್ ಚಿಸ್ತಿಯವರ ದರ್ಗಾ ರಾಜಸ್ತಾನದ ಅಜ್ಮೀರಿನಲ್ಲಿದೆ. ಈ ಸೂಫಿ ಸಂತನನ್ನು 'ಗರೀಬ್ ನವಾಜ್' ಅಥವಾ ಬಡವರ ರಕ್ಷಕನೆಂದು ಕರೆಯುತ್ತಾರೆ. ಇವರು ಇರಾನಿನ ಸಿಸ್ತಾನ್ ಬಳಿಯ ಸಂಜಾರ್ ಎಂಬ ಊರಿನಲ್ಲಿ ಹುಟ್ಟಿದರು. ಇವರು ಹುಟ್ಟಿದ ವರ್ಷಗಳ ಬಗ್ಗೆ ಬಹಳ ತಕರಾರುಗಳಿದ್ದು, ಅದು ೧೧೩೫ ಎಂದು ಜನಜನಿತವಾಗಿ ಒಪ್ಪಿಕೊಂಡರೂ, ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಇವರ ಕುಟುಂಬದ ತಲೆಮಾರು ಇಸ್ಲಾಮ್ ಧರ್ಮ ಸ್ಥಾಪಕ ಮುಹಮ್ಮದ್ ಪೈಗಂಬರ್‌ರವರದ್ದು ಎಂದು ಹೇಳಲಾಗುತ್ತದೆ. ಮೊಯೀನುದ್ದೀನ್‌ರಿಗೆ ೧೫ವರ್ಷ ತುಂಬಿದಾಗ ಇವರ ತಂದೆ ಖ್ವಾಜಾ

' ತನ್ನ ಮಗ

ಮೊಯೀನುದ್ದೀನರಿಗೆ ಸಾಕಷ್ಟು ಶಿಕ್ಷಣವ ನ್ನು ನೀಡಿದ್ದರು. ಖ್ವಾಜಾ ಮೊಯೀನುದ್ದೀನ್ ಚಿಸ್ತಿಯವರ ತಾಯಿ ಬೀಬಿ ಮಹ್‌ನೂರ್ ಯಾನೆ ಉಮ್ಮುಲ್ ವಾರಾಹ್‌ರವರು ಘೌಸುಲ್ ಆಝಮ್ ಎಂದು ಖ್ಯಾತರಾದ ಸೂಫಿ ಸಂತ ಷೇಖ್ ಮೊಹಿಯುದ್ದೀನ್ ಅಬ್ದುಲ್ ಖಾದಿರ್ ಜೈಲಾನಿಯವರ ಹತ್ತಿರದ ಸಂಬಂಧಿಯಾಗಿದ್ದರು. ಮೊಯೀನುದ್ದೀನ್‌ರಿಗೆ ಇಬ್ಬರು ಸಹೋದರರೂ ಇದ್ದರು ಎಂದು ತಿಳಿದು ಬಂದಿದೆ.

**ಖಾಜಾ ಮೊಯೀನುದ್ದೀನ್ ಚಿಸ್ತಿ ಅವರು ಸೂಫಿಗಳ-ಸಂತ ಭೇಟಿ**

ಖ್ವಾಜಾ ಮೊಯೀನುದ್ದೀನ್ ಚಿಸ್ತಿಯವರಿಗೆ ಸೂಫಿ ಸಂತರನ್ನು ಭೇಟಿಮಾಡುವುದು, ಅವರಿಂದ ತತ್ವಜ್ಞಾನ, ಆಧ್ಯಾತ್ಮದ ವಿಷಯಗಳನ್ನು ಚರ್ಚಿಸುವುದು. ಅಭ್ಯಾಸಮಾಡುವುದು ಅತ್ಯಂತ ಪ್ರಿಯವಾದ ಹವ್ಯಾಸ. ಹಾರೂನ್‌ನಿಂದ ಹೊರಟ ಅವರು ಬಾಗ್ದಾದನ್ನು ತಲುಪಿದಾಗ, ಅಲ್ಲಿನ ಸೂಫಿ ಸಂತ ಷೇಖ್ ಅಬೂ ನಜೀಬ್ ಸುಹ್ರವರ್ದಿಯವರ ಜೊತೆಗೆ ಸ್ವಲ್ಪಕಾಲ ಕಳೆದರು. ಅಲ್ಲಿಂದ ಸಿರಿಯಾ ದೇಶಕ್ಕೆ ತೆರಳಿ ಅಲ್ಲಿನ ಸಂತ ಒಹದ್ ಮುಹಮೂದ್ ಅಲ್ ವಾಹಿದಿ ಗಜ್ನವಿಯವರನ್ನು ಭೇಟಿಯಾದರು. ಅಲ್ಲಿಂದ ಇರಾನಿನ ಕಿರ್ಮಾನ್ ಎಂಬ ಊರಿಗೆ ತೆರಳಿದ ಖ್ವಾಜಾ ಮತ್ತೆ ಬಾಗ್ದಾದಿಗೆ ಹೋದರು. ಇಲ್ಲಿಂದ ಭಾರತದ ಕಡೆ ಪ್ರಯಾಣಿಸಿದರೆಂದು ಇತಿಹಾಸಕಾರರು ಉಲ್ಲೇಖಿಸುತ್ತಾರೆ.

ಬಾಗ್ದಾದಿನಿಂದ ಮೊದಲು ಇರಾನಿನ ಹಮ್ದಾನ್ ಎಂಬ ಊರು ತಲುಪಿ ಅಲ್ಲಿಂದ ತಬ್ರೇಜ್‌ಗೆ ಹೋಗಿ ಷೇಖ್ ಹಜ್ರತ್ ಖ್ವಾಜಾ ಅಬೂ ಸೈಯದ್ ತಬ್ರೀಜಿಯವರನ್ನು ಭೇಟಿ ಮಾಡಿದರು. ತಬ್ರೇಜ್‌ನಿಂದ ಅಸ್ತರಾಬಾದ್ ತಲುಪಿ, ಅಲ್ಲಿ ಷೇಖ್ ನಾಸಿರುದ್ದೀನ್ ಹಾಗೂ ಅಸ್ತರಾಬಾದರನ್ನು ಭೇಟಿಯಾದರು. ಇವರು ನೂರ ಎಪ್ಪತ್ತು ವರ್ಷ ಬದುಕಿದ ಸೂಫಿ ಸಂತನೆಂದೂ, ಖ್ಯಾತ ಸಂತರಾದ ಅಬೂ ಸೈಯದ್, ಅಬುಲ್ ಖೈರ್, ಅಬೂ ಯಜೀದ್, ಅಲ್ ಬಸ್ತಾಮಿ ಮತ್ತು ಷೇಖ್ ಅಬುಲ್

ಹಸನ್ ಖಿರ್‌ಖಾನಿ ಮುಂತಾದವರೆ ಸಂಪರ್ಕದಲ್ಲಿದ್ದರೆಂದೂ ಹೇಳಲಾಗುತ್ತದೆ. ಇವರಿಂದ ಸೂಫಿ ಆಧ್ಯಾತ್ಮದ ಹಲವು ರಹಸ್ಯಗಳನ್ನು ಚಿಸ್ತಿಯವರಿಗೆ ತಿಳಿದುಕೊಳ್ಳಲು ಸಾಧ್ಯವಾಯಿತು. ಇಲ್ಲಿ ತನಗಾದ ಒಂದು ಅನುಭವವನ್ನು ಖ್ವಾಜಾ ಮೊಯೀನುದ್ದೀನ್ ಚಿಸ್ತಿ ಹೀಗೆ ವಿವರಿಸುತ್ತಾರೆ.

ಅಲ್ಲಿ ಒಬ್ಬ ಕುರುಡ ದರ್ವೇಶ್‌ರನ್ನು ಭೇಟಿಯಾದೆ. ಅವರು ಧ್ಯಾನದಲ್ಲಿ ಮಗ್ನರಾಗಿದ್ದರು. ಅವರು ತಮ್ಮ ಧ್ಯಾನದಿಂದ ಎಚ್ಚರವಾಗುವ ತನಕ ಕಾದು ನಾನು ಕೇಳಿದೆ. ನೀವು ಯಾವಾಗ ದೃಷ್ಟಿಯನ್ನು ಕಳೆದು ಕೊಂಡಿರಿ? ಅದಕ್ಕೆ ಅವರು, ನಾನು ಆಧ್ಯಾತ್ಮ ಅನುಭವದ ಅತ್ಯುನ್ನತ ತುದಿಗೆ ತಲುಪಿದಾಗ ನನಗೆ ದೇವರ ಅನುಭವವಾಗುತ್ತಿತ್ತು. ನನಗೆ ಧ್ಯಾನದಲ್ಲಿರುವಾಗ ಅವನ ಮಹಾಶಕ್ತಿಯ,
ನನ್ನ
ಮನಸ್ಸು ಲೌಕಿಕ ವಿಚಾರದಲ್ಲಿ ತೊಡಗಿದಾಗ ಕೂಡಲೇ ನನಗೆ ಒಂದು ಅಶರೀರ ವಾಣಿ ಕೇಳಿಸಿತು. "ಓ ಧ್ಯಾನಾಸಕ್ತನೇ, ನೀನು ಹೇಳುತ್ತಿರುವೆ ನನ್ನನ್ನು ಮಾತ್ರ ಯೋಚಿಸುತ್ತೇನೆಂದು, ಆದರೆ, ನೀನು ಇತರ ವಿಷಯಗಳನ್ನು ಕೂಡ ಧ್ಯಾನದ ಸಮಯದಲ್ಲಿ ನೋಡುತ್ತಿರುವೆಯಲ್ಲಾ?" ನನಗೆ ಈ ಮಾತು ಕೇಳಿ ನಾಚಿಕೆಯಾಯಿತು. ನಾನು ದೇವರನ್ನು ಪ್ರಾರ್ಥಿಸಿದೆ, 'ನನ್ನ ಪ್ರೇಮಿಯ ಹೊರತು ಬೇರೆ ಯಾವುದನ್ನೂ ನನ್ನ ಕಣ್ಣುಗಳು ನೋಡದಂತಾಗಲಿ' ಎಂದು. ತಕ್ಷಣದಲ್ಲಿ ನನ್ನ ದೃಷ್ಟಿ ತನ್ನ ಶಕ್ತಿ ಕಳೆದುಕೊಂಡು, ಈಗ ನನಗೆ ದೇವರ ಪವಿತ್ರ ತೇಜಸ್ಸು ಮಾತ್ರ ಕಾಣುತ್ತದೆಯೇ ಹೊರತು ಬೇರೇನೂ ಕಾಣದು ಎಂದು ತನ್ನ ಬಗ್ಗೆ ಹೇಳಿದರು.

ನಂತರದಲ್ಲಿ ಅಫಘಾನಿಸ್ತಾನದ ಮೆಮನಾ (ಮೆಹನಾ) ತಲುಪಿ ಅಲ್ಲಿನ ಹಜ್ರತ್ ಖ್ವಾಜ ಅಬೂ ಸೈಯದ್ ಅಬುಲ್ ಖೈರ್‌ರವರ ದರ್ಗಾದ ಬಳಿ ಎರಡು ವರ್ಷದಷ್ಟು ಕಾಲ ತಂಗಿದ್ದರು. ಅಲ್ಲಿಂದ ಹೇರಾತ್ ತಲುಪಿ ನಂತರ ೧೧೬೫ರ ನವೆಂಬರ್ ಹನ್ನೊಂದನೇ ತಾರೀಕಿನಂದು (ಹಿಜರಿ ವರ್ಷ ೫೬೧ ಮಹರ್ರಮ್ ೧೦ನೇ ದಿನಾಂಕ) ಪಾಕಿಸ್ತಾನದ ಮುಲ್ತಾನ್ ತಲುಪಿದರು, "ನಾನು ಒಬ್ಬ ದರ್ವೇಶ್‌ರನ್ನು ಭೇಟಿಯಾದೆ. ಅವರ ಜೊತೆಗೆ ಮಾತಾಡುತ್ತಿರುವಾಗ ಅವರು ಹೇಳಿದರು, "ಆಧ್ಯಾತ್ಮದ ಪಥದಲ್ಲಿ ಪಶ್ಚಾತ್ತಾಪವು ಮೂರು ರೀತಿಯದ್ದಿರುತ್ತದೆ. ಒಂದು ನಾಚಿಕೆಯಿಂದಾಗಿ ಮೂಡಿದ್ದು, ಇನ್ನೊಂದು ಪಾಪಗಳನ್ನು ತೊಳೆಯುವ ಸಲುವಾಗಿರುವುದು, ಮೂರನೇಯದು ಮನುಷ್ಯ ಗರ್ವ ಮತ್ತು ಕೋಪದಿಂದ ದೂರವಾಗಿ ಪರಿಶುದ್ಧ ಹೊಂದುವುದಕ್ಕಾಗಿ" ಎಂದು ತನ್ನ ಮುಲ್ತಾನ್‌ನಲ್ಲಾದ ಅನುಭವವನ್ನು ಖ್ವಾಜಾ ಮೊಯೀನುದ್ದೀನ್ ಚಿಸ್ತಿ ಹೇಳುತ್ತಾರೆ."

ಮುಂದುವರೆದಂತೆ ಭಾರತವನ್ನು ಪ್ರವೇಶಿಸಿದ 'ಸೂಫಿ'ಗಳು ಭಾರತದಲ್ಲಿ ಇಸ್ಲಾಂ ಧರ್ಮದ ಮತ್ತು ಮುಸ್ಲಿಂ ಆಳ್ವಿಕೆಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರೇರಣೆಯನ್ನು ಒದಗಿಸಿದರು. ಅಂತಲೇ ಭಾರತವನ್ನು ಆಳಿದ ಎಲ್ಲಾ ಮುಸ್ಲಿಂ ಅರಸರ ಹಿಂದೆ ಈ ಸೂಫಿಗಳ ಹೆಸರು ಕೇಳಿಬರುತ್ತದೆ. ಮುಸ್ಲಿಂ

ಅರಸರು ರಾಜ್ಯ ವಿಸ್ತರಣೆ ಮತ್ತು ಆಡಳಿತ ನಡೆಸುವ ಸಂದಭದಲ್ಲಿ ಈ ಸೂಫಿಗಳ ಆರ್ಶಿವಾದ ಮತ್ತು ಮಾರ್ಗದರ್ಶನ ಪಡೆಯುತ್ತಿದ್ದರು. ಸೂಫಿಗಳಲ್ಲಿ ಒಂದು ಗುಂಪು ಮತಾಂತರಕ್ಕೆ ಪ್ರಚೋದಿಸುತ್ತಿದ್ದರು ಇನ್ನೊಂದು ಗುಂಪು ಮಾನವ ಪ್ರೇಮಕ್ಕಾಗಿ ಪರಮೇಶ್ವರನ ಕಾಣುವಿಕೆಗಾಗಿ ತಿರುಗಾಡಿದ ಸೂಫಿಗಳಿಗೆ ಭಾರತದಲ್ಲಿ ಜನರಿಗೆ ಹತ್ತಿರವಾದರು. ಹಾಗಾಗಿಯೆ ಇಲ್ಲಿ ಇದ್ದ ಧಾರ್ಮಿಕ ಸಿದ್ಧಾಂತಗಳ ಜೊತೆ ಸೂಫಿ ಸಿದ್ಧಾಂತಗಳ ವಿರೋಧವನ್ನು ಕಟ್ಟಿಕೊಳ್ಳದೆ ಇಲ್ಲಿಯೇ ಹುಟ್ಟಿದ್ದು ಎಂಬಂತೆ ಇಲ್ಲಿ ಇತರ ಸೊಫಿಗಳ ಜೊತೆ ಬೆರೆತುಬಿಟ್ಟಿತು. ಹೀಗಾಗಿದ್ದರಿಂದಲೆ ನಾವು ಇವತ್ತು ಭಾರತದಲ್ಲಿ, ಕರ್ನಾಟಕದಲ್ಲಿ ಹಿಂದೂ ಸಂತ ಮತ್ತು ಸೂಫಿಗಳಿಂದ ಕೂಡಿದ ಹೊಸ ಸಂಸ್ಕೃತಿಯೊಂದನ್ನು ಕಂಡುಕೊಂಡೆವು. ಉದಾಹರಣೆಗೆ ನೋಡುವುದಾದರೆ ಕರ್ನಾಟಕದಲ್ಲಿ ತಿಂತಿಣಿ ಮಾನಪ್ಪಯ್ಯನ ಪಂಥ, ಕೊಡೆಕಲ್ಲು ಬಸವೇಶ್ವರ ಪಂಥ, ಶಿರಹಟ್ಟಿ ಪಕೀರೇಶ್ವರ ಪಂಥ, ಕಾಡಿಸಿದ್ದ ಪಂಥ, ದಿನದಾರ್ ಚನ್ನ ಬಸವೇಶ್ವರ ಪಂಥ, ನಾಥಸಿದ್ದ ಪಂಥ ಮಾಡ್ಯಾಳ ಅಪ್ಪರಿನ, ಅಲ್ಲಮಪ್ರಭು ಪಂಥ, ದತ್ತಪಂಥಗಳೆಂಬ, ಈ ಎಲ್ಲ ಪಂಥಗಳು 'ಸೂಫಿ' ಪಂಥದೊಂದಿಗೆ ಬೆರೆತು ಕೊಂಡಿದ್ದವು. ಅಲ್ಲೆಲ್ಲ ಹಿಂದೂ ಮುಸ್ಲಿಂಗಳೆನ್ನದೆ ಬೆರೆತುಕೊಂಡಿದ್ದವು, ಹಿಂದೂ-ಮುಸ್ಲಿಂಗಳೆನ್ನದೆ ಇಲ್ಲಿ ಜನರು ಈ ಸೂಫಿ ಪಂಥದ ಸೌಹಾರ್ದತೆಯನ್ನು ಒಪ್ಪಿಕೊಂಡರು.

**೫.೪ ಕರ್ನಾಟಕದಲ್ಲಿನ ಸೂಫಿಗಳು:**

ಕರ್ನಾಟಕವು ಶರಣರ, ದಾಸರ, ಸಂತರ ನಾಡಾಗಿರುವಂತೆ, ಸೂಫಿ ಸಂತರ ನಾಡೂ ಆಗಿದೆ. ಇವರು ನೀಡಿದ ಜ್ಞಾನದಿಂದ ಈ ನಾಡಿನ ಜನರು ಪರಮತ ಸಹಿಷ್ಣುಗಳಾಗಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ಇಂದಿಗೂ ಹಿಂದು, ಮುಸ್ಲಿಂ, ಕ್ರೈಸ್ತರು ಸೂಫಿ ಸಂತರ ದರ್ಗಾಗಳನ್ನು ಸಂದರ್ಶಿಸಿ, ಉರುಸುಗಳಲ್ಲಿ ಭಾಗವಹಿಸಿ, ಭಕ್ತಿ, ಶ್ರದ್ದೆಗಳಿಂದ ನಡೆದುಕೊಳ್ಳುತ್ತಾರೆ.

"ಕರ್ನಾಟಕ'ದ ಸೂಫಿಗಳೆಂದರೆ ಯಾರು? ಈಗಿನ ಕರ್ನಾಟಕದ ರಾಜಕೀಯ ಭೌಗೋಳಿಕತೆಗೂ ಶತಮಾನಗಳಿಂದ ಇಡೀ ಸೀಮೆಯ ತುಂಬ ಅಲೆದಾಡಿಕೊಂಡಿದ್ದ ಸೂಫಿಗಳ ಪ್ರದೇಶದ ಪರಿಕಲ್ಪನೆಗೂ ಸಂಬಂಧವಿಲ್ಲ. ರಾಜಕೀಯ ಎಲ್ಲೆಗಳನ್ನು ಮೀರಿ ಹರಡಿಕೊಳ್ಳುವ ಸಾಂಸ್ಕೃತಿಕ ಸಂಗತಿಗಳನ್ನು, ಈಗಿನ ರಾಜ್ಯ ಜಿಲ್ಲೆಗಳ ಪರಿಕಲ್ಪನೆಯ ಒಳಗೆ ಹುದುಗಿಸಿ ನೋಡುವಾಗ ಸಮಸ್ಯೆಯಾಗುತ್ತದೆ. ಹೇಗೆ ನೋಡಿದರೂ 'ಕರ್ನಾಟಕ'ದ ಸೂಫಿಗಳ ಬೇರುಗಳು ಬಾಗ್ದಾದ್ ದೆಹಲಿಗಳಿಂದ ದೌಲತಾಬಾದ್ ಕರ್ನೂಲುಗಳ ತನಕ, 'ಅನ್ಯ' ದೇಶ ರಾಜ್ಯಗಳಿಗೆ ಹೋಗಿ ಬಿಡುತ್ತವೆ. ಸೂಫಿಸಂ ಏಕಕಾಲಕ್ಕೆ ಜಾಗತಿಕವೂ ಪ್ರದೇಶಬದ್ಧವೂ ಆಗಿತ್ತು. ಈ ಎರಡು ಬಿಂದುಗಳ ನಡುವೆ ನಿರಂತರ ಕೊಡುಕೊಳ್ಳುವಿಕೆ ನಡೆಯುತ್ತಿದ್ದವು. ಇವು ಸಾಂಸ್ಕೃತಿಕವಾಗಿ ಮುಖ್ಯವಾದವು. ಚರ್ಚೆ ಬಿಜಾಪುರದಿಂದ ಬಾಗ್ದಾದಿನತ್ತ ಚಾಚಬೇಕೂ ಬಾಗ್ದಾದಿನಿಂದ ಬಿಜಾಪುರದತ್ತ ಹರಿಯಬೇಕೊ? ಸೂಫಿಗಳಲ್ಲಿ ಎಲ್ಲೊ ಹುಟ್ಟಿ, ತಮ್ಮ ಜೀವಿತದ ಬಹುಕಾಲವನ್ನು ಇನ್ನೆಲ್ಲೊ ಕಳೆದು 'ಕರ್ನಾಟಕ'ಕ್ಕೆ ಬಂದು ನೆಲಸಿದವರಿದ್ದಾರೆ.

ಗುಲ್ಬರ್ಗಾದ ಬಂದೇನವಾಜನಂತೆ; 'ಕರ್ನಾಟಕ'ದಲ್ಲಿ ಬೆಳೆದು, ಬೇರೆಲ್ಲೊ ನಡೆದು ನೆಲೆಸಿದವರಿದ್ದಾರೆ–ಟಿಪ್ಪುಜಾಲಿಯಾನಂತೆ. ಎಲ್ಲಿಂದಲೋ ಹೊರಟು ಎಲ್ಲಿಗೊ ತಲುಪುವಾಗ ನಡುವೆ ಕರ್ನಾಟಕವನ್ನು ಹಾದು ಹೋದವರಿದ್ದಾರೆ–ಪೆನುಕೊಂಡೆಯ ಬಾಬಾ ಫಕ್ರುದ್ದೀನನಂತೆ. ಈಗಿನ ಕರ್ನಾಟಕದ ಆಚೆಗಿದ್ದು ಕರ್ನಾಟಕದೊಳಗಿನ ವಿದ್ಯಮಾನಗಳ ಮೇಲೆ ಪ್ರಭಾವ ಬೀರಿದವರಿದ್ದಾರೆ. ಖುಲದಾಬಾದಿನ ಜ್ಯಾನುದ್ದೀನ್ ಚಿಸ್ತಿಯಂತೆ."[6]

ಸೂಫಿಗಳು ಹುಟ್ಟಿ ಬಂದ ತಮ್ಮ ಧರ್ಮಗಳ ವಿರುದ್ಧ ಕಿಡಿಕಾರಿದವರು. ಒಂದೇ ದೃಷ್ಟಿಕೋನವನ್ನು ಹೊಂದಿದಂತಹ ಧರ್ಮಗಳ ಆಚಾರ–ವಿಚಾರಗಳನ್ನು ಖಂಡಿಸಿ ಎಲ್ಲಾ ಧರ್ಮಗಳು ಒಂದೇ ಎಂದು ಲೋಕಕ್ಕೆ ಸಾರಿದವರು. ಯಾವ ಧರ್ಮವು ಪರಿಪೂರ್ಣವಲ್ಲ, ಸಾಕ್ಷಾತ್ಕಾರಕ್ಕೆ ಕೊಂಡ್ಯುಯುವ ಮಾರ್ಗಗಳು ಬೇರೆ ಬೇರೆ ಎಂದು ನಂಬಿದವರು. ಧಾರ್ಮಿಕ ಆಚರಣೆಗಳಿಗಿಂತ ವಿಚಾರಕ್ಕೆ, ವಿಚಾರಗಳಿಗಿಂತ ಭಾವಶುದ್ದಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಂತವರು.

ದ್ವೈತ ಭಾವನೆಯನ್ನು ತೊರೆದು ದೇವರು ಬೇರೆ ಮನಷ್ಯ ಬೇರೆ ಎಂಬ ಕಲ್ಪನೆಯನ್ನು ದೂರ ಮಾಡಿ ಅದರಿಂದ ಹುಟ್ಟುವ ಧೀನಶಕ್ತಿಯನ್ನು ಮೇಲೆ ತಂದವರು. ದೇವರು ಮನುಷ್ಯ ಐಕ್ಯವಾಗುವ ಅದ್ವೈತೆ ಸ್ಥಿತಿಯನ್ನು ತಲುಪಿದವರು ಜಾತಿ, ಲಿಂಗ, ವರ್ಣಭೇದವನ್ನು ಕಡೆಗಣಿಸಿ ದಿವ್ಯಶಕ್ತಿಯ ಎದುರಿನಲ್ಲಿ ಸರ್ವರೂ ಸಮಾನರು ಎಂಬ ದೈವಿಕ ಸಮತಾವಾದವನ್ನು ಪ್ರಚಾರಗೊಳಿಸಿದರು.

ಧರ್ಮಗಳ ಅನುಯಾಯಿಗಳು ತಮ್ಮ ಧರ್ಮವೇ ಶ್ರೇಷ್ಠವೆಂದು ಉಳಿದ ಧರ್ಮಗಳನ್ನು ಹಿಯಾಳಿಸಿವುದು ಧರ್ಮಗಳಲ್ಲಿರುವ ತಿರುಳಿಗೆ ಆದ್ಯತೆ ಕೊಡದೇ ಅವುಗಳ ಆಚರಣೆಗಳಿಗೆ ಆದ್ಯತೆಕೊಟ್ಟು ಜನಾಂಗೀಯ ಭಾವನೆಗಳಿಗೆ ಧಕ್ಕೆಯನ್ನುಂಟು ಮಾಡುವುದು ಹುಟ್ಟಿನಿಂದಲೇ ಜಾತಿ, ಧರ್ಮಗಳಿಗೆ ನೇತು ಹಾಕುವವರು, ಅವುಗಳ ಹೆಸರಿನಲ್ಲಿ ಧರ್ಮಯುದ್ದ ಮುಂತಾದವುಗಳನ್ನು ನಡೆಸುವವರು ಇದ್ದಾರೆ. ಒಂದೇ ಧರ್ಮದ ಒಳಗೆ ಅನೇಕ ಪಂಗಡಗಳಿವೆ. ಇವು ಎಲ್ಲ ಒಂದೇ ಧರ್ಮದ ತಂತು ಬೇರುಗಳು ಎಂದು ತಿಳಿದಿದ್ದರೂ ಸಹ ಉಪಪಂಗಡಗಳ ನಡುವೆ ಧಾರ್ಮಿಕ ಸಂಘರ್ಷಗಳು ನಡೆಯುತ್ತಲೇ ಬಂದಿವೆ. ಇಂತಹ ಸಂಘರ್ಷಗಳನ್ನು ಎಲ್ಲಾ ಧರ್ಮಗಳಲ್ಲಿಯೂ ನಾವು ನೋಡುಬಹುದಾಗಿದೆ. ಹಿಂದೂ, ಬೌದ್ಧ, ಜೈನ, ವೀರಶೈವ, ಇಸ್ಲಾಂ, ಕ್ರೈಸ್ತ ಮುಂತಾದ ಧರ್ಮಗಳಲ್ಲಿ ಈ ರೀತಿಯ ಭೇಧಗಳನ್ನು ನಾವು ನೋಡಬಹುದು.

ಆದರೆ ಧರ್ಮದ ಮೂಲ ಉದ್ದೇಶ ಮಾನವನ ಕುಲವನ್ನು ಒಗ್ಗೂಡಿಸುವುದು ಎಲ್ಲಾ ಮಾನವರು ಒಂದೇ ಎಂಬ ಪರಿಕಲ್ಪನೆಯನ್ನು ಬಿಂಬಿಸುವುದು ಅದನ್ನು ಸನ್ಮಾರ್ಗದಲ್ಲಿ ಕೊಂಡೊಯುವದೇ ಸೂಫಿ ಅನುಭಾವಿಗಳ ನಂಬಿಕೆಯಾಗಿದೆ.

"ಸಾಮಾನ್ಯವಾಗಿ ಸೂಫಿಪಂಥವನ್ನು ಇಸ್ಲಾಮಿನ ಅನುಭಾವಿ ಶಾಖೆ ಎಂದೇ ವ್ಯಾಖ್ಯಾನಿಸಿಕೊಂಡು ಬರಲಾಗಿದೆ. ಸೂಫಿವಾದಕ್ಕೂ ಇಸ್ಲಾಮ್ ಧರ್ಮಕ್ಕೂ ಸಂಬಂಧ ಇಲ್ಲವೆಂತಲ್ಲ, ಇದೆ. ಅದೊಂದು ವಿಚಿತ್ರ ಸಂಬಂಧ. ಜಗತ್ತಿನ ಎಲ್ಲ ಕಡೆ ಅನುಭಾವಿ ಪಂಥಗಳಿರುವಂತೆ, ಸೂಫಿಪಂಥವು ಮಧ್ಯ ಏಶಿಯಾದ ಇಸ್ಲಾಮಿ ಜಗತ್ತಿನಲ್ಲಿ ಹುಟ್ಟಿದ ಒಂದು ದರ್ಶನ. 'ಇಸ್ಲಾಮಿನ ಅನುಭಾವಿ ಧಾರೆ' ಎಂದರೆ ಸೂಫಿ ಅನುಭಾವಿ ಕವಿ ತತ್ವಜ್ಞಾನಿಗಳನ್ನು 'ಇಸ್ಲಾಮ್ ಧರ್ಮಕ್ಕೆ ಸೇರಿದವರು' ಎಂದರೆ, ಹೆಚ್ಚಿನದೇನನ್ನೂ ಹೇಳಿದಂತಾಗುವುದಿಲ್ಲ. ನಾಥಸಿದ್ಧರು 'ಹಿಂದೂ' ಧರ್ಮದ ಅನುಯಾಯಿಗಳು, ಅಲ್ಲಮಪ್ರಭು 'ವೀರಶೈವ' ಧರ್ಮಕ್ಕೆ ಸೇರಿದವನು, ಶರೀಫನು 'ಮುಸ್ಲಿಂ' ಸಂತಕವಿ – ಎಂದಂತೆ ಆಗುತ್ತದೆ ಅಷ್ಟೆ. ಯಾವುದನ್ನು ಇಸ್ಲಾಂ ಎಂದು ಸಾಂಪ್ರದಾಯಿಕ ಧರ್ಮಶಾಸ್ತ್ರಜ್ಞರು ಮಂಡಿಸುತ್ತಿದ್ದರೋ, ಆ ಪರಿಕಲ್ಪನೆಗೆ ಪರ್ಯಾಯವಾಗಿ ಚಿಂತಿಸುತ್ತಲೂ ಬದುಕುತ್ತಲೂ ಹೆಚ್ಚಿನ ಸೂಫಿಗಳು ಬಂದಿದ್ದಾರೆ. ಹೀಗಾಗಿಯೇ ಕಾಲಕಾಲಕ್ಕೆ ಧಾರ್ಮಿಕ ಮೂಲಬೂತವಾದವು ಅವರನ್ನು 'ಧರ್ಮವಿರೋಧಿ'ಗಳೆಂದು ಆರೋಪಿಸುತ್ತ ಶಿಕ್ಷಿಸುತ್ತ ಬಂದಿದೆ. ಬಿಜಾಪುರದ ಅಮೀನುದ್ದೀನ್, ಗೋಗಿಯ ಮಹಮದ್ ಬಹ್ರಿ ಅವರು ಹೀಗೆ ಧಾರ್ಮಿಕ ವಿಚಾರಣೆಗಳಿಗೆ ಬಳಗಾದ ಕರ್ನಾಟಕದ ಸೂಫಿಗಳು. ಆಧುನಿಕ ಮೂಲಭೂತವಾದಿಗಳು ಸೂಫಿ 'ತಸಮುಫ್' (ಅನುಭಾವ) ಪರಿಕಲ್ಪನೆಯನ್ನು ಇಸ್ಲಾಮ್ ವಿರೋಧಿ ಎಂದು ಮುಲಾಜಿಲ್ಲದೆ ಘೋಷಿಸುತ್ತಾರೆ."[2]

ಆದ್ದರಿಂದ ಕರ್ನಾಟಕದ ಸೂಫಿಗಳು ಎಂದರೆ, ಈಗಿನ ಮಹಾರಾಷ್ಟ್ರ, ಆಂಧ್ರಗಳಿಗೆ ಸೇರಿದ, ಸೊಲ್ಲಾಪುರ ಅಕ್ಕಲಕೋಟೆ ಕೌತಾಳಂ ಹೊನ್ನೂರು ಎಳ್ಳಾರತಿ ಹೊಳಲುಗುಂದಿ ಮುಂತಾದ ಊರುಗಳಲ್ಲಿರುವ ಸೂಫಿಗಳು ಕೂಡ. ಈಗಲೂ ಇವರು ಸಾಂಸ್ಕೃತಿಕವಾಗಿ ಕರ್ನಾಟಕದವರೇ. ಇಲ್ಲಿ ಕನ್ನಡದ ಜತೆ, ಉರ್ದು ಮರಾಠಿ ತೆಲುಗು ಭಾಷೆಗಳಿವೆ. ಈ ಮೂರೂ ಭಾಷಿಕ ರಾಜ್ಯಗಳ ಒಳಗೆ ಹರಿಯುವ ಕೃಷ್ಣಾ ತುಂಗಭದ್ರೆ ಭೀಮಾ ನದಿಗಳ ಸೀಮೆಯ ಕರ್ನಾಟಕ ಸೂಫಿಗಳ ನಿಜವಾದ ಭೂಮಿಕೆಯೆನ್ನಬಹುದು. ರಾಜಕೀಯವಾಗಿ ಕರ್ನಾಟಕದ ಒಳಗಿದ್ದರೂ ಕಟ್ಪಾಡಿ, ಉಳ್ಳಾಲ, ಮಂಜನಾಡಿ, ಜಮಾಲಾಬಾದ್‌ಗಳ ಕರಾವಳಿ ಸಂತರು (ವಾಸ್ತವದಲ್ಲಿ ಇವರು ಅರಬಸ್ತಾನದಿಂದ ಬಂದ ಮಿಶನರಿಗಳು) ಕರ್ನಾಟಕ ಸಂಸ್ಕೃತಿಗೆ ಸೇರಿದವರೆಂದು ಅನಿಸದೆ, ಕೇರಳದ ಮಾಪ್ಲಾ ಸಂಸ್ಕೃತಿಗೆ ಸೇರಿದವರು ಎನಿಸುತ್ತದೆ. ಆದ್ದರಿಂದ ಸಾಂಸ್ಕೃತಿಕವಾಗಿ ಕರ್ನಾಟಕವನ್ನು ಬೇರೆ ತರಹ ಕಟ್ಟಿಕೊಂಡು ಕರ್ನಾಟಕದ ಸೂಫಿಗಳ ಎಂಬ ಪರಿಕಲ್ಪನೆಯನ್ನು ಪರಿಶೀಲಿಸಬೇಕಿದೆ. ಸಾಂಸ್ಕೃತಿಕ ಅಧ್ಯಯನಕ್ಕಾಗಿ ರಾಜಕೀಯ ಗಡಿಗಳನ್ನು ಮೀರಿ ರೂಪಿಸಿಕೊಳ್ಳುವ ಪ್ರದೇಶವನ್ನು 'ಸೀಮೆ' ಎಂದು ಕರೆಯಬಹುದು. ಆಗ 'ಬಳ್ಳಾರಿ ಸೀಮೆ' ಎಂದಾಗ ಈಗ ಕರ್ನೂಲು ಜಿಲ್ಲೆಗೆ ಸೇರಿರುವ ಆಲೂರು ಆದೋನಿ ಕೌತಾಳಂ ಗುಡೇಕಲ್ಲುಗಳೂ ಸೇರಿಕೊಳ್ಳುತ್ತವೆ.

ರಹಮತ್ ತರೀಕೆರೆಯವರು ನಾಸಿರುದ್ದೀನ್ - ನಾಗನಾಥ ಪರಂಪರೆಯನ್ನು ಗಮನಿಸಿ ಈ ಕೆಳಗಿನಂತೆ ಕರ್ನಾಟಕದ ಸೂಫಿಗಳನ್ನು ವಿಭಾಗಿಸಿದ್ದಾರೆ. ಇವರ ಬಗೆಗೆ ಈ ಅಧ್ಯಾಯದಲ್ಲಿ ವಿವರಣೆ ಕೊಡಲಿಕ್ಕೆ ಆಗದಿರುದನ್ನು ನೆನೆಪಿಸುತ್ತೇನೆ.

೧. **ಮಹಾನುಭಾವ ಸಂಪ್ರದಾಯ :**

೧) ನಾಸಿರುದ್ದೀನ್ ಚಿರಾಗ್ ಉರುಫ್ ಆದಿನಾಥಾ ಉರುಫ್ ನಾಗನಾಥ

೨) ಮಚೇಂದ್ರನಾಥ

೩) ಗೋರಖನಾಥ

೪) ಗಹಿಸಿನಾಥ

೫) ನಿವೃತ್ತಿನಾಥ

೬) ಜ್ಞಾನೇಶ್ವರ

೭) ಸೋಪಾಣ

೮) ಮುಕ್ತಾಬಾಯಿ

೯) ವಿಸೋಬಾ ಖೇಚರ್

೧೦) ಯೋಗಿರಾಜ ಚಾಂಗದೇವ

೧೧) ನಾಮದೇವ ಸಿಂಪಿ.

೨. **ಚೈತನ್ಯ ಸಂಪ್ರದಾಯ :**

ನಾಸೀರುದ್ದೀನ್ ಚಿರಾಗ್ ಉರುಫ್ ನಾಗನಾಥ್ ಶಿವಯೋಗಿಯ ಶಿಷ್ಯ ಸಂಪ್ರದಾಯ

೧) ಆಳಂದದ ರಾಘವ ಚೈತನ್ಯ (ಅಲ್ಲಾವುದ್ದೀನ್ ಲಾಡ್ಲೆಮಶಾಯಿಕ್); ಆಳಂದದ ಸಿದ್ದಲಿಂಗ; ಪುನ್ನಾರಿನ ಭಕ್ತ ಮಜುಂದಾರ್

೨) ಗುಲ್ಬರ್ಗಾದ ಕೇಶವ ಚೈತನ್ಯ (ಬಂದೇನವಾಜ್); ಗುಲ್ಬರ್ಗಾದ ನವಕೋಟಿ ನಾರಾಯಣ

೩) ಮಾಯಿನಾಳದ ಬಾಬಾಜಿ ಚೈತನ್ಯ (ಶಹಾಬುದ್ದೀನ್ ಬಾಬಾ); ದೆಹುವಿನ ಸಂತ ತುಕಾರಾಂ.

೩. **ಲಿಂಗಾಯತ ಶಿವ ಸಂಪ್ರದಾಯ :** ಕಮಾಲುದ್ದೀನ್ ಆಲಂಪ್ರಭುವಿನಿಂದ ಶುರುವಾಗುವ ಈ ಪರಂಪರೆಯಲ್ಲಿ ೫ ಶಾಖೆಗಳಿವೆ.

೧.ಮುಳುಕುಂದದ ಹಿಮವಂತಸ್ವಾಮಿ

೨) ಸೊನ್ನಲಪುರದ ಸಿದ್ದರಾಮೇಶ್ವರ, ಕಲ್ಯಾಣದ ಬಸವೇಶ್ವರ, ಉಳವಿಯ ಚೆನ್ನಬಸವೇಸ್ವರ

೩) ಅರವತ್ಮೂರು ಪುರಾತನರು

೪) ವಿಜಾಪುರದ ಅಮೀನುದ್ದೀನ್, ಶಿರಹಟ್ಟಿ ಫಕೀರಸ್ವಾಮಿ, ಮುಳಗುಂದದ ಮಾಳಿಪ್ರಭು

೫) ಕೊಲ್ಲಾಪುರದ ರಾಮಲಿಂಗ ಆಳೆ.

**೪. ಶೇಕ ನಾಸಿರುದ್ದೀನ್ ಅಥವಾ ನಾಗನಾಥನ ಭಕ್ತ ಸಂಪ್ರದಾಯ :**

೧) ವಡಬಾಳದ ದತ್ತಚೈತನ್ಯ ಸಿದ್ದ

೨) ಮಾಂಗಾಂವಿನ ರಾಮಭಟ್ಟ

೩) ಕಿಲಾರಿಯ ರಘುನಾಥ್

೪) ಇಂದೂರಿನ ತಿಮ್ಮಣ್ಣ ಧನಗರ್

೫) ಹಿರ್ವೆಯ ಕೃಷ್ಣಾಬಾಯಿ

೬) ಮಣ್ಣೂರಿನ ಏಕಲಿಂಗತೆಲೆ

೭) ಮಹೋಳದ ಹೆಗ್ರಾಸಸ್ವಾಮಿ ಹಾಗೂ ಅವನ ಖಲೀಫರಾದ ನರೇಂದ್ರದ ಅಜ್ಞಾನಸಿದ್ದ, ವಡಬಾಳಿನ ನರೇಂದ್ರ ಸಿದ್ದ, ಮಹೋಳದ ಸಿದ್ದಲಿಂಗ

೮) ಮಣೂರಿನ ವರದಮ್ಮ

೯) ಮಾರ್ಡಿಯ ಬಡವ್ವಾ (ಸೊಲ್ಲಾಪುರ )

೧೦) ಅರೆಗಾಂವದ ನರಸಿಂಹ

೧೧) ಪೈಥಾಣದ ಬಹಿರಾಂಭಟ್ಟ.

ಈ ಗುರು ಶಿಷ್ಯ ಪರಂಪರೆಯ ಸಂತರು, ನಾಥ, ಸೂಫಿ, ವಚನಕಾರ, ಮಹಾನುಭಾವ, ದತ್ತ, ವಾರಕರಿ ಸಂಪ್ರದಾಯಗಳಿಗೆ ಸೇರಿದವರು. ಇವರ ಕಾಲವನ್ನು ೧೦ ರಿಂದ ೧೭ ನೇಯ ಶತಮಾನದವರೆಗೆ ಗುರುತಿಸಿದ್ದಾರೆ. "ಕರ್ನಾಟಕದ ಅನೇಕ ಅನುಭಾವಿ ಸಂಪ್ರದಾಯಗಳಲ್ಲಿ ಗುರುಶಿಷ್ಯರ ಹಾಗೂ ಸ್ನೇಹಿತರ ಸಂಬಂಧಗಳು, ಧಾರ್ಮಿಕವಾಗಿ 'ಅನ್ಯ' ಎನ್ನಲಾಗುವ ವ್ಯಕ್ತಿಗಳ ನಡುವೆ ಏರ್ಪಟ್ಟಿವೆ. ನಾಸಿರುದ್ದೀನ್– ಸಿದ್ದಲಿಂಗ, ಬಂದೇನವಾಜ್ – ಶರಣಬಸವೇಶ್ವರ; ಮುರ್ತುಜಾಖಾದ್ರಿ – ಮಹಾಂತಶಿವಯೋಗಿ; ಗುಡೇಕಲ್ ಹುಸೇನಪೀರಾ – ನಾಗಲಿಂಗಸ್ವಾಮಿ, ಶೇಕ್ ಶಾವಲಿ– ಗಾದಿಲಿಂಗ; ತುರಾಸಾಹೇಬ – ನಿಡುವಂಚಿ ಭದ್ರೇಶ್ವರ; ಸಾರವಾಡದ ಇಸ್ಮಾಯಿಲ್ ಶಾಖಾದ್ರಿ – ಬಬಲಾದಿ ಸಿದ್ದ; ಗೂಗಿ ಚಂದಾಸಾಹೇಬ – ದಿಗ್ಗಿ ಸಂಗಮನಾಥ; ಮಿರ್ಜಿ ಮೀರಾಸಾಹೇಬ ಕಾಡಸಿದ್ದೇಶ್ವರ; ಅಲ್ಲಿಸಾಬು– ಶಿಲವೇರಿ ಶಿವಪ್ಪ, ಕಡಕೋಳ ಮಡಿವಾಳಪ್ಪ– ಚನ್ನೂರ ಜಲಾಲಸಾಬ, ಕೂಡಲೂರು ಸಿದ್ದಲಿಂಗ– ಸಾಹಿಬಣ್ಣತಾತ, ಗೋಂವಿಂದಭಟ್ಟ– ಶಿಶುನಾಳ – ಹೀಗೆ ಅನೇಕ ಜೋಡಿಗಳು ಕಾಣಸಿಗುತ್ತವೆ."[೮]

ಹಿಂದೂ – ಮುಸ್ಲಿಂ ಸಾಮರಸ್ಯವಾದಿಗಳಿಗೆ ಎದ್ದು ಕಾಣುವುದು ದರ್ಗಾ–ಗದ್ದಿಗೆಗಳ ವಾಸ್ತು ರಚನೆ. ಸೂಫೀಕರಣಕ್ಕೆ ಒಳಗಾದ ಸಂತರ ಸಮಾಧಿಗಳು ಹಾಗೂ ಮಠಗಳು 'ಇಸ್ಲಾಂಮಿಕ್' ಎಂದು ಕರೆಯಲಾಗುವ ಇಂಡೋಸಾರ್ಸೆನಿಕ್ ರಚನೆಯನ್ನು ಪಡೆದುಬಿಟ್ಟಿವೆ. ಸೂಫಿಗಳ ಸಮಾಧಿ ಉತ್ತರ ದಕ್ಷಿಣಕ್ಕೆ ಮಲಗಿರುವ ಆಕಾರದಲ್ಲಿದ್ದರೆ, ಸೂಫಿಯ ಶಿಷ್ಯನಾದ ಸಂತನಿಗೆ ಕುಳ್ಳಿರಿಸಿದ ರೀತಿಯಲ್ಲಿ ಇರುತ್ತದೆ. ಸಮಾಧಿ ಕಟ್ಟಡದ ಹೊರರೂಪ ಮಾತ್ರ ಗುಂಬಜನ್ನುಳ್ಳದ್ದಾಗಿದ್ದು ಒಂದೇ ರೀತಿಯಲ್ಲಿರುತ್ತದೆ. 'ಇಸ್ಲಾಮಿಕ್' ವಾಸ್ತುವಿನಲ್ಲಿರುವ ಕರ್ನಾಟಕದ ರಚನೆಗಳೆಂದರೆ – ಸಾವಳಗಿ ಶಿವಯೋಗಿ, ತಿಂತಿಣಿ ಮೋನಪ್ಪ, ಶಿರಹಟ್ಟಿ ಫಕೀರಸ್ವಾಮಿ, ಕೊಡೇಕಲ್ ಬಸವಣ್ಣ, ದಿಗ್ಗಿಸಂಗಮನಾಥ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಸಾಲೋಟಗಿ ಶಿವಯೋಗಿ ಜಲದುರ್ಗದ ಸಂಗಮನಾಥ, ಮಾಡ್ಯಾಳದ ಅಲ್ಲಮಪ್ರಭು ಹಾಗೂ ಗದ್ದನಕೇರಿ ಮಳೇಪ್ಪಯ್ಯ ಅವರ ಗದ್ದುಗೆ–ಗುಡಿ ಮುಂತಾದವು. ಅಲ್ಲದೆ ಕೆಲವು ಸಂತನ ಗದ್ದಿಗೆ ಇವೆ. ದಿಗದಿ ಸಂಗಮನಾಥ ನ ಮೇಲೆ ಚಂದಾಸಾಹೇಬ್, ಸಾವಳಗಿ ಶಿವಲಿಂಗನ ಮೇಲೆ ಖಾಜಾ ಬಂಧೇ ನವಾಜ್, ಮೋನಪ್ಪಯ್ಯನ ಮೇಲೆ ಮಹಮದ್ ಪೈಗಂಬರು ಅವರ ತೋರುಗದ್ದಿಗೆಗಳು ಇವೆ.

ಇಸ್ಲಾಂ ಆಥವಾ ನಿರಾಕಾರವಾದಿ ದೈವವನ್ನು ನಂಬುವ ಧರ್ಮಗಳೆಲ್ಲ ಆಕಾರ ವಿರೋಧಿಯಾದವು. ಆದರೂ ಅನೇಖ ಚಾರಿತ್ರಿಕ ಕಾರಣಗಳಿಂದ ಇಸ್ಲಾಂಮಿಗೆ ಕಾಬಾದ ಕಟ್ಟಡವನ್ನು (ಇಸ್ಲಾಮ್ ಪೂರ್ವ ಕಾಲದಲ್ಲಿ ಇದು ಅರಬ್ ಬುಡಕಟ್ಟುಗಳು ತಮ್ಮ ದೇವತಾವಿಗ್ರಹಗಳನ್ನಿಡುತ್ತಿದ್ದ ಮಂದಿರ) ಪವಿತ್ತ ಸಂಕೇತವಾಗಿ ಉಳಿಸಿಕೊಳ್ಳಬೇಕಾಗಿ ಬಂದಿತು. ಜೀವವುಳ್ಳ ಪ್ರಾಣಿಯ ಯಾವುದೇ ಆಕೃತಿಯನ್ನು ನಿರ್ಮಿಸುವುದು ಸೃಷ್ಟಿಕರ್ತನಿಗೆ ಹಾಕುವ ಸವಾಲು ಎಂದು ಇಸ್ಲಾಂ ಧರ್ಮಶಾಸ್ತ್ರ ವಿಧಿಸಿದಾಗ, ಇಸ್ಲಾಮಿನ ಸೃಜನಶೀಲತೆ ವಾಸ್ತು ಕಲೆಯಲ್ಲಿ ಹೊರಹೊಮ್ಮ ತೊಡಗಿತು. ಮಸೀದಿಗಳು ದರ್ಗಾಗಳು ರೂಪುಗೊಳ್ಳತೊಡಗಿದವು. ಮಧ್ಯ ಏಶಿಯಾದಿಂದ ಬಂದ ವಾಸ್ತುಶಿಲ್ಪಿಗಳು ಇವರ ಪ್ರಭಾವ ಪಡೆದ ದೇಶಿಯ ವಾಸ್ತು ಶಿಲ್ಪಿಗಳೂ ಕೂಡಿ ಹುಟ್ಟಿಸಿದ ಸಂಕರ ಶೈಲಿಯಲ್ಲಿ ಈ ಕಟ್ಟಡಗಳು ಮೇಲೆದ್ದವು. ದೊರೆಯೋ ಅಧಿಕಾರಿಯೊ ಸಂತನಿಗೆ ದರ್ಗಾ ಕಟ್ಟಿಸಿದಾಗೆಲ್ಲ ಈ ಶೈಲಿ ಅನಿವಾರ್ಯವಾಗಿ ವೈದೋರುತ್ತಿತ್ತು. ವರವಿಯ ಮೋನಪ್ಪಯ್ಯನ ಗುಡಿಯನ್ನು ಬಿಜಾಪುರದ ರಾಜ್ಯಪಾಲ ಅಂಕುಸಖಾನನೂ ಗದ್ದನಕೇರಿಯ ಮಳೆಪ್ಪಯ್ಯನ ಗುಡಿಯನ್ನು ಬಿಜಾಪುರದ ದೊರೆಗಳೂ ಕಟ್ಟಿಸಿದ್ದರಿಂದ ಅವು 'ದರ್ಗಾ'ಗಳಾಗಿ ಹೋದವು. ಗುಡಿಯನ್ನು ದರ್ಗಾ/ಮಸೀದಿ ಆಕಾರದಲ್ಲಿ ಕಟ್ಟಿದರೆ ಮುಸ್ಲಿಂ ದಾಳಿಕೋರರು ಕೆಡಹುದಿಲ್ಲ ಎಂಬ ಭೀತಿಮೂಲವಾದ ರಕ್ಷಣಾತಂತ್ರ ಈ ವಾಸ್ತುವಿನ ಹಿಂದೆ ಕೆಲಸ ಮಾಡಿದೆ' ಎಂದು ಕೆಲವು ಚರಿತ್ರಕಾರರು ಹೇಳುತ್ತಾರೆ. ಆದರೆ ಕಟ್ಟಿಸಿದ ಮಡಿಕೇರಿಯ ಓಂಕಾರೇಶ್ವರ ಗುಡಿಯು ಮಸೀದಿಯ ಆಕಾರದಲ್ಲಿದೆ. ಬಹಮನಿಗಳು ಕಾಲದ ಎಲ್ಲ ಸೂಫಿ ದರ್ಗಾಗಳಲ್ಲಿ, ಅದರಲ್ಲೂ ಬಾಗಿಲ ಚಾಕಟ್ಟುಗಳಲ್ಲಿ 'ಹಿಂದು ಸಾಹಿತ್ಯ ತತ್ವಶಾಸ್ತ್ರಗಳ ನಡುವೆ ನಡೆದ ಮಹಾಸಂಕರದ ಒಂದು ಭಾಗವಾಗಿ ಬಂದಿರುವ ಈ ವಾಸ್ತು ರೂಪಾಂತರವನ್ನು, ಹೀಗೆಲ್ಲ ಸರಳೀಕರಿಸುವುದು ಕಷ್ಟ. ಈ ಇಸ್ಲಾಮೀ

ವಾಸ್ತುವಿನಲ್ಲಿರುವ ದರ್ಗಾ- ಗುಡಿಗಳು ಮಾತ್ರ ಕೋಮುವಾದಿ ಚರಿತ್ರೆಕಾರರ ಎಲ್ಲ ಥಿಯರಿಗಳನ್ನು ಧಿಕ್ಕರಿಸುವಂತ ಜನತೆಯ ಶ್ರದ್ಧಾಕೇಂದ್ರಗಳಾಗಿವೆ.

ಕೊಡೇಕಲ್ ಬಸವಣ್ಣನವರು ಮೂಲತಃ ಹಿಂದೂವಾಗಿ, ಮುಸ್ಲಿಂ ಧರ್ಮದಿಂದ ಪಡೆದು ಏಕೀಭವಿಸಿದನು ಎಂಬಂತಹ ತಿಳುವಳಿಕೆಯನ್ನು, ಕ್ರೀಯೆಗಳನ್ನು, ವೀರಸಂಗಯ್ಯ ಬಗೆಬಗೆಯಾಗಿ ಚಿತ್ರಿಸುತ್ತಾರೆ.

"ಇವರಿಗೋಂಕಾರ ಅವರಿಗಲೀಫವು
ಇವರ ಪ್ರಮಾಣ ಅವರ ಕರ್ಮವು
ಇವರಿಗಲ್ಲಮ ಅವರಿಗಲ್ಲಾ ನಾಮಗಳು
ಇವರು ಬಸವನು ಅವರು ಮಹಮ್ಮದ್
ಇವರ ವೇದವು ಅವರ ಮುಸ್ತಾಫವು
ಇವರು ಬಲಕೆ ಅವರು ಮಾತ್ರವೆ ಎಡಹುರುಪ."[೯]

'ಅಲೀಫ' ಎಂದರೆ ಅರಬ್ಬಿ ವರ್ಣಮಾಲೆಯ ಮೊದಲಕ್ಷರ. ಇದು ಅಲ್ಲಾ ಶಬ್ದದ ಮೊದಲಕ್ಷರ ಕೂಡ. 'ಮುಸ್ತಾಫ' ಎಂದರೆ ಕುರಾನು. 'ಹುರುಪ' ಎಂದರೆ ಅಕ್ಷರ. ಪದ್ಯದೊಳಗಿರುವ ಮಾತುಗಳನ್ನು ಕಲ್ಯಾಣದ ಕಡೆದಿನಗಳಲ್ಲಿ ಅಲ್ಲಮಪ್ರಭು ಬಸವಣ್ಣನಿಗೆ ಕರೆದು ಹೇಳುತ್ತಿದ್ದಾನೆ. ಈ ವಿಚಾರವನ್ನು ರಹಮತ್ ತರೀಕೆರೆ ಅವರು ತಮ್ಮ ಕೃತಿಯೊಂದರಲ್ಲಿ ಗುರುತಿಸಿದ್ದಾರೆ.

೧೨ನೇ ಶತಮಾನದ ಶಿವಶರಣರ ಲಿಂಗ ಪರಿಕಲ್ಪನೆಯನ್ನು ತೀರಸ್ಕರಿಸಿ ಬೋಳ ಜಂಗಮವನ್ನು ಅಪ್ಪಿಕೊಂಡ ಮೋನಪ್ಪಯ್ಯ ಶರಣರನ್ನು ಗ್ರಹಿಸುವ ರೀತಿ ಬೇರೆಯಾಗಿದೆ. ಮೂಲತಃ ವಿಶ್ವಕರ್ಮ ಮನೆಯಲ್ಲಿ ಹುಟ್ಟಿದ ಮೋನಪ್ಪಯ್ಯನವರು ಜಾತಿವರ್ಗಗಳನ್ನು ಮೀರಿ ಆಧ್ಯಾತ್ಮಿಕ ಹಕ್ಕನ್ನು ಒದಗಿಸಿರುವ ಅಂಶವನ್ನು ಈ ಕೇಳಗಿನಂತೆ ಗಮನಿಸಬಹುದು.

"ಅಗಣಿತದ ಶರಣರು ಒಂದೆ ವಿಗಡದಿಂದ ಇಳಿದಾರು
ಟಗರು ತಾಕಿದ ಹಾಗೆ ತಾಕ್ಯಾರು
ಭಗಭಗನೆ ಉರಿವರು, ಘನಕ್ಕೆ ಮುಚ್ಚಳವನಿಕ್ಕುವರು
ಹೊಗಗೊಡರು ತಮ್ಮ ಗರಡಿಯ ಬಸವಣ್ಣ."[೧೦]

ಮಸೀದಿಯಲ್ಲಿ ದೇವರು ಹುಡುಕುವವರ ಬಗ್ಗೆ ಪದ್ಯ ಒಂದು ಹೀಗೆ ಹೇಳುತ್ತದೆ;

"ದೊಡ್ಡಮನುಷ್ಯರು ಕೆಲವರು ಹೇಳುತ್ತಾರೆ, ದೇವರು ಮಸೀದಿಯಲ್ಲಿದ್ದಾನೆ
ಎಂದು ಹಗಲೂರಾತ್ರಿ ಅವರು ಮಸೀದಿಯಲ್ಲಿ ಕಾಲಕಳೆಯುತ್ತಾರೆ ಆದರೆ
ಇಡೀ ಸೃಷ್ಟಿಯೆ ಮಸೀದಿ ದೇಹ ಅದರೊಳಗಿನ ದೀಪದ ಗೂಡು ಹೃದಯವೆ
ದೀಪ ಈ ಅಧ್ಯಾತ್ಮದ ದೀಪವನ್ನು ಒಳಗೆ ಬೆಳಗಿಸಿಕೊಂಡರೆ ಅದೇ ನಮಾಜು."[೧೧]

ಈ ಪದ್ಯವನ್ನು ಗಮನಿಸಿದಾಗ ಇದು ಅನುಭಾವಿ ಮೂಲತತ್ವ ಆಗಿದ್ದು, ಸ್ಥಾವರವನ್ನು ನಿರಾಕರಿಸುವ ಶರಣರನ್ನು ನೆನಪಿಸುತ್ತದೆ. ಅದೇ ರೀತಿ ಸಾಂಪ್ರದಾಯಿಕವಾಗಿ ಇರುವ ನಮಾಜ್‌ನ್ನು ನಿರಾಕರಿಸುವ ನಬೀಸಾಬ್‌ರು ಹಾಡಿದ ಒಂದು ಪದ್ಯವನ್ನು ಇಲ್ಲಿ ಗಮನಿಸಬಹುದು. ಇದು ಮಸುದಿಯಲ್ಲಿ ನಮಾಜು ಮಾಡುವಾಗ ಅನುಸರಿಸುವ ಎಲ್ಲಾ ಆಚರಣೆಗಳನ್ನು ಪರಿಭಾಷೆಯಾಗಿ ಬಳಸಿಕೊಂಡು ನಿಗೂಢ ಅರ್ಥವನ್ನು ಹೊಳಿಸುತ್ತದೆ. ಅಂದರೆ ಇಲ್ಲಿ ಶಿಶುನಾಳ ಶರೀಫರ ಸಂಪ್ರದಾಯದ ಇಸ್ಲಾಮಿನ ಮೂಲ ತತ್ವಗಳಲ್ಲಿ ನಮಾಜು ಒಂದು ಎಂಬ ಮಾತನ್ನು ಇದು ಒತ್ತಿಹೇಳುತ್ತದೆ.

ನಮಾಜು ಮಾಡಿದೆನೊ ದಿನದಿನ ನಮಾಜು ಮಾಡಿದೆನೊ
ನಮಾಜು ಮನಸ್ಸಿನ ಅವಾಜು ಕೇಳಿ ಸುಮ್ಮನೆ ಚಿತ್ತವು ಗೊತ್ತನಿಲಿಸೀ
ನಮಾಜು ಮಾಡಿದೆನೊ ದಿನದಿನ ನಮಾಜು ಮಾಡಿದೆನೊ.

–ಎಂದು ಪದವು ಶುರುವಾಗಿ

ಅಂತರಂಗದ ನಮಾಜು ಸಹಜಿದು ನಿರಂತರ ಮಾಡೋ ಹೊಳೆವೋದು
ಭ್ರಾಂತಿಗಳಿಗೆ ತೋರುವದಲ್ಲಾ ಅಂತರ್ಗುರುವಿನ ಪೂಜೆ ಮಾಡಿದವ ಬಲ್ಲ [೨]

ಅಲ್ಲಾಹನು ಮಾನವನನ್ನು ಸೃಷ್ಟಿಸಿ ಆತನಿಗೆ ಜ್ಞಾನವನ್ನು ನೀಡಿ ಯೋಗ್ಯತೆಯನ್ನು ಕಲ್ಪಿಸಿದನು. ಉನ್ನತ ಬೆಳವಣಿಗೆಗೆ ಅನುಗ್ರಹಿಸಿದನು. ಈ ಜಗತ್ತು ಯಾವ ರೀತಿ ಅಭಿವೃದ್ಧಿ ಹೊಂದುತ್ತಿದೆಯೋ ಅದು ಅಲ್ಲಾಹನು ಕಲ್ಪಿಸಿರುವ ಯೋಗ್ಯತೆ ಮತ್ತು ಅನುಗ್ರಹವಾಗಿದೆ. ಯಾವಾಗ ರೋಗ ರುಜಿನಗಳು ಹರಡುತ್ತವೇಯೋ ಆಗ ಆ ಅಲ್ಲಾಹನು ಮಾನವರ ರಕ್ಷಣೆ ಮತ್ತು ಉಳುವಿಗಾಗಿ ತನ್ನ ಮಹಿಮೆ ಮತ್ತು ಪಾಲನೆಯಿಂದಾಗಿ ರೋಗ ಕ್ಷೇಮಕ್ಕೆ ಮಾರ್ಗದರ್ಶನ ನೀಡುತ್ತಾನೆ.

**೫.೫ ಕೊಪ್ಪಳ ಜಿಲ್ಲೆಗಳಲ್ಲಿನ ಸೂಫಿ ಹಾಗೂ ತತ್ವಪದಕಾರರು :**

ಕರ್ನಾಟಕದಲ್ಲಿ ಅನೇಕ ಸಂತರು, ಮಹಾತ್ಮರು ಆಗಿ ಹೋಗಿದ್ದಾರೆ. ತಮ್ಮ ತಪ ಶಕ್ತಿಯನ್ನು ಸಮಾಜದ ಕಲ್ಯಾಣಕ್ಕೆ ಧಾರೆ ಎರೆಯುವ ಮೂಲಕ ಮಹಾತ್ಮರೆನಿಸಿದ್ದಾರೆ. ಹಿಂದೂ, ಮುಸ್ಲಿಂರಲ್ಲಿ ಭಾವೈಕ್ಯತೆಯನ್ನು ಸಾರಿ ಸಮಾಜದ ಸರ್ವ ಸಮುದಾಯದವರೂ ಸೌಹಾರ್ದತೆಯಿಂದ ಬಾಳುವಂಥ ವಾತಾವರಣ ನಿರ್ಮಿಸುವ ಮೂಲಕ ಸಾಮಾಜಿಕ ಬದಲಾವಣೆಯನ್ನು ತಂದಿದ್ದಾರೆ. ಅಂತಹವರಲ್ಲಿ ಈ ಜಿಲ್ಲೆಯ ಸಿರಸಪ್ಪಯ್ಯ, ಜಡೇತಾತ, ಯಮನೂರಪ್ಪ, ಸೈಯದ್ ಅಲಿ ಖಾದ್ರಿ, ಹಜರತ್ ಮುಸ್ತಾ ಖಾದ್ರಿ, ಹುಸೇನ್ ಷಾಹವಲಿ, ಮುರುಡಿಯ ಯಮನೂರಸ್ವಾಮಿ, ಮೈಬುಸುಬಾನಿ ಮುಂತಾದ ಸೂಫಿಗಳು ಹೇರೂರು ವಿರುಪಣ್ಣ, ವಡಕಿ ತಾತಪ್ಪಯ್ಯ ಮತ್ತು ತಾಳಕೇರಿ ಬಸವರಾಜ ಎಂಬುವರು ಈ ಜಿಲ್ಲೆಯ ತತ್ವಪದಕಾರರು. ಈಗಾಗಲೇ ಹಿಂದಿನ ಅಧ್ಯಾಯದಲ್ಲಿ ಸೂಫಿಗಳ ಜೀವನ ಚರಿತ್ರೆ ಮತ್ತು ಅವರು

ಸಾಧಿಸಿದ ತತ್ವಗಳನ್ನು ಚರ್ಚಿಸಿದ್ದರಿಂದ ಈ ಅಧ್ಯಾಯದಲ್ಲಿ ಕೇವಲ ತತ್ವಪದಕಾರರ ಸಿದ್ಧಾಂತಗಳನ್ನು ಚರ್ಚಿಸಿರುವುದನ್ನು ನೆನೆಪಿಸುತ್ತೇನೆ.

'ತತ್ವ' ಎಂದರೆ ಸಿದ್ಧಾಂತ, ಪರಮಾತ್ಮ, ನಿಜಸ್ಥಿತಿ ಎಂದರ್ಥವಾಗುತ್ತದೆ. ತತ್ವಜ್ಞಾನವನ್ನು ಬ್ರಹ್ಮ ಜ್ಞಾನವೆಂದು ಕರೆಯಲಾಗಿದೆ. 'ಪದ' ಎಂಬುದನ್ನು 'ಹಾಡು', 'ಹದಗೊಂಡ ಶಬ್ದ' ಎಂದು ಕರೆಯಲಾಗಿದೆ. ಪರಮಾತ್ಮನಿಗೆ ಸಂಬಂಧಿಸಿದ, ಸಿದ್ದಾಂತವನ್ನು ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೆಗೆ ತತ್ವಪದ ಎನ್ನುತ್ತಾರೆ. 'ತತ್ವಪದ'ದಲ್ಲಿ ತತ್ವ ಮತು ಪದ ಇವೆರಡಕ್ಕೂ ಅರ್ಥಪೂರ್ಣವಾದ ಸಂಬಂಧವಿದೆ. 'ತತ್ವ' ವಸ್ತುವಾದರೆ, 'ಪದ' ಅಭಿವ್ಯಕ್ತಿ ಮಾಧ್ಯಮ. ವಸ್ತು ಮತ್ತು ಅಭಿವ್ಯಕ್ತಿ ಇವೆರಡನ್ನು ಸಮನ್ವಯಗೊಳಿಸಿಕೊಂಡಿರುವ 'ತತ್ವಪದ' ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿರುವುದರ ಜೊತೆಗೆ ಸಂಸ್ಕೃತಿಯೊಂದರ ಪ್ರತೀಕವೂ ಆಗಿದೆ. ತತ್ವಪದಗಳು "ಹರಸಂಸ್ಕೃತಿಯನ್ನು ಹೇಳಿದರೆ, ಕೀರ್ತನೆಗಳು ಹರಿಸಂಸ್ಕೃತಿಯನ್ನು ಹೇಳಿವೆ."[೨]

ತತ್ವಪದಗಳನ್ನು ಅನುಭಾವ ಪದಗಳೆಂದೂ ಇದಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಕೈವಲ್ಯ ಸಾಹಿತ್ಯವೆಂದು ಗುರುತಿಸಲಾಗಿದೆ. ಕನ್ನಡದಲ್ಲಿ ರಚನೆಯಾಗಿರುವ ತತ್ವಪದ ಸಾಹಿತ್ಯಕ್ಕೆ ಒಂದು ಪರಂಪರೆಯನ್ನು ಕಟ್ಟಿಕೊಂಡು ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು "ಕನ್ನಡದಲ್ಲಿ ಕೈವಲ್ಯ ಸಾಹಿತ್ಯ" ಎಂಬ ಗ್ರಂಥವನ್ನು ರಚಿಸಿದ್ದಾರೆ. ತತ್ವಪದಗಳು ಒಂದು ಅನುಭವದ ಘಟನೆಯಿಂದ ಹುಟ್ಟುತ್ತವೆ. ಆ ಘಟನೆಗಳ 'ತತ್ವ'ವನ್ನು ಭೇಧಿಸುವುದರ ಮೂಲಕ ಆ ಅನುಭವವನ್ನು ಅನುಭಾವಕ್ಕೆ ತಿರುಗಿಸುತ್ತವೆ. ಸಂತರ ಅಥವಾ ಅವರ ಶಿಷ್ಯರ ಬದುಕಿನ ಘಟನೆಗಳೇ ತತ್ವಪದಗಳಿಗೆ ವಿವರಣೆಯಾಗುತ್ತವೆ. ಕೆಲವು ಸಲ ವಿಲಕ್ಷಣವಾದ ಸ್ಥಿತಿಗಳ ಮುಖಾಂತರ ಸಂತರು ಲೋಕದವರ ಮನಸ್ಸಿನಲ್ಲಿ ಹೊಸ ಅರ್ಥಗಳನ್ನು ಹೊರಡಿಸುತ್ತಾರೆ. ಇದನ್ನು ಸಂತ ಪರಂಪರೆಯಲ್ಲಿ ಕ್ರಿಯಾರೂಪಗಳೂ; ತತ್ವಪದಗಳು 'ಕಾರಣೀಕ'ಗಳ ವಾಗ್ರೂಪಗಳು ಎನ್ನುವ ಪ್ರೊ. ಎಚ್.ಎಸ್. ಶಿವಪ್ರಕಾಶ ಅವರು 'ತತ್ವಪದಗಳಿಗೂ ಕಾರಣೀಕ'ಗಳಿಗೂ ಇರುವ ಅರ್ಥಪೂರ್ಣ ಸಂಬಂಧವನ್ನು ವಿವರಿಸಿದ್ದಾರೆ.

ಸೂಫಿ ಹಾಗೂ ತತ್ವಪದಕಾರರು ಒಳಗೊಂಡಂತೆ ಇವರುಗಳು ಶಾಲೆ ಕಲಿತದ್ದು. ಉರ್ದು ಮತ್ತು ಮೋಡಿ ಭಾಷೆಯಲ್ಲಿ ಕೆಲವರು ಅರಬ್ಬೀ ಮತ್ತು ಪಾರಸಿ ಭಾಷೆಯನ್ನು ಬಲ್ಲವರಾಗಿದ್ದರು. ಮಾತೃ ಭಾಷೆ ಉರ್ದು ಅಥವಾ ಹಿಂದಿಯಾಗಿತ್ತು. ನಿಜಾಮನ ಆಳ್ವಿಕೆ ಇರುವುದರಿಂದ ಉರ್ದು ಪ್ರಮುಖ ಭಾಷೆಯಾಗಿತ್ತು. ಆಂಗ್ಲರ ಆಗಮನದಿಂದ ಇಂಗ್ಲೀಷ ಭಾಷೆಯೂ ಹಣಕಿ ಹಾಕಿತ್ತು. ಇಂತಹ ಒತ್ತಡಗಳ ಮಧ್ಯೆ ಈ ಮುಸ್ಲಿಂ ತತ್ವಪದಕಾರರು ಕೇವಲ ಸಂಪರ್ಕದಿಂದ ಮಾತ್ರವೇ ಬರೆಯಲು ಬಾರದಿದ್ದ ಸಂದರ್ಭದಲ್ಲಿ ಲಿಪಿ ಅನ್ಯ ಭಾಷೆಯದಾಗಿದ್ದ ಕನ್ನಡ ಭಾಷೆಯಲ್ಲಿ ತತ್ವಪದಗಳನ್ನು ರಚಿಸಿದ್ದ ಸಾಧನೆ ಸಣ್ಣದೇನಲ್ಲ.

ಸುಮಾರು ೧೧ನೇ ಶತಮಾನದ ನಂತರ ಅನುಭಾವ ಸಾಹಿತ್ಯದ ಗಟ್ಟಿ ಗುರುತನ್ನು ಗುರುತಿಸಬಹುದು. ೧೧ನೇ ಶತಮಾನದ ಕವಿರಾಜಮಾರ್ಗ ಘಟ್ಟದಲ್ಲಿ ಇಲ್ಲದ ಜನಸ್ಪಂದನವನ್ನು ೧೧ನೇ ಶತಮಾನದಲ್ಲಿ ಕಾಣಬಹುದಾಗಿದೆ. ಕವಿರಾಜ ಮಾರ್ಗ ಕಾಲಕ್ಕೆ ಜನಪದ ಸಾಹಿತ್ಯವಿರಲಿಲ್ಲವೆಂದಲ್ಲ ಆಗಲೂ ಇತ್ತು ಆದರೆ ಆಗಿನ ಜನಪದ ಸಾಹಿತ್ಯ ಪ್ರಕಾರಗಳ ಹೆಸರು ಬೇರೆಯಾಗಿದ್ದವು. ಒನಕೆವಾಡ, ಬೆದಂಡೆ ಚಿತ್ತಾಣ, ಪರಗಣಗಳಂತಹ ಶಿಷ್ಯ ರೂಪದಲ್ಲಿ ಇಂದಿಗೂ ಇರುವವು. ಇವತ್ತಿನ ನಮ್ಮ ಜನಪದರ ಜನಪದ ಸಾಹಿತ್ಯದಲ್ಲಿ ಉಳಿದುಕೊಂಡು ಬಂದಿದೆ ಎಂದರೆ ಮೊದಲಿದ್ದ ರೂಪದಲ್ಲಿನ ಅಲ್ಪಸ್ವಲ್ಪ ಬದಲಾವಣೆ ಎಂದೆಯೆ ತಿಳಿಯಬೇಕಾಗುತ್ತದೆ.

ಓದು ಬರಹ ಬಾರದ ಜನಪದರೂ ಹಾಕುತ್ತಿದ್ದ ವೇಷಗಳನ್ನು ಸೂಚಿಸುವ, ಜನಸಾಮಾನ್ಯರು ಕೇವಲ ಮನೋರಂಜನೆಗಾಗಿ ಹಾಕುತ್ತಿದ್ದ ವೇಷಗಳ ಸರಣಿ, ಮತ್ತು ಪ್ರಾಚೀನ ನಾಟಕದ ಲಕ್ಷಣಗಳನ್ನು ಗರ್ಭಿಸಿಕೊಂಡಿದ್ದ, ಒಂದು ಜಾನಪದ ಕಲಾ ಪ್ರಕಾರಕ್ಕೆ "ಪರಗಣ" ಎಂದು, ಈ ಪರಗಣದ ವೇಷಗಳನ್ನು ಬಾದುಬ್ಬೆ ಹಬ್ಬದ ದಿನಗಳಲ್ಲಿ ಮಾತ್ರವಲ್ಲದೆ, ಕಾರ ಹುಣ್ಣಿಮೆಯ ಹಬ್ಬದ ದಿನಗಳಲ್ಲಿ ಮಾತು, ಕೆಟ್ಟ, ಅರ್ಥ, ಕಲ್ಪನೋಕ್ತಿ ಕಷ್ಟ. ಈ ಮೂರು ಇಲ್ಲಿ ದೋಷಗಳೆನಿಸುವುದಿಲ್ಲ. ಇಲ್ಲಿ ಹೇಳ ಹೊರಟಿರುವುದೇನೆಂದರೆ, ಕವಿರಾಜಮಾರ್ಗ ಕಾಲದ ಪರಗಣವೆಂಬುದನ್ನು ಇಂದು ನಮ್ಮ ಜನಪದರು ಒಂದಿಲ್ಲೊಂದು ಬಗೆಯಲ್ಲಿ ತಮ್ಮೊಳಗೆ ಮೈಗೂಡಿಸಿಕೊಂಡು ಬಂದಿದ್ದೆಂಬುದು. ಪರಗಣದಂತೆಯೇ ಇಂದಿಗೂ ನಮ್ಮ ಜನಪದರು ಛಂದೋ ಪ್ರಕಾರವನ್ನು ನಮ್ಮ ಮೌಖಿಕತೆಯಲ್ಲಿ ಮದುವೆಯ, ಎಣ್ಣೆಹಚ್ಚುವ, ಸೋಬಾನದ ಹಾಡುಗಳಾಗಿ ಬಳಸಿಕೊಂಡು ಬಂದಿದ್ದಾರೆ. ಸಿದ್ಧರಾಮ ಚರಿತೆಯಲ್ಲಿ ಆ ವೈಶಾಖದ ಹುಣ್ಣಿಮೆಯ ಬೆಳದಿಂಗಳಲ್ಲಿ ಮಲ್ಲಿಕಾರ್ಜುನ ಲಿಂಗದ ಕ್ಷಮಕ್ಷಮದಲ್ಲಿ ಸಿದ್ಧರಾಮ ಗುರುವಿನ ಪ್ರಸಾದವನ್ನು ಊಟ ಮಾಡಿಸಿ, ವಿವಾಹ ಮಾಡುತ್ತೇವೆಂದು ಮದು ಮಕ್ಕಳಿಗೆ ಬಾಸಿಂಗ-ದಂಡೆ-ವಸ್ತ್ರಾಭರಣಗಳಿಂದ ಶೃಂಗಾರ ಮಾಡಿ ಆರತಿಯನ್ನು ಬೆಳಗಿ ಹೆಂಗಸರು "ಧವಳ"ವನ್ನು ಹಾಡುತ್ತಿದ್ದಾಗ ಸಿದ್ಧರಾಮನು ಜಂಗಮವನ್ನು ತಣಿಸಿ ಒಂದು "ವಿಘ್ನಹ ಲಗ್ನ"ವೆಂದು "ಓಂಪುಣ್ಯ" ಎನ್ನಲು ಗಂಡು ಹೆಣ್ಣುಗಳ ನಡುವೆ ಹಿಡಿದ ತೆರೆಗಳು ಸರಿದವು.

ಅವರವರು ಒಬ್ಬರೊಬ್ಬರಿಗೆ ಜೀರಿಗೆ ಬೆಲ್ಲವನ್ನು ಚೆಲ್ಲಿದರು. ಕೈಧಾರೆ ಎರೆದಾಯಿತು. ಮೇಲ್ವಕ್ಕೆ ಇಡಲಾಯಿತು. ತುಂಡಲವನ್ನು ತೆರೆಯ ಮೇಲೆ ಎರಚಲಾಯಿತು. ವನಿತೆಯರಲ್ಲೂ ಮಂಗಳಾರತಿ ಎತ್ತಿ ಹಾಡಿ ಹರಿಸುತ್ತಿದ್ದರೆ. ಶ್ರೀಮನ್ನಾರಾಯಣನು ಗೋಪಿಯರಿಗೆ ಒಲಿದು ಪ್ರತ್ಯೇಕ ರೂಪಗಿ ಜೋಡಿಯಾದಂತಿದ್ದಿತು. ಸಾವಿರ ವಧೂ-ವರರ ಜೋಡಿ ಸರಳ ಸಿದ್ಧರಾಮ ಚರಿತ್ರೆಯಲ್ಲಿ ಉಲ್ಲೇಖಗೊಂಡಂತಹ ಈ ಮೇಲಿನ "ಧವಳ" ಎಂಬ ಜನಪದ ಪ್ರಕಾರವನ್ನು ಅಂದಿನಂತೆಯೆ ಇಂದಿಗೂ ಮದುವೆಯ ಆಚರಣೆಗಳಲ್ಲಿ ಜನಪದರು ಹಾಡಿಕೊಂಡು ಬರುತ್ತಿದ್ದಾರೆ. ಅಂದರೆ ಸಿದ್ಧರಾಮ ಚರಿತ್ರೆಯಲ್ಲಿ ಉಲ್ಲೇಖಗೊಂಡ "ಧವಳ" ಇಂದು ತನ್ನ ಹೆಸರನ್ನು ಬದಲಿಸಿಕೊಂಡು ಮದುವೆಯ

ಹಾಡುಗಳು, ಸಂಪ್ರದಾಯ ಹಾಡುಗಳೆಂದು ಜನಪದರಲ್ಲಿ ಪ್ರಚಲಿತಗೊಂಡಿವೆ ಈ ವಿವರಣೆಯನ್ನು ಗಮನಿಸಿದಂತೆ ನಾವು ಅನುಭಾವ ಸಾಹಿತ್ಯ, ತತ್ವಪದ ಸಾಹಿತ್ಯವನ್ನು ಇಂದಿನ ಭಜನೆಯ ಹಾಡುಗಳೆಂದು ಅವು ಜನಪದರಲ್ಲಿ 'ಭಜನೆ ಪದ' ಎಂಬ ಹೆಸರಿನಿಂದ ಪ್ರಚಲಿತಗೊಂಡಿವೆ ಎನ್ನಬಹುದು.

ಲೋಕ ರೂಢಿಯಂತೆ ತಮ್ಮ ಧರ್ಮವನ್ನು ತಾನು ಅನುಸರಿಸುವುದರ ಜೊತೆಗೆ ಖುರಾನ– ಓದುವುದು, ನಮಾಜ ಮಾಡುವುದು, ಇವುಗಳ ಜೊತೆಗೆ ಖುರಾನಿನ ಒಂದೊಂದು ಪದ್ಯಗಳು ಬಿಡಿಸಿ – ಕನ್ನಡದ ಜೊತೆಯಾಗಿ ಶರಣರ ಗುಣಗಾನ ಮಾಡಿರುತ್ತಾರೆ. ವೀರಶೈವ ಮಠಗಳ ಪ್ರಭಾವ ವಲಯದಲ್ಲಿ ಬೆಳೆದಿರುವುದರಿಂದ ಇವರ ಕನ್ನಡ ಪ್ರಜ್ಞೆ ಮತ್ತುಷ್ಟು ಗಟ್ಟಿಗೊಂಡಿತ್ತು. ಅವರು ಲೋಕಾನುಭವ ಮಠಗಳ ಆಶ್ರಯದಲ್ಲಿ ಸಂಪಾದಿಸಿಕೊಂಡರು. ವೀರಶೈವ ಶರಣ ಸಿದ್ಧಾಂತವನ್ನು ಸಮಗ್ರವಾಗಿ ಆರಿಸಿಕೊಂಡರು. ಆಧ್ಯಾತ್ಮದ ಹಸಿವನ್ನು ಹಿಂಗಿಸಿಕೊಂಡರು. ಕನ್ನಡ ಭಾಷೆಯ ಸಂಪರ್ಕದಲ್ಲಿ ಜಾತಿ – ಮತಗಳನ್ನು ಮೀರಿ ಬೆರೆತುಕೊಂಡರು.

ತಾವು ಕಂಡುಂಡ ತತ್ವಾದರ್ಶಗಳನ್ನು ತಮಗೆ ತಿಳಿದ ಲಿಪಿಯಲ್ಲಿಯೇ ಕನ್ನಡ ಭಾಷೆಯಲ್ಲಿ ಅಭಿವ್ಯಕ್ತಿಸಿದರು, ಲಿಪಿ ಬಾರದಿದ್ದರೂ ಆ ಭಾಷೆಯಲ್ಲಿ ಹಾಡುಗಳನ್ನು ಬರೆದ ಇವರ ರಚನಾ ಕೌಶಲ್ಯ ನಿಜಕ್ಕೂ ಶ್ಲಾಘನೀಯವಾದದು. 'ಇವರುಗಳೆಲ್ಲಾ ಒಂದು ರೀತಿಯ ಪವಾಡ ಸದೃಶ ರೀತಿಯಲ್ಲಿ – ಕನ್ನಡತನವನ್ನು ಉಳಿಸಿ ಬೆಳೆಸಿದ್ದಾರೆ. ಯಾರಾದರೂ ಒಬ್ಬ ವ್ಯಕ್ತಿ ಎದುರು ಕಂಡಾಗ ನಮಸ್ಕಾರ, ಶರಣ ಎಂತಲೂ ಕರೆಯುತ್ತಿದ್ದರು. ಇದರಿಂದ ಗೊತ್ತಾಗುತ್ತದೆ ಅವರು ಕನ್ನಡವನ್ನು ಆಳವಾಗಿ ಅವಲೋಕಿಸಿ ಲೋಕ ಕಲ್ಯಾಣಕ್ಕಾಗಿ ಕನ್ನಡದಲ್ಲಿಯೇ ಅನೇಕ ತತ್ವಪದಗಳು, ಗೀಗಿ ಪದಗಳು, ಜನಪದ ಸಾಹಿತ್ಯದ ಸೇವೆಗೈದಿದ್ದಾರೆ. ಹಿಂದುಗಳಿಗೆ ಹಿಂದುಗಳಂತೆ, ಮುಸ್ಲಿಂರಿಗೆ ಮುಸ್ಲಿಂರಂತೆ ತತ್ವಪದಕಾರರು ಎಲ್ಲರನ್ನು ಸಮಾನವಾಗಿ ಕಂಡರು. ಈ ಎರಡು ಕೋಮುಗಳ ನಡುವೆ ಬಾಂಧವ್ಯಕ್ಕೆ ಸುವರ್ಣ ಸೇತುವೆಯಾದರು. ಮುಸ್ಲಿಂರಿಗೆ ಫಕೀರನಾದರೆ, ಹಿಂದುಗಳಿಗೆ ಶರಣರಾದರು. ನಮಾಜು ಬಿಳುವುದರೊಂದಿಗೆ ಬಸವ ಪುರಾಣ ಪಠಿಸಿದರು. ಖುರಾನ ಓದುವದರೊಂದಿಗೆ ವಚನ, ತತ್ವಪದಗಳನ್ನು ಹಾಡಿದರು. ಮತ್ತು ಸ್ವತಃ ತಾವೆ ಪದಗಳನ್ನು ರಚಿಸಿದರು. ಕನ್ನಡ ಸಾಹಿತ್ಯಕ್ಕೆ ಆ ಕಾಲಕ್ಕೆ ಮುಸ್ಲಿಂ ಸಂವೇದನಗಳನ್ನು ಪರಿಚಯಿಸಿ ಕೊಟ್ಟರು.

ಜಗತ್ತಿನಲ್ಲಿ ಇದುವರೆಗೂ ನಡೆದ ಚಾರಿತ್ರಿಕ ಘಟನೆಗಳಲ್ಲಿಯ ಸನ್ನಿವೇಶಗಳನ್ನು ನೋಡಿದಾಗ ಅಂದಂದಿನ ಆಳರಸರು ತಮ್ಮ ರಾಜ್ಯ ವಿಸ್ತರಣೆಯ ಜೊತೆಗೆ ಕಲೆ ಸಾಹಿತ್ಯಗಳಿಗೆ ಆಶ್ರಯ ನೀಡಿದ್ದರು. ಈ ಕಲೆಗಳನ್ನು, ಕವಿಗಳನ್ನು ಸ್ನೇಹಿತರಂತೆ ಕಾಣುತ್ತಿದ್ದರು ಎಂಬುವುದಕ್ಕೆ ಚರಿತ್ರೆ ಆಧಾರ ನೀಡುತ್ತದೆ. ಅಂತೆಯೇ ಕರ್ನಾಟಕವನ್ನು ಆಳಿದ ಎಲ್ಲಾ ಅರಸು ಮನೆತನಗಳನ್ನು ನೋಡಿದಾಗ ಆಯಾ ಅರಸರು ಸಾಹಿತ್ಯ ಮತ್ತು ಕವಿಗಳಿಗೆ ಗೌರವ ಮತ್ತು ಆಶ್ರಯವನ್ನು ನೀಡಿದರು. ಹೀಗೆ ಆಳರಸರಿಂದ ಗೌರವ

ಮತ್ತು ಆಶ್ರಯವನ್ನು ಪಡೆದುಕೊಂಡು ಕವಿಗಳಿಂದಾದ ಸಮಾಜ ಸುಧಾರಣೆಯ ಕಾರ್ಯವನ್ನು ತಮ್ಮ ಸಾಹಿತ್ಯದ ಮುಖಾಂತರ ಪ್ರಚುರ ಪಡಿಸಿದ್ದರು.

ಪ್ರಪಂಚದಲ್ಲಿ ಧರ್ಮಕ್ಕೆ ಪ್ರಾಮುಖ್ಯತೆ ಕೊಟ್ಟಷ್ಟು ಇನ್ನಾವುದಕ್ಕೂ ಕೊಟ್ಟಿಲ್ಲ. ಪ್ರಾಚೀನ ಕಾಲದಿಂದಲೂ ಧರ್ಮಗಳು ಎಲ್ಲ ರಂಗಗಳಲ್ಲಿ ಭಾಗವಹಿಸಿವೆ. ಇದುವರೆಗೂ ನಮ್ಮನ್ನು ಆಳಿದ ಅರಸು ಮನೆತನಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದ ಧರ್ಮಗಳು ನೇರವಾಗಿ ಅಲ್ಲದಿದ್ದರೂ ಆಡಳಿತದಲ್ಲಿ ಭಾಗವಹಿಸಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಒಂದು ರಾಜ್ಯದ ಅಳಿವು-ಉಳಿವನ್ನು ಧರ್ಮಗಳು ಹತೋಟಿಯಲ್ಲಿಟ್ಟುಕೊಂಡಿದ್ದವೆಂದರೆ ಧರ್ಮಗಳ ಸಾರ್ವಭೌಮತ್ವ ಅರಿವಿಗೆ ಬರುತ್ತದೆ. ಅನೇಕ ಧರ್ಮಗಳು ತಮ್ಮ ಉಳಿವಿಗಾಗಿ, ಬೆಳವಣಿಗೆಗಾಗಿ ತಮ್ಮದೇ ಆದಂತಹ ನೀತಿ ನಿಯಮ, ಸಿದ್ಧಾಂತ ಪ್ರಣಾಳಿಕೆಗಳೊಂದಿಗೆ ಬದುಕಿದ್ದವು. ಆದರೆ ಸದ್ಯದ ಪರಿಸ್ಥಿತಿ ಬದಲಾಗುತ್ತಿವೆ. ಬದಲಾಗಿದೆ. ಕೇವಲ ಒಂದೊಂದು ಗುಂಪುಗಳಿಗೆ ಮೀಸಲಾಗಿದ್ದ ಧರ್ಮಗಳು ತಮ್ಮ ಮೂಲ ಕಟ್ಟಳೆಯನ್ನು ಸಡಿಲಗೊಳಿಸುವಲ್ಲಿ ಸಾಹಿತ್ಯ ಕೂಡಾ ತನ್ನ ಪಾತ್ರವನ್ನು ನಿರ್ವಹಿಸಿದೆ. ಇಲ್ಲಿ ಧರ್ಮವೆಂದರೆ ಅದು ಕೇವಲ ಒಂದೇ ಧರ್ಮವಲ್ಲ, ಹಾಗೆಯೇ ಸಾಹಿತ್ಯ ಎಂದರೇ ಅದು ಒಂದು ರಾಷ್ಟ್ರದ ಇಲ್ಲವೆ ಒಂದು ಭಾಷೆಯ ಸಾಹಿತ್ಯವಲ್ಲ ಅದು ಎಲ್ಲಾ ಧರ್ಮಗಳ, ಎಲ್ಲಾ ಭಾಷೆಗಳ ಸಾಹಿತ್ಯವೂ ಹೌದಾಗುತ್ತದೆ.

ಕೋಮು-ಸೌಹಾರ್ದತೆಯನ್ನು ಗಟ್ಟಿಗೊಳಿಸುವಲ್ಲಿ ಸಾಹಿತ್ಯದ ಎರಡು ಮಗ್ಗುಲುಗಳಾದ ಶಿಷ್ಟ ಮತ್ತು ಜನಪದ ಸಾಹಿತ್ಯಗಳೆರಡು ತಮ್ಮ ಕೊಡುಗೆಗಳನ್ನು ಕೊಟ್ಟಿವೆ. ಕೋಮು-ಸೌಹಾರ್ದತೆಯಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಜನಪದ ಸಾಹಿತ್ಯ ತನ್ನ ಮಹತ್ವವನ್ನು ಉಳಿಸಿಕೊಂಡುಬಂದಿದೆ. ಜಾನಪದ ಸಾಹಿತ್ಯ ಬಹುದೀರ್ಘ ಹಳೆದು, ತರತರಹದ ರೂಪ, ಹಲವಾರು ಬಗೆಯ ರೀತಿಗಳನ್ನು ಇಡಿಯಾಗಿ ಅಧ್ಯಯನಕ್ಕೊಳಪಡಿಸುವಾಗ ಯಾವುದೇ ಫಲ ಅಪೇಕ್ಷೆಯಿಲ್ಲದೆ ತನ್ನ ಹರವನ್ನು ಅದು ಬೆಳೆಸಿಕೊಂಡಿದೆ. ಜನಪದ ಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಪ್ರಾದೇಶಿಕತೆಯ ನೆಲೆಯಲ್ಲಿ ವಿಭಾಗಿಸುವುದು ಇಲ್ಲಿ ಮುಖ್ಯವಾಗುತ್ತದೆ.

ಜಾನಪದ ಸಾಹಿತ್ಯದ ಸ್ವರೂಪ, ಕಾಲ ಮತ್ತು ಅದರ ವೈಶಿಷ್ಟಗಳ ಬಗ್ಗೆ ಇರುವ ಮೂಲಭೂತ ಆಕರಗಳನ್ನು ಕೆದುಕುವುದು ಇಲ್ಲಿ ಅನಿವಾರ್ಯವಾಗುತ್ತದೆ. ಪ್ರಾದೇಶಿಕವಾಗಿ ವಿಭಾಗಿಸುವುದು ಎಂದರೇ ಒಂದು ನಿರ್ಧಿಷ್ಠ ಭೌಗೋಳಿಕ ಪ್ರದೇಶವನ್ನು ವ್ಯಾಪ್ತಿಯಾಗಿರಿಸಿಕೊಂಡು, ಆ ಪರಿಸರದಲ್ಲಿನ ಮೌಖಿಕ ಆಕರಗಳನ್ನೆಲ್ಲ ಒಗ್ಗೂಡಿಸಿ ಅವುಗಳನ್ನು ವಿಭಾಗಿಸಿ ವಿಶ್ಲೇಷಿಸುವುದರಿಂದಲೇ ಜನಪದ ಸಾಹಿತ್ಯ ಕೋಮು-ಸೌಹಾರ್ದತೆಗೆ ಕೊಟ್ಟ ಕೊಡುಗೆಯನ್ನು ಅರಿಯಬಹುದು. ಶಿಷ್ಟ ಸಾಹಿತ್ಯ ಇದ್ದು, ಜನರ ಮನಸದಂಗಳದಲ್ಲಿ ನೆಲೆಗೊಳ್ಳುವಲ್ಲಿ ವಿಫಲವಾಯಿತು. ವಿಫಲವಾಗುವಲ್ಲಿ ಅದರ ಮಡಿವಂತಿಕೆಯೇ ಕಾರಣವಾಗಿತ್ತು. ಆದರೆ ಜನಪದ ಸಾಹಿತ್ಯ ಈ ಮಡಿವಂತಿಕೆಯ ಒಡನಾಟದಿಂದ ದೂರವಿದ್ದುದರಿಂದಲೇ ಜನರ ಮನಸ್ಸಿನಲ್ಲಿ, ಅದೂ ಗ್ರಾಮೀಣ ಪ್ರದೇಶದಲ್ಲಿ ಉಳಿಯಿತು. ಇಡಿಯಾಗಿ ಸೂಫಿ ಸಾಹಿತ್ಯ,

ಅನುಭವ ಸಾಹಿತ್ಯ ಭಜನೆಯ ಹಾಡುಗಳಂತಹಗಳನ್ನು ಇಲ್ಲಿ ಜನಪದ ಸಾಹಿತ್ಯದ ಪರದಿಯೊಳಗೆ ದಾಖಲಿಸಿಕೊಂಡು, ಇವುಗಳ ಆಧಾರಗಳಿಂದ ಜನಪದ ಸಾಹಿತ್ಯ ಕೋಮು-ಸೌಹಾರ್ದತೆಗೆ ಕೊಟ್ಟ ಕೊಡುಗೆಯನ್ನು ಅರಿಯಬಹುದು.

"ಬಳ್ಳಾರಿಯಲ್ಲಿ ಸೈಯದ್ ಷಾಹ ಕಾದಿರ್ ನಿಜಾಮಿಯವರು ಪ್ರಸಿದ್ದ ಸಂತರು. ಅಬ್ದುಲ್ ಖಾದಿರ್‌ಲಿಂಗರು ಇವರ ವಂಶಜರು. ರಾಯಚೂರಿನಲ್ಲಿ. ಹಜರತ್ ಷಮ್ ಆಲಮ್‌ರ ದರ್ಗಾ ಇದ್ದು, ಉರುಸಿನಲ್ಲಿ ಎಲ್ಲರೂ ಭಾಗವಹಿಸಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಸಿರಗುಪ್ಪಾದಲ್ಲಿ ಹಜರತ್ ಷಾಹ ಆಲಮ್‌ರ ದರ್ಗಾ ಇದೆ ಮತ್ತು ಗಂಗಾವತಿಯಲ್ಲಿ ಹಜರತ್ ಖಲೀಲುಲ್ಲಾ ಹುಸೇನಿಯವರ ದರ್ಗಾ ಇದೆ. ಇತಿಹಾಸ ಪ್ರಸಿದ್ದ ಕೊಪ್ಪಳದಲ್ಲಿಯೂ ಅನೇಕ ಸೂಫಿ ಸಂತರು ಭಾವೈಕ್ಯದ ಮಾರ್ಗದರ್ಶನ ಮಾಡಿ ಚಿರನಿದ್ರಾವಸ್ಥೆಯಲ್ಲಿದ್ದಾರೆ."

ಅಂತವರಲ್ಲಿ ಮರ್ದಾನೆಗೈಬರ ದರಗಾ ಕೊಪ್ಪಳದ ಪಶ್ಚಿಮ ಬೆಟ್ಟದ ಮಧ್ಯಮ ಭಾಗದಲ್ಲಿದೆ. ಇದು ಪೂರ್ವ ಪಶ್ಚಿಮವಾಗಿ ಇವರ ಸಮಾಧಿಯು ಶೋಭಾಯಮಾನವಾಗಿದೆ. ಕೋಟೆಯ ಮಾರ್ಗದಲ್ಲಿ ಹಜರತ್ ಸೈ ಸೈಲಾನಿ ಷಾಷಾರ ದರ್ಗಾ ಇದೆ. ಇವರ ಅನೇಕ ಪವಾಡಗಳನ್ನು ಜನರು ಹೇಳುತ್ತಾರೆ. ಈ ದರ್ಗಾದಲ್ಲಿ ನಿತ್ಯ ಭಕ್ತಿ, ಶ್ರದ್ಧೆಗಳಿಂದ ದರ್ಶನ ಪಡೆಯುತ್ತಾರೆ. ಇಲ್ಲಿಯ ಬೆಟ್ಟದ ತುದಿಯಲ್ಲಿ ಸೈಯದ್ ಮುನೀರ ಷಾಹರ ಗೋರಿ ಇದೆ. ಪಲ್ಟನ್ ವಿಭಾಗದಲ್ಲಿ ಸೈಯದ್ ಪೀರ ಪಾಷಾರ ದರ್ಗಾ ಇದೆ. ಪ್ರತಿ ವರ್ಷ ಉರುಸು ನಡೆಯುತ್ತದೆ. ನಾಗರಿಕರೆಲ್ಲ ಜಾತಿ ಮತ ಭೇದಗಳನ್ನು ಬಿಟ್ಟು ಒಗ್ಗಟ್ಟಿನಿಂದ ಉರುಸುಗಳಲ್ಲಿ ಭಾಗವಹಿಸುತ್ತಾರೆ.

ಇಲಕಲ್‌ದ ಹಜರತ್ ಸೈಯದ್ ಮುರ್ತುಜಾ ಖಾದರಿಯವರ ಉಪದೇಶ ಮಾರ್ಗದರ್ಶನದಿಂದ ಅಲ್ಲಿಯ ಹಿಂದೂ ಮುಸ್ಲಿಂರ ಒಗ್ಗಟ್ಟು ಬೇರೆ ಪ್ರದೇಶದವರಿಗೆ ಆದರ್ಶಪ್ರಾಯವಾಗಿದೆ. ಅದರಂತೆ ತಾವರಗೇರಿಯ ಸೈಯದ್ ಹಮೀದಶಾಹ ವಲಿಯರೂ ಸಹ ಜನಜಾಗೃತಿ, ಭಾವೈಕ್ಯದ ಕಾರ್ಯವನ್ನು ಮಾಡಿ ಅಮರರಾಗಿದ್ದಾರೆ. ಇದರಂತೆ ಕೊಪ್ಪಳವು ಸೂಫಿ, ಸಂತರ, ಸ್ವಾಮಿಗಳ ಬೀಡಾಗಿದ್ದು ಇವರ ಮಾರ್ಗದರ್ಶನದಲ್ಲಿ ರಾಜರೂ, ನವಾಬರೂ, ಬಾದಶಹರೂ, ಅಹಂಕಾರಿಗಳೂ, ದುರಾಚಾರಿಗಳೂ ತಮ್ಮ ದುಷ್ಟತನವನ್ನು ಬಿಟ್ಟು ಸತ್ಪಥದಲ್ಲಿ ನಡೆದಿದ್ದಾರೆ. ಹೀಗೆ ಸತ್ಯ ಮಾರ್ಗದಲ್ಲಿ ನಡೆದದ್ದಾದರೆ ಅವರು ಸೈಯದರೆನಿಸಿಕೊಳ್ಳುತ್ತಾರೆ. ಐಕ್ಯತೆ ಸಭ್ಯತೆಯನ್ನು ಕಾಯ್ದು ಕೊಂಡಿದ್ದರಿಂದ ಉತ್ತಮ ನಾಗರಿಕರೆಂದು ಕರೆಯಲ್ಪಡುತ್ತಾರೆ. ಇದೇ ರೀತಿ ಸದಾ ತಮ್ಮ ನಾಡಿನ ಸಭ್ಯ ಪರಂಪರೆಯನ್ನು ಬೆಳೆಯಿಸುತ್ತಾರೆ,

ಕನ್ನಡ ನಾಡಿನ ಇತಿಹಾಸದ ಪುಟಗಳಲ್ಲಿ ಸಾಹಿತ್ಯದ ಆಕರ ತನ್ನದೇ ಆದ ಛಾಪು ಮೂಡಿಸಿದೆ. ಇತಿಹಾಸ, ಚರಿತ್ರೆಯನ್ನು ಕಟ್ಟುವಲ್ಲಿ ಮತ್ತು ಅರಿಯುವಲ್ಲಿ ಸಾಹಿತ್ಯದ ಅಂಶಗಳಿಗೆ ಮೊರೆ ಹೋಗಬೇಕಾಗುತ್ತದೆ. ಹಾಗಾಗಿಯೇ 'ಕೊಪ್ಪಳ ಜಿಲ್ಲೆಯ ಕೋಮು-ಸೌಹಾರ್ದತೆಯ'ನ್ನು

ಗಟ್ಟಿಗೊಳಿಸುವಲ್ಲಿ ಪಾತ್ರವಹಿಸಿದ ಸಾಹಿತ್ಯ ಮತ್ತು ಸಾಹಿತ್ಯಕಾರ (ಕವಿ)ರನ್ನು ಮತ್ತು ಅವರು ಹೇಳಹೊರಟಿರುವ ಅಂಶಗಳನ್ನು ಇಲ್ಲಿ ನೋಡಲಾಗುತ್ತದೆ. ಕೋಮು-ಸೌಹಾರ್ದತೆಯನ್ನು ಗಟ್ಟಿಗೊಳಿಸುವಲ್ಲಿ ಸಾಹಿತ್ಯಿಕ ಅಂಶಗಳು ಹೇಗೆ ಮುಖ್ಯವಾಗುತ್ತವೆ ಎಂಬುದು ಮುಖ್ಯವೆನಿಸುತ್ತದೆ.

ಕೋಮು-ಸೌಹಾರ್ದತೆಯನ್ನು ಗಟ್ಟಿಗೊಳಿಸುವಲ್ಲಿ ಜನಪದ ಸಾಹಿತ್ಯ ಹೇಗೆ ಸಹಕರಿಸಿದೆ ಎಂಬುದನ್ನು ನಾವು ಗಮನಿಸಬಹುದು. ಅದರ ತಿರುಳನ್ನು ಅನುಭಾವ ಸಾಹಿತ್ಯ, ತತ್ವಪದ, ಭಜನೆಯ ಹಾಡುಗಳಿಂದ ನೋಡಬಹುದು. ಕರ್ನಾಟಕದಲ್ಲಿ ತತ್ವಪದ ಸಾಹಿತ್ಯದ ಬೆಳವಣಿಗೆ ಸುಮಾರು ೧೧ನೇ ಶತಮಾನದ ಉತ್ತರದಿಂದ ನೋಡಬಹುದು ಇದಕ್ಕೆ ಮುಂಚೆ ೬೩ ಸಕಲ ಪುರಾತನರು ಎನಿಸಿಕೊಂಡ ತಮಿಳುನಾಡಿನ ಮತ್ತು ಕರ್ನಾಟಕದ ಶಿವಶರಣರು ಈ ಅನುಭವ ತತ್ವಪದಗಳ ಸಾಹಿತ್ಯದ ಹುಟ್ಟಿಗೆ ವೇದಿಕೆಯನ್ನು ನಿರ್ಮಿಸಿದರು. ಆದರೇ ಅಂದಿನ ಧರ್ಮ--ಧರ್ಮಗಳ ನಡುವಿನ ಗೊಂದಲದಲ್ಲಿ ಈ ಜನಪದ ಸಾಹಿತ್ಯ ತನ್ನ ಇರುವನ್ನು ಮರೆಯಿತು. ನಂತರ ಬಹುದೀರ್ಘ ಶತಮಾನಗಳ ನಂತರ ಅಂದರೇ ಅದು ೧೧-೧೨ನೇ ಶತಮಾನದಲ್ಲಿ ಮತ್ತೇ ಪುನಃ ಎದ್ದು ನಿಲ್ಲಲು ಹೆಣಗಾಡಿತು. ಆದರೂ ಹೇಳಿಕೊಳ್ಳುವಂತ ಯಶಸನ್ನು ಪಡೆದುಕೊಳ್ಳಲಿಲ್ಲ. ಏಕೆಂದರೆ ಆಗಲೇ ಕರ್ನಾಟಕದಲ್ಲಿ ಶರಣ ಸಾಹಿತ್ಯ ಹುಟ್ಟು ಪಡೆದುಕೊಂಡು ಅತೀ ವೇಗವಾಗಿ ಬೆಳವಣಿಗೆ ಹೊಂದತೊಡಗಿತ್ತು. ಈ ವಚನ ಸಾಹಿತ್ಯದ ಅರ್ಭಟದಲ್ಲಿ ಅನುಭಾವ ಸಾಹಿತ್ಯ ಮತ್ತೆ ತೆರೆಯ ಹಿಂದೆ ಸರಿಯ ತೊಡಗಿತು. ಆಗಲೇ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ರಾಮಾಪುರದ ಬಕ್ಕಪ್ಪ (ಕ್ರಿ.ಶ.೧೬೧೦ರಿಂದ ಕ್ರಿ.ಶ ೧೭೦೦) ತತ್ವಪದಗಳ ರಚನೆಯಲ್ಲಿ ತೊಡಗಿದ್ದ.

ರಾಮಾಪುರದ ಬಕ್ಕಪ್ಪನಿಂದ ಹೈದರಾಬಾದ್-ಕರ್ನಾಟಕದಲ್ಲಿ ತತ್ವಪದ ಸಾಹಿತ್ಯ ಚಿಗುರೊಡೆಯಲು ಪ್ರಾರಂಭವಾಯಿತು. ಇದಕ್ಕಾಗಿಯೇ ಈತನನ್ನು ವಚನ ಸಾಹಿತ್ಯದ ನಂತರ ಹೈದರಾಬಾದ್-ಕರ್ನಾಟಕದ ಮೊಟ್ಟ ಮೊದಲ ತತ್ವಪದಕಾರನೆಂದು ಗುರುತಿಸಲಾಗುತ್ತದೆ, ಹೀಗೆ ರಾಮಾಪುರದ ಬಕ್ಕಪ್ಪನಿಂದ ಆರಂಭವಾದ ತತ್ವಪದಸಾಹಿತ್ಯ ದಾಸಸಾಹಿತ್ಯದ ಪ್ರಖರತೆಯ ಹೊರತಾಗಿಯೂ ಇನ್ನು ನಮ್ಮ ಹಳ್ಳಿಗಳಲ್ಲಿ ಭಜನೆಯ ಹಾಡುಗಳಾಗಿ ಜನಪದರ ನಾಲಿಗೆಯ ಮೇಲೆ ಹೊಯ್ದಾಡುತ್ತಿವೆ. ತತ್ವಪದ ಸಾಹಿತ್ಯ ರಾಮಾಪುರದ ಬುಕ್ಕಪ್ಪನಿಂದ ಆರಂಭವಾದರೂ ಈತನ ತತ್ವಪದಗಳಲ್ಲಿ ಹಿಂದೂ-ಮುಸ್ಲಿಂ ಸೌಹಾರ್ದತೆಯನ್ನು ಕಾಣುವುದಿಲ್ಲ.

ವಚನ ಚಳುವಳಿಯ ನಂತರ ಈ ಭಾಗದಲ್ಲಿ ಕನ್ನಡ ತಲೆ ಎತ್ತಿದ್ದು ಪ್ರಮುಖವಾಗಿ ತತ್ವಪದಕಾರರ ಸಂದರ್ಭದಲ್ಲಿ ಮುಸ್ಲಿಂ ಆಳ್ವಿಕೆಯ ಕಾಲದಲ್ಲಿ ಹೈದರಾಬಾದ- ಕರ್ನಾಟಕದ ಅನೇಕ ಭಾಗಗಳಲ್ಲಿ ಕನ್ನಡ ಜನಸಾಮಾನ್ಯರ ಮನೆಯಲ್ಲಿ ಅಡಗಿ ಕುಳಿತಿತ್ತು. ಅದಕ್ಕೆ ಹೊರ ಬಂದು ಧೈರ್ಯವಾಗಿ ಮುನ್ನಡೆಯ ಬೇಕಾದರೆ ಉರ್ದುವಿನ ಅಬ್ಬರ, ಆರ್ಭಟ ಎದುರಾಗಿ, ಕನ್ನಡ ತನ್ನ ಸ್ವಂತಃ

ಶಕ್ತಿಯಿಂದ ನಿಲ್ಲುವ ಶಕ್ತಿ ಕಳೆದುಕೊಂಡಿತ್ತು. ರಾಜ್ಯ ಭಾಷೆಯ ಜೊತೆಗೆ ಕನ್ನಡದ ಉಳಿವು ತೀರ ಕಷ್ಟವಾಗಿತ್ತು. ಕೇವಲ ಪಟ್ಟಣ-ನಗರಗಳಲ್ಲಿ, ಅದು ಸಮಾಜದಲ್ಲಿ ಕೆಲವೇ ಜನರ ಮನೆಯಲ್ಲಿ ಕಂಡು ಬರುತ್ತಿತ್ತು. ಇಂತಹ ಸಂಕಷ್ಟದ ಸ್ಥಿತಿಯಲ್ಲಿ ತಮ್ಮ ಅನುಭಾವ ಸಾಹಿತ್ಯದ ಮೂಲಕ ತತ್ವಪದಕಾರರು ಕನ್ನಡಕ್ಕೆ ಆಸರೆಯಾದರು.

ತತ್ವಪದಕಾರರು ಮಾಡಿದ ಮೊದಲ ಕೆಲಸವೆಂದರೆ ಸಮಾಜದ ಜನರಲ್ಲಿನ ಮೌಢ್ಯತೆಯನ್ನು ಹೋಗುವಂತೆ ಮಾಡಿದ್ದು. ವರ್ಗ-ಸಂಘರ್ಷ, ವರ್ಣ-ಭೇದ, ತೊಡಕು-ಆತಂಕ, ಮೇಲು-ಕೀಳು, ಇಂತಹವುಗಳನ್ನು ಖಂಡ.ತುಂಡವಾಗಿ ಕತ್ತರಿಸಿದ್ದು. ತಾವು ಜೀವನದಲ್ಲಿ ಕಂಡುಂಡು ಅನುಭವಗಳನ್ನು ಹಾಡಿನ ರೂಪದಲ್ಲಿ ಹಾಡುತ್ತ ಜನರನ್ನು ಎಚ್ಚರಿಸಿದರು. ಹೀಗೆ ಆರಂಭವಾದ ತಿದ್ದುವ-ತೀಡುವ ಕೆಲಸ ಕೇವಲ ಕನ್ನಡಿಗರಿಗೆ ಮೀಸಲಿರದೆ ಎಲ್ಲ ಮಾತೃ ಭಾಷಿಕರಿಗೆ ಅನ್ವಯವಾಗುವಂತೆ ಮಾಡಿದ್ದು ತತ್ವಪದಕಾರರ ವಿಶೇಷ ಇವರು ಸೀಮಿತವಾಗಿರದೆ ಹಿಂದೂ-ಮುಸ್ಲಿಂ, ಹೀಗೆ ಎಲ್ಲರಿಗೂ ಬೇಕಾಗಿ ತಮಗರಿವಿಲ್ಲದಂತೆ ಜೀವಿಸಿದ್ದರು. ಇವರನ್ನು ಹುಡುಕಿಕೊಂಡು ಬಂದವರಿಗೆ ಒಬ್ಬರ ಹಿತ ಅವರಿಗೆ ಬೇಕಾಗಿರಲಿಲ್ಲ, ಬದಲಾಗಿ ಇವರಿಂದ ರಚನೆಗೊಂಡ ತತ್ವಪದ ಸಾಹಿತ್ಯ ಮುಖ್ಯವಾದವು, ಆದರಿಂದಲೇ ಈ ಭಾಗದಲ್ಲಿನ ತತ್ವಪದಕಾರರೆಲ್ಲ ತಮ್ಮ ಎಲ್ಲ ಅನುಯಾಯಿಗಳಿಗಾಗಿ ಅನೇಕ ಭಾಷೆಗಳಲ್ಲಿ ಭಜನೆಯ ಹಾಡುಗಳನ್ನು ರಚಿಸಿದರು.

**ಚೆನ್ನೂರ ಜಲಾಲ ಸಾಹೇಬ :**

ಹಿಂದೂ - ಮುಸ್ಲಿಂರ ಕೋಮು-ಸೌಹಾರ್ದತೆಯ ತತ್ವಪದಗಳು ಕಂಡು ಬರುವುದು ಚೆನ್ನೂರು ಜಲಾಲಸಾಹೇಬನ (ಕಿ.ಶ,೧೭೭೦-ಕ್ರಿ.ಶ.೧೮೫೦) ತತ್ವಪದಗಳಲ್ಲಿ, ಅಂತೆಯೇ ಹೈದರಾಬಾದ-ಕರ್ನಾಟಕದ ಕೋಮು-ಸೌಹಾರ್ದತೆಯ ತತ್ವಪದಕಾರನಾಗಿ ಚೆನ್ನೂರಿನ ಜಲಾಲಸಾಹೇಬನನ್ನು ಗುರುತಿಸುತ್ತೇವೆ. ಇವನಂತೆಯೇ ಅನೇಕ ಹಿಂದೂ-ಮುಸ್ಲಿಂ ತತ್ವಪದಕಾರರು ಕೊಪ್ಪಳ ಜಿಲ್ಲೆಯ ಕೋಮು-ಸೌಹಾರ್ದತೆ ಗಟ್ಟಿಗೊಳ್ಳುವಲ್ಲಿ ತಮ್ಮದೇ ಆದ ಕೊಡುಗೆಯನ್ನು ತತ್ವಪದಗಳ ಮೂಲಕ ಕೊಟ್ಟಿದ್ದಾರೆ ಅವರಲ್ಲಿ ಹೇರೂರ ವಿರುಪಣ್ಣನ, ವಡಕಿ ತಾತಪ್ಪಯ್ಯ, ತಾಳಕೇರಿ ಬಸವರಾಜ ಇನ್ನೂ ಮುಂತಾದ ತತ್ವಪದಕಾರರೆಲ್ಲರೂ ಕೋಮು ಸೌಹಾರ್ದಕ್ಕೆ ಸಾಹಿತ್ಯಿಕವಾಗಿ ಕೊಡುಗೆಗಳನ್ನು ಕೊಟ್ಟಿದ್ದಾರೆ. ಚೆನ್ನೂರು ಜಲಾಲಸಾಹೇಬ ಇಸ್ಲಾಂ ಧರ್ಮದಲ್ಲಿ ಹುಟ್ಟಿದ್ದರೂ ಇವರ ಮೇಲೆ ವೀರಶೈವ ಧರ್ಮದ ದಟ್ಟ ಪ್ರಭಾವಾಗಿರುವುದಂತೂ ನಿಜ. ಅಂತಲೇ ಇವರ ಗುರುಗಳು ಹಿಂದೂಗಳಾಗಿದ್ದು ಅಂಕಿತದಲ್ಲಿ ಹಿಂದೂ ಗುರುವಿನ ಅಥವಾ ಹಿಂದೂ ದೇವರ ಅಂಕಿತ ಕಂಡು ಬರುತ್ತದೆ. ಚೆನ್ನೂರು ಜಲಾಲ ಸಾಹೇಬ ತನ್ನ ಗುರುವಾದ ಕಡುಕೋಳ ಮಾಡಿವಾಳೇಶ್ವರನ ಅಂಕಿತವನ್ನು ತನ್ನ ಪದಗಳಲ್ಲಿ ಇಟ್ಟುಕೊಂಡಿದ್ದಾನೆ.

"ಸಬ್ ಕಹತೇ ಈಶ್ವರ ಅಲ್ಲಾ

ಇದರ ಭೇದ ಯಾರಿಗೆ ತಿಳಿಯಲಿಲ್ಲ
ನಿರಂಕಾರಸೇ ಆಕಾರ ಹುವೇ
ವೇದಶಾಸ್ತ್ರಕ್ಕೆ ನಿಲುಕಿಲ್ಲ
ಹಿಂದೂ ಮುಸ್ಲಿಂ ಶಾಸ್ತ್ರಪಡತೇ ಹೈ
ಗುರುಮನಿ ಕೀಲಿ ಸಿಗಲಿಲ್ಲ

ಅಜ್ಞಾನವೆಂಬುದು ಅಮವಾಸಿ
ಸುಜ್ಞಾನ ಚಂದ್ರನು ಉದಸಿ
ರಾಮರಹೀಮರು ಒಂದೇಯೆನಿಸಿ
ಪರಬ್ರಹ್ಮ ದೋಸ್ತರು ಹೌದೆನಿಸಿ

ಅವಗುಣ ಅಳಿವುದು ಬಲು ಲೇಸು
ಶಿವಗುಣ ತಿಳಿವುದು ಬಲು ಸೊಗಸು
ಮೊಹರಮ್‌ದಲಿ ಭಕ್ತಿಯನಿರಿಸು
ಕಷ್ಟದ ದಿನದಲಿ ಶಿವನನು ನೆನಿಸು."೧೫

ದೇವರು ಒಬ್ಬನೇ ಅವನೇ ಈಶ್ವರ-ಅಲ್ಲಾ. ಆದರೆ ಮೌಢ್ಯ ಜನರು ಇವರಲ್ಲಿ ಭೇಧ ಮಾಡುವುದರ ಮೂಲಕ ತಮ್ಮ ತಮ್ಮಲ್ಲಿ ದ್ವೇಷ, ಅಸೂಯೇಗಳನ್ನು ಹುಟ್ಟುಹಾಕಿಕೊಂಡು ಸೌಹಾರ್ದ ಭಾವನೆಗಳನ್ನು ದೂರು ತಳ್ಳುತ್ತಿರುವುದನ್ನು ಜಲಲಾಸಾಹೇಬರು ವಿರೋಧಿಸುತ್ತಾರೆ.

**ಹೇರೂರ ವಿರುಪಣ್ಣ :**

ಗಂಗಾವತಿ ತಾಲೂಕಿನ ಹೇರೂರು ಗ್ರಾಮದಲ್ಲಿ ಕ್ರಿ. ಶ. ೧೮೫೫ರಲ್ಲಿ ಗೌಡರ ಮನೆತನದಲ್ಲಿ ವಿರುಪಣ್ಣ ಜನಿಸಿದ, ಈತನನ್ನು ವಿರುಪನಗೌಡನೆಂತಲೂ ಕರೆಯುತ್ತಾರೆ. ಬಸವನಗೌಡ ಮತ್ತು ಮುದ್ದಮ್ಮ ಇವರ ಮಗನಾಗಿ ಹುಟ್ಟಿದ ವಿರುಪಣ್ಣನಿಗೆ ಪಗಡದಿನ್ನಿ ಹಿರೇಮಠದ ಪಟದಪ್ಪನವರು ಶಾಲಾ ಗುರುಗಳಾಗಿದ್ದರು.

ವಿದ್ಯಾಭ್ಯಾಸ ಮುಗಿಸಿ ಯೌವನಕ್ಕೆ ಬರುತ್ತಲೇ ವಿರುಪಣ್ಣನಿಗೆ ಮದುವೆ ಮಾಡಲಾಯಿತು. ಮಡದಿ ಸಿದ್ದಮ್ಮ ಮನೆ ತುಂಬಿದಳು. ಕೆಲ ವರ್ಷ ಸಂಸಾರ ಮಾಡಿದ ನಂತರ ವಿರುಪಣ್ಣನಿಗೆ ಸಂಸಾರದಲ್ಲಿ ಆಸಕ್ತಿ ಕಡಿಮೆಯಾಯಿತು. ರುದ್ರಸ್ವಾಮಿಯೆಂಬ ಗುರುವಿನ ಪ್ರಭಾವಕ್ಕೊಳಗಾದ ಈತ ಸಂಸಾರ ತೊರೆದು ಆಧ್ಯಾತ್ಮದ ಮಾರ್ಗ ಹಿಡಿದ.

ಎಲ್ಲವನ್ನೂ ತೊರೆದ ವಿರುಪಣ್ಣ ಜನರ ಕಣ್ಣಿಗೆ ಹುಚ್ಚನಾಗಿ ಕಂಡ. ಜನ ಈತನಿಗೆ ಅನೇಕ ಬಗೆಯ ಕಷ್ಟ ಕೊಟ್ಟರು. ಹೆಂಡ ಕುಡಿಯುತ್ತಾನೆಂದು ಊರಿನಿಂದ ಬಹಿಷ್ಕಾರ ಹಾಕಿದರು. ವ್ಯಭಿಚಾರದ

ಆರೋಪ ಹೂರಿಸಿದರು. ಕಳ್ಳತನದ ಆಪಾದನೆ ಮಾಡಿದರು. ಎಲ್ಲವನ್ನೂ ಎದುರಿಸುತ್ತ ವಿರುಪಣ್ಣ ಮುಂದೆ ಸಾಗಿದ. ಇಂಪಾಗಿ ಹಾಡುತಿದ್ದ ಈತ ತತ್ವಪದ ರಚನೆಗೆ ತೊಡಗಿದ, ಈತನ ನಲವತ್ತೆಂಟು ತತ್ವಪದಗಳನ್ನು ಸಂಗ್ರಹಿಸಿ "ಕೈವಲ್ಯ ತತ್ವಪದಗಳು" ಎಂಬ ಹೆಸರಿನಲ್ಲಿ ಗದುಗದ ಪಿ.ಶಿ. ಶಾಬಾದಿಮಠ ಅವರು ಪ್ರಕಟಿಸಿದ್ದಾರೆ.

'ಸಿದ್ಧ' 'ಸಿದ್ಧೇಶ' ಎಂಬ ಅಂಕಿತದಲ್ಲಿ ಈತ ತತ್ವಪದ ರಚಿಸಿದ್ದಾನೆ. "ವಿರುಪಣ್ಣ ತನ್ನ ಜೀವಿತದ ಕೊನೆಯ ದಿನಗಳಲ್ಲಿ ಹುಲಿಹೈದರದಲ್ಲಿದ್ದನೆಂದು ತಿಳಿದು ಬರುತ್ತದೆ. ನಂತರ ಕಂಪ್ಲಿಗೆ ಹೋದನೆಂದು ಹೇಳುತ್ತಾರೆ. ಕಂಪ್ಲಿಯ ಜೋಗಿ ಕಾಲುವೆಯ ಹತ್ತಿರ ಕೊಪ್ಪರಿಗೆ ಕೆಳಗೆ ಈತ ಲಿಂಗೈಕ್ಯನಾದನೆಂದು ತಿಳಿದು ಬರುತ್ತದೆ. ಅಲ್ಲಿಯೇ ಈತನ ಸಮಾಧಿಯಿದೆ.

ನಿರ್ಗುಣ ಪೂಜೆಯ ಮಾಡಪ್ಪ।
ಸ್ವರ್ಗದ ಹಾದಿಯ ಬೇಡಪ್ಪ ।
ನರ್ಗವಸ್ತುವಿನ ನೀ ಕೂಡಪ್ಪ ।
– ಸನ್ಮಾರ್ಗ ಹೇಳೂವೆ ಕೇಳಪ್ಪ

ತನುಮನಧನವನು ಕೊಡಬೇಕು । ಒಳ್ಳೆ
ಘನ ಗುರು ಸೇವೆಯಲಿರುಬೇಕು ।
ಬಿನಗು ಸಂಶಯಗಳನಳಿಬೇಕು ।
ಜನನ ಮರಣವನ್ನು ನೀ ಕಳಿಬೇಕು

ಜಂಗಮನಿಲ್ಲ ಜಗಬೂಳಗವ್ವ ।
ಜಂಗಮನೊಳು ಜಗವೆಲ್ಲವ್ವ ।
ತಂಗಿ ಕೇಳೆ ಶಿವಗಂಗವ್ವ ।
ಮಂಗಳ ಮೂರುತಿ ಲಿಂಗವ್ವ."[೧೬]

ವಿರುಪಣ್ಣ ತಾತನವರು ತಮ್ಮ ಅನುಭಾವದ ಅಡಿಯಲ್ಲಿ ಜನತೆಗೆ ಪೂಜಾ ವಿಧಾನಗಳನ್ನು ಹೇಳುವಲ್ಲಿ ಒಂದು ಆಧ್ಯಾತ್ಮಿಕ ಚಿಂತನೆ ಕಂಡುಬರುತ್ತದೆ. ಸ್ವರ್ಗ ಮತ್ತು ನರಕದ ಪರಿಕಲ್ಪನೆಯ ಹಿನ್ನೆಲೆಯನ್ನು ಹೇಳುವ ತಾತನವರು ತನು–ಮನ–ಧನ ಹಾಗೂ ಘನ ವ್ಯಕ್ತಿಗಳ ಅಂದರೆ ಗುರುಗಳ ಸೇವೆಯನ್ನು ನಿರಂತರವಾಗಿ ಮಾಡುತ್ತಿರಬೇಕು. ಹಾಗೂ ಅಹಂಕಾರ, ಸಂಶಯಗಳನ್ನು ಅಳಿದು ಹಾಕಬೇಕು ಎಂದಿದ್ದಾರೆ. ಜಂಗಮ್ಮನಿಲ್ಲ ಜಗದೊಳಗವ್ವ ಎಂದು ಪ್ರಾರಂಭಮಾಡುವ ತಾತನವರು ಜಂಗಮದೊಳಗೆ ಜಗವೆಲ್ಲ ಅಡಗಿದೆ ಎನ್ನುತ್ತಾರೆ. ಜಂಗಮ ಎಂದರೆ ಸ್ವಚ್ಛವಾದ ಹೃದಯವನ್ನು ಹೊಂದಿರುವಂತದ್ದು. ಹೀಗಾಗಿ ಪ್ರತಿಯೊಬ್ಬ ಮನುಷ್ಯ ತನ್ನ ಅಹಂಕಾರವನ್ನು ಬಿಟ್ಟು ಜಂಗಮರ ಸಹವಾಸ ಮಾಡಬೇಕೆನ್ನುತ್ತಾರೆ.

**ವಡಕಿ ತಾತಪ್ಪಯ್ಯ :**

ಗಂಗಾವತಿ ತಾಲೂಕಿನ ಕನಕಗಿರಿ ಸಮೀಪವಿರುವ ವಡಕಿ ಗ್ರಾಮದಲ್ಲಿ ಕ್ರಿ.ಶ. ೧೮೯೦ ರ ಸುಮಾರಿಗೆ ತಾತಪ್ಪಯ್ಯನ ಜನನವಾಯಿತು. ಈತನ ಪೂರ್ವದ ಹೆಸರು ಲಕ್ಷ್ಮಪ್ಪಯ್ಯ, ಬುಡ್ಡಪ್ಪಯ್ಯ ಮತ್ತು ಗಂಗಮ್ಮ ಈತನ ತಂದೆ ತಾಯಿಗಳು. ಈತನಿಗೆ ಇಬ್ಬರು ಸೋದರಿಯರು, ಆರು ಜನ ಸಹೋದರರು. ನಾಲ್ಕನೇ ಮಗನಾಗಿ ಹುಟ್ಟಿದ ತಾತಪ್ಪಯ್ಯನನ್ನು ಶಖಪುರುಷನೆಂದು ಕರೆಯಲಾಗುತ್ತಿತ್ತು. ಈತನಿಗೆ ಗುಂಡೂರು ಭೀಮೇಶ ಗುರುವಾಗಿದ್ದ. ಅಂಬಮ್ಮ ಮತ್ತು ರುದ್ರಮ್ಮ ಎಂಬ ಇಬ್ಬರು ಪತ್ನಿಯರನ್ನು ಹೊಂದಿದ್ದ ತಾತಪ್ಪಯ್ಯನಿಗೆ ಮೂವರು ಹೆಣ್ಣು ಮಕ್ಕಳು.

ಲಕ್ಷ್ಮಪ್ಪಯ್ಯ ಸಂಸಾರದಲ್ಲಿ ಮುಳುಗಿ ಹೋಗದೆ, ಆಧ್ಯಾತ್ಮದ ಹಾದಿ ಹಿಡಿದ. ಸಾಧನೆ ಮಾಡಿ ಸತ್ಯವನರಿತ, ಆಗ ತಾತಪ್ಪಯ್ಯನಾಗಿ ಬೆಳೆದು ನಿಂತ." ವಡಕಿಯ ಭೀಮೇಶ" ಎಂಬ ಅಂಕಿತದಲ್ಲಿ ಅನೇಕ ತತ್ವಪದ ರಚಿಸಿದ. ಈತ ರಚಿಸಿರುವ ೧೩೯ ತತ್ವಪದಗಳು "ಅಮೃತ ಶಿಖಾವಣಿ" ಎಂಬ ಪುಸ್ತಕದ ಮೂಲಕ ಪ್ರಕಟವಾಗಿವೆ.

"ಪಾಂಚಾಳ ಮನೆತನಕ್ಕೆ ಸೇರಿರಬಹುದಾದ ತಾತಪ್ಪಯ್ಯನ ಮೇಲೆ ವೀರಶೈವ ಸಾಹಿತ್ಯದ ಪ್ರಭಾವ, ಶಿವಶರಣರ ಪ್ರಭಾವ ಆಗಿದೆ. ಮನಸ್ಸಿನ ಚಂಚಲತೆಯನ್ನು ತಾತಪ್ಪಯ್ಯ ತೀವ್ರವಾಗಿ ವಿಡಂಬಿಸಿದ್ದಾನೆ. ಈತನ ತತ್ವಪದಗಳಲ್ಲಿ ಅನುಭಾವ, ಬೆಡಗು, ಆತ್ಮನಿವೇದನೆಯ ಅಂಶಗಳು ಎದ್ದು ಕಾಣುತ್ತವೆ. ಕಲ್ಯಾಣದ ಶರಣರನ್ನು ನೆನಪಿಸಿಕೊಂಡಿದ್ದಾನೆ. ತನ್ನ ಜೀವಿತದ ಕೊನೆಯ ಅವಧಿಯಲ್ಲಿ ಈತ ಲಿಂಗಸೂಗೂರು ತಾಲೂಕಿನ ಯಲಗಟ್ಟಿನಲ್ಲಿ ಬಂದು ನೆಲೆಸುತ್ತಾನೆ. ೧೫-೮-೧೯೫೯ ರಂದು ಯಲಗಟ್ಟಿಯಲ್ಲಿಯೇ ನಿಧನನಾದನೆಂದು ತಿಳಿದು ಬರುತ್ತದೆ. ಅಲ್ಲಿಯೇ ಈತನ ಸಮಾಧಿಯಿದೆ. ಪ್ರತಿವರ್ಷ ಶ್ರಾವಣ ಕಡೇ ಸೋಮವಾರ ಯಲಗಟ್ಟಿಯಲ್ಲಿ ತಾತಪ್ಪಯ್ಯನ ಜಾತ್ರೆಯಾಗುತ್ತದೆ. ಸಾವಿರಾರು ಭಕ್ತರು ಸೇರುತ್ತಾರೆ.

"ಊರಿಗೆ ಹೋಗೂನ ನಡಿರೇ ತಂಗಿ । ಕಲ್ಯಾಣಕ್ಕೆ ಹೋಗೂನ ನಡಿರೆ।
ಯಾರನಾರ ಕೇಳಿ ನೀವು ಬರತೀರೆ, ಈಗ ಬರತೀರೆ ॥ಪ॥

ಶರೀರಪುರ ಯೆಂಬುವದೇ ಊರವ್ವಾ ।
ಊರಿಗೆ ಒಂಬತ್ತು ದ್ವಾರವ್ವಾ । ಆ
ಊರಿಗೆ ನಾಲ್ಕು ಬಜಾರವ್ವಾ ।
ತಿಳಿದು ಸೋಸಿ ಮಾಡಿರೇ ವ್ಯಾಪರವ್ವಾ ॥

ಊರಿಗೆ ಐದು ಮಂದಿ ಪಂಚರವ್ವಾ ।
ಅದರಾಗ ಬುದ್ಧಿವಂತ ಗೌಡದಾನವ್ವಾ ।

ಭವ ತಿದ್ದಿ ಬರಿತಾನೇ ಕರಾರವ್ವಾ ।
ಮಿಕ್ಕಿದವರೆಲ್ಲರೂ ಲುಚ್ಚ್ಯಾರವ್ವಾ

ಯಾರ್‍ಯಾರಿಲ್ಲದೊಂದೇ ಊರವ್ವಾ ।
ಊರಾಗ ಸರದಾದ ನಿಂತಾನವ್ವಾ ।
ಹೋಗಿ ಒಡೆಯ ಭೀಮೇಶನ ಕೇಳವ್ವಾ ।
ವೋಡಿ ಹೋಗಿ ವಡಕಿ ತಾತನ ಕೂಡವ್ವಾ."೪೭

೧೨ನೇ ಶತಮಾನದ ಶಿವಶರಣರ ಪ್ರಭಾವ ತಾತಪ್ಪಯ್ಯನ ಮೇಲೆ ಆಗಿರುವುದರಿಂದ ಪ್ರಾರಂಭದಲ್ಲಿ ಶಿವಶರಣರ ಕೇಂದ್ರ ಸ್ಥಾನವಾಗಿರುವ ಕಲ್ಯಾಣವನ್ನು ನೆನಪಿಸುತ್ತಾ ಒಂದು ಶರೀರದ ಸಂಕೇತವಾಗಿ ಬಳಸಿದ್ದಾರೆ. ಶರೀರ ಎಂಬುದಕ್ಕೆ ಒಂಬತ್ತು ಬಾಗಿಲುಗಳಿದ್ದು, ನಾಲ್ಕು ಬಜಾರಗಳಿಂದ ಕೂಡಿದೆ. ಇಲ್ಲಿ ಮುಖ್ಯವಾಗಿ ಮನುಷ್ಯನ ಇಡೀ ದೇಹವನ್ನು, ಆ ದೇಹದೊಳಗೆ ಇರುವ ಇಂದ್ರಿಯಗಳನ್ನು ಹಾಗೂ ಬುದ್ಧಿ ಶಕ್ತಿಯನ್ನು ಕುರಿತು ಹೇಳುವ ತಾತಪ್ಪಯ್ಯ ಢಾಂಬಿಕ ಭಕ್ತಿಯನ್ನು ವಿರೋಧಿಸಿ ಅಂತರಂಗದ ನಿಜವಾದ ಭಕ್ತಿಗೆ ಪ್ರಾಧಾನ್ಯತೆಯನ್ನು ನೀಡಿರುವುದು ಕಾಣುತ್ತೇವೆ.

**ತಾಳಕೇರಿ ಬಸವರಾಜ :**

ಯಲಬುರ್ಗಾ ತಾಲೂಕಿನ ತಾಳಕೇರಿ ಗ್ರಾಮದಲ್ಲಿ ಕ್ರಿ. ಶ. ೧೯೩೦ ರಲ್ಲಿ ಬಸವರಾಜನ ಜನನವಾಯಿತು. ಹೂಗಾರ ಮನೆತನದಲ್ಲಿ ಜನಿಸಿದ ಬಸವರಾಜನ ತಂದೆಯ ಹೆಸರು ಹೂಗಾರ ಬಾಳಪ್ಪ. ಬಾಳಪ್ಪ ಜಾನಪದ ಕಲಾವಿದನಾಗಿದ್ದ. ತಬಲಾ ಬಾರಿಸುತ್ತಿದ್ದ, ಡಪ್ಪಿನಾಟಗಳಲ್ಲಿ ಪಾತ್ರ ವಹಿಸುತ್ತಿದ್ದ. ಮುಂದೆ ಮಗನಿಗೂ ಈ ಕಲೆ ಕರಗತವಾಯಿತು. ಗಿರಿಯಪ್ಪ ಮಾಸ್ತರರ ಆಶ್ರಯದಲ್ಲಿದ್ದುಕೊಂಡು ಸಂಗೀತ ಅಭ್ಯಾಸ ಪ್ರಾರಂಭಿಸಿದ ಬಸವರಾಜನು ಮುಂದೆ ಗದುಗಿನ ಪಂಚಾಕ್ಷರ ಗವಾಯಿಗಳ ನಾಟ್ಯ ಸಂಘವನ್ನ ಸೇರಿಕೊಂಡ. ನಾಟ್ಯಕಲೆ – ಸಂಗೀತಕಲೆಗಳನ್ನು ಬೆಳೆಸಿಕೊಂಡು ಬಸವರಾಜನಿಗೆ ಕ್ರಿ. ಶ. ೧೯೬೫ ರಲ್ಲಿ ಭಾರತ ಸರಕಾರವು ತನ್ನ ಪ್ರಚಾರ ಇಲಾಖೆಯಲ್ಲಿ ಹಾಡಲು ಅವಕಾಶ ನೀಡಿತು.

ತಾಳಕೇರಿ ಬಸವರಾಜ ಸಂಸಾರಿಯಾಗಿದ್ದು ಇಬ್ಬರು ಪತ್ನಿಯರನ್ನು ಹೊಂದಿ ಆರು ಜನ ಮಕ್ಕಳನ್ನು ಪಡೆದಿದ್ದಾನೆ. ಕ್ರಿ. ಶ. ೧೯೬೦ ರಲ್ಲಿ ವಿಜಯಕುಮಾರ ನಾಟ್ಯ ಸಂಘವನ್ನು ಕಟ್ಟಿ ರಂಗಭೂಮಿಯ ಸೇವೆಯನ್ನೂ ಮಾಡಿದ್ದಾನೆ. ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವ ಬಸವರಾಜನಿಗೆ ಕ್ರಿ. ಶ. ೧೯೮೩ರಲ್ಲಿ ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಅಕಾಡಮಿಯ ಪ್ರಶಸ್ತಿಯೂ ಲಭಿಸಿದೆ.

ಐದಾರು ಜನಪದ ಗೀತೆಗಳ ಸಂಕಲನಗಳನ್ನು, ಹನ್ನೆರಡು ಭಕ್ತಿಗೀತೆಗಳ ಸಂಕಲನಗಳನ್ನು ಹಾಗೂ ಇತರ ಜೀವನ ಚರಿತ್ರೆ, ನಾಟಕಗಳನ್ನು ರಚಿಸಿರುವ ಬಸವರಾಜನು ಅನೇಕ ತತ್ವಪದಗಳನ್ನೂ ರಚಿಸಿದ್ದಾನೆ. ಆಶು ಕವಿಯೂ ಆಗಿರುವ ಬಸವರಾಜನ ತತ್ವಪದಗಳು ಸರಳವಾಗಿದ್ದು, ಜನಪ್ರಿಯವಾಗಿವೆ. ಈತ ರಚಿಸಿರುವ ನೂರೊಂದು ಪದಗಳ ಸಂಕಲನ "ಕಲ್ಯಾಣ ಗೀತಾ" ಕ್ರಿ.ಶ. ೧೯೬೬ರಲ್ಲಿ ಪ್ರಕಟವಾಯಿತು.

"ಬಸವ"ಯೆಂಬುದು ಈ ಜನಪದ ಕವಿಯ ಅಂಕಿತವಾಗಿದೆ. ತನ್ನ ಪ್ರತಿಭೆ ಪ್ರಯತ್ನಗಳಿಂದಲೇ ಮುಂದೆ ಬಂದ ಬಸವರಾಜನು ಜಾನಪದ ಕ್ಷೇತ್ರಕ್ಕೆ ಹಾಗೂ ಆಧ್ಯಾತ್ಮ ಕ್ಷೇತ್ರಕ್ಕೆ ಮತ್ತು ಸಂಗೀತ ಕ್ಷೇತ್ರಕ್ಕೆ ಕೊಡುಗೆ ಕೊಟ್ಟಿದ್ದಾನೆ. ಸದ್ಯ ಈ ಜನಪದ ಕವಿ ತಾಳಕೇರಿಯಲ್ಲಿಯೇ ವಾಸಿಸುತ್ತಿದ್ದಾನೆ.

"ಅನ್ನವು ನಿನ್ನಲ್ಲಿ ಇರುತನಕೆಲ್ಲರು ।
ನನ್ನವರು ತನ್ನವರು ಎನ್ನುವರು ॥
ಅನ್ನವು ನಿನ್ನಲ್ಲಿ ತೀರಿದ ಮರುದಿನ
ನಿನ್ನವರೆನ್ನುವರು ಯಾರಿಹರು ?

ಮಡದಿ ಮಾಡುವಳು ಕಡು ಪ್ರೇಮವನ್ನು ।
ಉಡುವದುಣುವದನು ನೀ ಕೊಡುವ ತನಕ ॥
ಕಡಿಮೆಯಾಗಲು ಗಡ-ಬಡ-ಮಾಡುತ ।
ಬಡದಾಡಿ ಬರುವಳು ಬಾಗಿಲಕ

ಹೆತ್ತ ತಂದೆ ತಾಯಿ ಮೆತ್ತಂದು ಕೊಡುವಾಗ ।
ಮುತ್ತೊಂದು ಹಡೆದೆವು ಎನ್ನುವರು ॥
ಸೊತ್ತೆಲ್ಲ·ಕಳಕೊಂಡು ಹೊಟ್ಟಿಗಿಲ್ಲದಿರುವಾಗ।
ಕುತ್ತ್ಯಾ ಹುಟ್ಟಿತು ಎನ್ನುವರು

ಊರಿನ ಜನರೆಲ್ಲ ಕಾಂಚಾಣ ಇರೋ ತನಕ ।
ಇಂದ್ರ ಚಂದ್ರನೆಂದು ಕರೆಯುವರು ॥
ಕರದೊಳು ಕಾಂಚಾಣ ತೀರಿದ ಮರುದಿನ ।
ಹಿಂದಕ್ಕೆ ಬಹು ದೂರ ಸರಿಯುವರು

ಬಂಧು ಬಳಗವೆಂದು ತಿಂದು ತಿಂದು ಹೋಗುವರು ।
ಚಂದಾಗಿ ಮನೆಯಲ್ಲಿ ಇರುವ ತನಕ ।
ಬಂದಂಥ ಕಷ್ಟದಲಿ ಹೇಳಿ ಕೇಳುವರಾರು?
ತಿಂದುಣ್ಣುವ ತನಕ ನಿನ್ನವರು

ದುಡ್ಡು ಬಹಳಿರುವಾಗ ಹೆಂಡತಿ ಸತ್ತರೆ ।
ಅಡ್ಡಾಡಿ ಮಣ್ಣಿಗೆ ಕರೆಯುವರು ॥
ದುಡ್ಡೆಲ್ಲ ತೀರಿ ತಾನು ಸತ್ತಾಗ ಯಾರ‍್ಯಾರು ।
ಹಿಡಿ ಮಣ್ಣು ಹಾಕದೆ ಹೋಗುವರು.”[೧೮]

ಮನುಷ್ಯ ಸಮಾಜ ಜೀವಿ. ಅವನು ಮಡದಿ, ಮಕ್ಕಳು, ಬಂಧು – ಬಳಗ ಹಾಗೂ ಕೌಟುಂಬಿಕ ಜವಾಬ್ದಾರಿಗಳಿಂದ ಬದುಕುತ್ತಾನೆ. ಮನುಷ್ಯ ಬದುಕುವ ಸಂದರ್ಭದಲ್ಲಿ ಅವನು ತನ್ನಲ್ಲಿರುವ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕು. ಅನ್ನ ಮನುಷ್ಯನ ಜೀವದಾನ. ಅನ್ನ ಇರದೇ ಹೋದರೆ ಮನುಷ್ಯನ ದೇಹ ವಿಕಾರವಾಗಿ ಭೂಮಿಯನ್ನು ತ್ಯೇಜಿಸುತ್ತದೆ. ಹೀಗಾಗಿ ತಾನು ಬದುಕುವ ಸಂದರ್ಭದಲ್ಲಿ ಅನ್ನಕ್ಕೆ ಪ್ರಾಮುಖ್ಯತೆಯನ್ನು ಕೊಡಬೇಕಾಗುತ್ತದೆ. ಇಲ್ಲಿ ಬಸವರಾಜ ಅವರು ಜನತೆಗೆ ಹೀಗೆ ಎಚ್ಚರಿಸಿದ್ದಾರೆ. ಅನ್ನ ಮತ್ತು ಹಣ ನಮ್ಮಲ್ಲಿರುವ ತನಕ ಬಂಧು–ಬಳಗ, ಹೆಂಡರು, ಮಕ್ಕಳು ತಂದೆ ತಾಯಿ ಮುಂತಾದವರು ನಮ್ಮನ್ನು ಅಪ್ಪಿಕೊಳ್ಳುವರು ಎಂದು ಹೇಳಿದ್ದಾರೆ.

**ಮಾರೆಪ್ಪ ಚೆನ್ನದಾಸರು:**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನಲ್ಲಿ ವಾಸವಾಗಿರುವಂತಹ ಮಾರೆಪ್ಪ ಚೆನ್ನದಾಸರು ಕೊಪ್ಪಳ ಜಿಲ್ಲೆಯ ಪ್ರಮುಖ ತತ್ವಪದ ಗಾಯಕರಾಗಿದ್ದಾರೆ. ಉತ್ತರ ಕರ್ನಾಟಕದ ಸಾಂಸ್ಕೃತಿಕ ಪ್ರತಿನಿಧಿಯಾಗಿ ತತ್ವಪದಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬರುವಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಹಾಗೇನೆ ಇವರು ಕನ್ನಡ ಜಾನಪದ ಸಾಹಿತ್ಯಕ್ಕೆ ‘ಮರ್ಯಾದೆಯಿಂದ ಬಾಳಿರೋ’, ಹಾಗೂ ‘ನ್ಯಾಯಾಗಳಿಸಿರಯ್ಯಾ’ ಎಂಬಂತಹ ತತ್ವಪದಗಳನ್ನು ರಚಿಸಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಇವರ ತತ್ವಪದಗಳಲ್ಲಿ ‘ಭಕ್ತಿ, ವೈರಾಗ್ಯ, ಜ್ಞಾನ, ಮೋಕ್ಷ, ಪ್ರಾಮಾಣಿಕತೆ, ನ್ಯಾಯ, ನಿಷ್ಠುರತೆ, ಸಾಮಾಜಿಕ ವಿಡಂಬನೆ’ ಮುಂತಾದ ಅಂಶಗಳನ್ನು ಗುರುತಿಸಬಹುದು. ಅಷ್ಟೇ ಅಲ್ಲದೇ ಇವರು ತತ್ವಪದ ಗಾಯಕರಾಗಿ ನೂರಾರು ತತ್ವಪದಗಳನ್ನು ಹಾಡಿ ತತ್ವಪದ ಸಾಹಿತ್ಯವನ್ನು ಅದರ ಹಾಡುಗಳನ್ನು ಗಟ್ಟಿಗೊಳಿಸಿದ್ದಾರೆ.

ಮಾರೆಪ್ಪ ಚೆನ್ನದಾಸರು ಕಡುಬಡತನದಲ್ಲಿ ಜನಿಸಿದರು. ಅವರ ಜೀವನ ಜೋಪಡಿಯ ಮಧ್ಯ ಬುಡ್ಡಿಯ ಬೆಳಕಿನಲ್ಲಿ ಅರಳಿದೆ. ಇವರ ಪ್ರತಿಭೆ ಮುಂದೊಂದು ದಿನ ಇಡೀ ನಾಡು ಹೊಗಳುವಂತಹ ತತ್ವಪದ ಗಾಯಕರಾಗಿ ಬೆಳೆಯಲಿಕ್ಕೆ ಸಹಾಯಕವಾಗಿದೆ. ಮಾರೆಪ್ಪ ಚೆನ್ನದಾಸರು ತಮ್ಮ ಶಿಕ್ಷಣವನ್ನು ಕೇವಲ ನಾಲ್ಕನೇ ತರಗತಿಗೆ ಮೊಟಕುಗೊಳಿಸಿದ್ದರೂ, ಜನಪದ ಕಲೆಯಾದ ಹಾಡುಗಾರಿಕೆಯನ್ನು ಬಿಡದೆ ಬೆಳೆಸಿಕೊಂಡು ಬಂದು ತತ್ವಪದ ಪರಂಪರೆಯನ್ನು ಶ್ರೀಮಂತಗೊಳಿಸಿದ್ದಾರೆ.

ಮಾರೆಪ್ಪ ಚೆನ್ನದಾಸರು ಮಾರೆಪ್ಪ ಮತ್ತು ದುರುಗಮ್ಮ ಎಂಬ ದಂಪತಿಗಳ ಮಗನಾಗಿ ದಿನಾಂಕ : ೧೬-೦೧-೧೯೩೧ ರಂದು ಗದಗ ಜಿಲ್ಲೆಯ ಮುಳುಗುಂದಾ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಕೋಲೆ ಬಸವನನ್ನು ಹಿಡಿದುಕೊಂಡು ಮನೆ ಮನೆಗೆ ಹೋಗಿ ಭಿಕ್ಷೆಯನ್ನು ಬೇಡಿ ಉಪಜೀವನವನ್ನು ಸಾಗಿಸುತ್ತಿದ್ದರು. ಇವರಿಗೆ ಹೊಲ, ಮನೆ, ಏನೂ ಇರಲಿಲ್ಲ. ಅಲೆಮಾರಿ ಜೀವನವನ್ನು ನಡೆಸಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ದಿನದಿಂದ ದಿನಕ್ಕೆ ಕುಟುಂಬದ ಸಮಸ್ಯೆಗಳು ಹೆಚ್ಚಿದಾಗ ಕುಟುಂಬದ ಜವಬ್ದಾರಿ ಮಾರೆಪ್ಪನವರ ಹೆಗಲ ಮೇಲೆ ಬಿತ್ತು. ಆಗ ಮಾರೆಪ್ಪನವರು ಹೆಗಲಿಗೆ ಜೋಳಿಗೆಯನ್ನು ಹಾಕಿಕೊಂಡು ಏಕತಾರಿ ಹಿಡಿದು ತತ್ವಪದಗಳನ್ನು ಹಾಡುತ್ತಾ ಭಿಕ್ಷಾಟನೆಯನ್ನು ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು.

ಕರುನಾಡು ಕೋಗಿಲೆ, ಜಾನಪದ ಕೋಗಿಲೆ ಮತ್ತು ಜಾನಪದ ರತ್ನ  ಎಂಬ ಬಿರುದು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಗೌರವ ಪ್ರಶಸ್ತಿ, ರಾಜೀವಗಾಂಧಿ ಪ್ರಶಸ್ತಿ, ಶ್ರೀ ಶರೀಫ ಶಿವಯೋಗಿ ಪ್ರಶಸ್ತಿ, ಬುದ್ಧ ಬಸವ ಅಂಬೇಡ್ಕರ ಪ್ರಶಸ್ತಿ ಹಾಗೂ ಅಖಿಲ ಕರ್ನಾಟಕ ಸಾಂಸ್ಕೃತಿಕ ಪ್ರಶಸ್ತಿ ಇನ್ನೂ ಮುಂತಾದ ಪ್ರಶಸ್ತಿಗಳು ಇವರ ಬೆನ್ನಹತ್ತಿ ಬಂದಿವೆ. ಇಂತಹ ಜನಪದ ಕವಿಯ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಕುರಿತು ತಮ್ಮದೇ ಆದ ಶೈಲಿಯಲ್ಲಿ ತತ್ವಪದಗಳನ್ನು ರಚಿಸಿದ್ದಾರೆ. ಹೆಚ್ಚಾಗಿ ಮಹಿಳಾಪರ ಚಿಂತನೆಗಳನ್ನು ಚಿತ್ರಿಸಿದ್ದಾರೆ.

"ಸಿದ್ದಲಿಂಗಯ್ಯನ ಧ್ಯಾಸ, ಹದಿನೆಂಟು ಕುಲದೈವ ಕೇಳಿರಿ, ಬಂಜೆಯೆಂಬ ಶಬ್ದವು, ಹಾವು ತುಳುದೆನೆ, ಗುಣವಂತಿಯಾಗವ್ವ, ಚನಪ್ಪ ಚನಗೌಡ, ಎಷ್ಟು ತೊಳೆಯಲ್ಲಮ್ಮ, ಏನ್ ಕೊಡ ಎನ್ ಕೊಡವ್ವ ಎಂಬ ತತ್ವ ಪದಗಳನ್ನು ಹಾಡುತ್ತಾರೆ. ಕೆಲವೊಂದು ವಿಶಿಷ್ಟ ಸಂಪ್ರದಾಯ ಆಚರಣೆಗಳ ಮೇಲೆ ನಂಬಿಕೆ ಹೊಂದಿರುವ ಮಾರೆಪ್ಪ ಚೆನ್ನದಾಸರು ತಮ್ಮ ನಡೆ-ನುಡಿಗಳಿಗೆ ಎಂದೂ ಧಕ್ಕೆ ಬಾರದಂತೆ ತಮ್ಮ ವೃತ್ತಿ ಕಾಯಕವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಕಂಠಸಿರಿ ಹೊಂದಿರುವ ಮಾರೆಪ್ಪ ಹಿಂದಿನ ದಿನಗಳಲ್ಲಿ ಮನೆ ಬಾಗಿಲಿಗೆ ಬಂದಾಗ ಒಬ್ಬ ಶ್ರೇಷ್ಠ ಕಲಾವಿದ ಎಂದು ಪರಿಗಣಿಸಿ ಮಾಡಿದ ಸನ್ಮಾನ, ನೀಡಿದ ಗೌರವ ಹಾರೈಸಿದ ಹರಕೆ, ಕೊಟ್ಟ ಕಾಣಿಕೆ ಅಷ್ಟಿಷ್ಟಲ್ಲ. ಆ ದಿನಗಳಲ್ಲಿ ಸಾಂಸ್ಕೃತಿಕವಾಗಿ ಗ್ರಾಮೀಣ ಪ್ರದೇಶದಲ್ಲಿ ಮಾಧ್ಯಮಗಳ ಹಾವಳಿಗಳಾಗಲಿ, ಚಲನಚಿತ್ರಗಳಾಗಲಿ, ಇಲ್ಲದ ದಿನಗಳು. ಈ ದಾಸರೇ ಗ್ರಾಮೀಣ ಜನರಿಗೆ ರಂಜನೆ ನೀಡುತ್ತಿರುವ ದಾಸರಾಗಿದ್ದರು. ರೈತರು ರಾಶಿ ಮಾಡುವಾಗ ಇವರನ್ನು ಆಯಗಾರರೆಂದು ಪರಿಗಣಿಸಿ ರಾಶಿಯಲ್ಲಿ ಸ್ವಲ್ಪ ಕಾಳು ಕಡಿಯನ್ನು ಇವರಿಗೆ ನೀಡುತ್ತಿದ್ದರು."[೧೯]

ಇಂದಿನ ದಿನಗಳಲ್ಲಿ ಸಾಂಸ್ಕೃತಿಕ ವೈಭವ ಲೋಕವೇ ಗ್ರಾಮೀಣ ಪ್ರದೇಶಗಳಲ್ಲಿ ತೆರೆದುಕೊಂಡಿರುವುದರಿಂದ ಈ ಚೆನ್ನದಾಸರು ಕೈಯಲ್ಲಿ ಏಕತಾರಿ ಹಿಡಿದು ಹಾಡುತ್ತಾ ಮನೆಬಾಗಿಲಿಗೆ ಬಂದರೆ ಭಿಕ್ಷುಕರನ್ನು ನೋಡುವ ಹಾಗೆ ಕಾಣುತ್ತಾರೆ. ಈಗ ಅವರಿಗೆ ದಾಸರ ಸಾಹಿತ್ಯ ಪದಗಳಲ್ಲಿ,

ತತ್ವಪದಗಳಾಗಲಿ, ಜನಪದಗಳಾಗಲಿ ಬೇಕಾಗಿಲ್ಲ. ಕೇಳುವ ತಾಳ್ಮೆಯೂ ಇಲ್ಲ. ಹೀಗಾಗಿ ಕಿಲುಬು ಕಾಸು ಇಲ್ಲವೆ ತುಂಡು ರೊಟ್ಟಿ ನೀಡಿ ಮುಂದೆ ಸಾಗಹಾಕುತ್ತಾರೆ. ಇಂತಹ ಒಂದು ಸಮಾಜದ ಪರಿಸ್ಥಿತಿಯಲ್ಲಿ ತಲೆ ತಲಮಾರುಗಳಿಂದ ಸಮಾಜಕ್ಕೆ ತತ್ವಬೋಧನೆ ಮಾಡಿದ ಈ ತತ್ವಪದಗಳ ದಾಸರನ್ನು ಕೈ ಹಿಡಿಯಬೇಕಾಗಿದ್ದ ಸರಕಾರ, ಸಂಘ ಸಂಸ್ಥೆಗಳು ತಮ್ಮ ಜವಾಬ್ದಾರಿಯಿಂದ ನುಣುಚಿಕೊಂಡಿವೆ. ತಿಂಗಳಿಗೆ ಒಂದು ಸಾವಿರ ರೂಪಾಯಿಯಂತೆ ರಾಜ್ಯ ಸರಕಾರ ಮಂಜೂರು ಮಾಡುವ ಕಲಾವಿದರ ಮಾಶಾಸನ ಒಂದನ್ನು ಬಿಟ್ಟರೆ ಮತ್ತಿನ್ಯಾವ ನೆರವು ಇಲ್ಲ. ಕೇಂದ್ರ ಸರ್ಕಾರ ಕಲಾವಿದರಿಗಾಗಿ ಕೊಡುವ ಮಾಶಾಸನದ ಸೌಲಭ್ಯಕ್ಕಾಗಿ ಹತ್ತಾರು ಬಾರಿ ಹಲುಬಿದರೂ ಸಹಾಯ ಮಾತ್ರ ಶೂನ್ಯ. ಸ್ವತ: ಇವರು ರಚಿಸಿರುವ ಹಾಡುಗಳು ವೈಷ್ಟತೆಯಿಂದ ಕೂಡಿವೆ.

"ನ್ಯಾಯ ಗಳಿಸಿರಯ್ಯ ನೀವು ನ್ಯಾಯಗಳಿಸಿರಯ್ಯ॥ಪ॥
ನ್ಯಾಯವು ಬಿಟ್ಟರೆ ದೇವರು ಇಲ್ಲ
ಕಾಯವು ಬೆಳಸಿ ಸಾರ್ಥಕವಲ್ಲ
ರಾಯನೆನಿಸಿಕೊಂಡು ರೂಢಿಯೊಳಗೆ
ಕಾಯವು ಯಮನ ಬಾಧಗೆ ಸಿಲುಕದೆ॥೧॥
ನ್ಯಾಯಕೆ ಜಯವುಂಟು ಅನ್ಯಾಯಕೆ ಲಯವುಂಟು
ಮಾನ್ಯರಲ್ಲಿ ಮರ್ಯಾದೆ ಉಂಟು
ಮಾನಗೇಡಿ ಮಂದಿಯೊಳಗೆ ಅವಮಾನವುಂಟು
ತಪ್ಪದು ಇವರಿಗೆ ನರಕದ ಗಂಟು
ಒಪ್ಪುಳ್ಳ ಮನುಷ್ಯರಿಗೆ ಶವನು ಉಂಟು"॥೨॥ [೨೦]

ಭೂಮಿಯ ಮೇಲೆ ಹುಟ್ಟಿದ ಬಳಿಕ ನ್ಯಾಯ ನೀತಿ ಧರ್ಮದಿಂದ ಪ್ರತಿಯೊಬ್ಬರು ಜೀವನ ಸಾಗಿಸಬೇಕು ಎನ್ನುತ್ತಾರೆ

ಜಾನಪದ ಜಗತ್ತು ಸಾಗರವಿದ್ದಂತೆ ಅದರಲ್ಲೂ ನಮ್ಮ ಕರ್ನಾಟಕದ ಜಾನಪದವೂ ವಿಶೇಷವಾಗಿದ್ದು ಇಂಥ ಜಾನಪದ ಲೋಕದಲ್ಲಿ ಮಾರೆಪ್ಪ ಚೆನ್ನದಾಸರು ತಮ್ಮ ಜೀವನದುದ್ದಕ್ಕೂ ಕಲೆಯನ್ನು ಅಳವಡಿಸಿಕೊಂಡು ಕರ್ನಾಟಕದಾದ್ಯಂತ ಅದರ ಕಂಪನ್ನು ಸೂಸಿ, ಈ ಜಾನಪದ ಸಂಸ್ಕೃತಿ, ಕಲೆ, ಸಾಹಿತ್ಯ, ಸಂಗೀತ ಹಾಗೂ ಜಾನಪದ ಜನಾಂಗೀಯ ಬೆಳವಣಿಗೆಯಲ್ಲಿ ಅಪೂರ್ವವಾದ ಸೇವೆಯನ್ನು ಸಲ್ಲಿಸಿ ಕರ್ನಾಟಕದಿಂದ ದೂರದ ದೆಹಲಿಯವರೆಗೂ ಹೋಗಿ ತಮ್ಮ ಅದ್ಭುತವಾದ ಕಲಾ ಪ್ರದರ್ಶನವನ್ನು ನೀಡಿ ಬಂದಿದ್ದಾರೆ.

**ಇಮ್ಮಾಮ್ ಸಾಬ್:**

ಈ ಜಿಲ್ಲೆಯ ಕೊಪ್ಪಳ ತಾಲೂಕಿನ ಅಲ್ಲಾನಗರ ಗ್ರಾಮದ ಇಸ್ಲಾಂ ಧರ್ಮದ ಬಡಕುಟುಂಬದಲ್ಲಿ ಜನಿಸಿದ ಇಮ್ಮಾಮ್ ಸಾಬ್‌ರವರು ತತ್ವಪದಕಾರರಾಗಿ ಗುರುತಿಸಿಕೊಂಡಿದ್ದಾರೆ. ಇವರ ತಂದೆ ಹುಸೇನ್ ಸಾಬ್ ಹೊಸಮನಿ. ಮೂಲತಃ ಇಸ್ಲಾಂ ಧರ್ಮದಿಂದ ಬಂದರೂ, ಹಿಂದೂ ಧರ್ಮದ ಸಂಪ್ರದಾಯಗಳಿಗೆ ಬದ್ದನಾಗಿ ತಮ್ಮದೇ ಆದ ಬದುಕನ್ನು ಕಟ್ಟಿಕೊಡುವುದರ ಮೂಲಕ ಕೋಮು ಸೌಹಾರ್ದತೆ ಬೆಳೆಸುವಲ್ಲಿ ಪ್ರಮುಖರಾಗಿ ಕಾಣಿಸಿಕೊಂಡಿದ್ದಾರೆ. ಇವರು ತಮ್ಮ ತತ್ವಪದಗಳನ್ನು ರಚಿಸುವ ಮುಂಚೆ ಪ್ರಾರಂಭದಲ್ಲಿ .ಗಣಪತಿ ಸ್ತುತಿಯೊಂದಿಗೆ ಆರಂಭಿಸಿದ್ದಾರೆ. ನಂತರದಲ್ಲಿ ಶ್ರೀ ಗವಿಸಿದ್ದ ಮಹಾಸ್ವಾಮಿಗಳವರನ್ನು ಸ್ವಾಗತಿಸಿದ್ದಾರೆ. ಆ ನಂತರದಲ್ಲಿ ಅರಿವಿನ ಪ್ರಜ್ಞೆಯನ್ನು ಗುರುತಿಸಿದ್ದಾರೆ. ಜಾನಪದ ಶೈಲಿಯ ಅಡಿಯಲ್ಲಿ ಅನೇಕ ತತ್ವಪದಗಳನ್ನು ರಚಿಸಿದ್ದಾರೆ. ಇವರು ಕರ್ನಾಟಕ ರಾಜ್ಯದ ರಾಜ್ಯ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಅಲ್ಲದೆ ಅನೇಕ ಸಭೆ ಸಮಾರಂಭಗಳಲ್ಲಿ ಸನ್ಮಾನಿತಗೊಂಡಿದ್ದಾರೆ. ಸಲಾಮು ಪದಗಳು, ರೀವಾಯತ್ ಪದಗಳು, ಲಾವಣಿ ಪದಗಳು, ಪ್ರಾರ್ಥನಾ ಪದಗಳು ಪ್ರೀತಿ ಗೀತೆ ಮುಂತಾದವುಗಳನ್ನು ತಮ್ಮದೇ ಆದ ಭಾಷೆಯ ಅನುಭವದಲ್ಲಿ ರಚಿಸುವುದನ್ನು ಕಾಣುತ್ತೇವೆ. ಇವರು ೧೨ನೇ ಶತಮಾನದ ಬಸವಣ್ಣನವರ 'ದಯವೇ ಧರ್ಮದ ಮೂಲವಯ್ಯ' ಎಂಬ ಸಿದ್ಧಾಂತಕ್ಕೆ ಬದ್ದರಾಗಿ ಕೊಪ್ಪಳ ನಗರದಲ್ಲಿರುವ ಶ್ರೀ ಗವಿಸಿದ್ದ ಮಹಾಸ್ವಾಮಿಗಳನ್ನು ಸ್ವಾಗತಿಸುವ ರೀತಿ ವಿಶಿಷ್ಠತೆಯಿಂದ ಕೂಡಿದೆ.

"ಸ್ವಾಗತಿಸುವೆನು ನಾ ಶಿವಶರಣರಿಗೆ, ಸ್ವಾಗತಿಸುವೆನು ಶಿವಶರಣರಿಗೆ
ಕೊಪ್ಪಳವಾಸಿಗೆ ಗವಿಮಠಾಧಿಶಗೆ ಕರವನು ಜೋಡಿಸಿ ಶಿರವನು ಬಾಗಿಸಿ
ಶಿವಶಾಂತವೀರಗೆ ಶಿವಸ್ವರೂಪಿಗೆ
ವಿಧ್ಯಾ ಧನಾಧಿಪತಿಗೆ ವಿಶ್ವ ವಿರಾಟನಿಗೆ
ಪಲ್ಲ ಅಶನವ ನೀಡುತ್ತ ವೆಸನವ ಕಳೆಯುತ ಅಭಯ ಹಸ್ತವ ನೀಡುವ ಶರಣಗೆ."[೨೧]

ಮುಜಾವರ್ ಸ್ವಾಮಿಯು ಸತಿ ಪತಿಗಳಿಗೆ ಪುತ್ರ ಸಂತಾನವನ್ನು ನೀಡಿದ ರೀತಿಯನ್ನು ಈ ಕೆಳಗಿನ ಪದ್ಯದಿಂದ ತಿಳಿದುಕೊಳ್ಳಬಹುದು.

"ಮುಜೆವಾರನ ಮಾತುಕೇಳಿ ಸತಿ–ಪತಿಯನ್ನು ಕಾಲಕಳೆದರು ಕೆಲದಿನ
ದೇವರ ಮನಸ್ಸಿಗೆ ಬಂದು ವರವಕೊಟ್ಟನು ಮಕ್ಕಳಸಂತಾನ ಗಂಡು ಕೂಸು ಜನಿಸಿತು
ಶುಭದಿನ ತಂದೆ ತಾಯಿಗಿನ್ನಾ ಆಧಿತುನ್ಮಿಥಾನಾ ಸ್ವಾಮಿ ಕೊಟ್ಟಾನು ನನಗೆ ಪುತ್ರನಾ
ಶಾಪುರಕಿ ಹೋದರು ತಕ್ಷಣ ಸಲ್ವರ್ ಸಾಹೇಬರ ದರುಶನ,
ಸಕ್ರಿ ಲೋಬಾನ ಸಂದಲ್ ಊದುಬತ್ತಿ ಸ್ವಾಮಿ ಗೋರಿಗಿನ್ನ ಮಕ್ಕಳ ಶಾಲು

ಹೊದಿಸಿ ಸ್ವಾಮಿಗೋರಿಯನ್ನು ಮನದೋಳುಧ್ಯಾನಾ ಮಾಡ್ವರು ನಮನ

ಸ್ವಾಮಿಕೊಟ್ಟನು ನಮಗೆ ಪುತ್ರನಾ"[೨೨]

ದೇವರು ಮತ್ತು ಧರ್ಮಗಳ ಬಗ್ಗೆ ಅವರು ಸ್ವಷ್ಟವಾಗಿ ಹೀಗೆ ಗುರುತಿಸುತ್ತಿದ್ದರು. "ದೇವರು ಇದ್ದರೆ ಮನುಷ್ಯರ ರೂಪದಲ್ಲಿದ್ದಾನೆ" ಮನುಷ್ಯರಲ್ಲಿಯೇ ನಾನು ದೇವರನ್ನು ಕಾಣುತ್ತೇನೆ. ಕಾಣದ ದೇವರಿಗೆ ನಾನು ಗೋಗರೆಯುವುದಿಲ್ಲ ಎಂದು ನಂಬಿದ್ದರು. ಅಲ್ಲಾನೂ ಒಬ್ಬನೇ, ಅವನು ನಿರಾಕಾರ, ಪ್ರೀತಿಯಿಂದ ಪ್ರಾರ್ಥನೆ ಸಲ್ಲಿಸಿರಿ. ನೀವು ಮಾಡುವ ಪ್ರಾರ್ಥನೆ ನಿಷ್ಕಾಮವಾಗಿರಲಿ, ಸಣ್ಣತನಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಲೌಕಿಕ ಪ್ರಪಂಚದ ಆಸೆ-ಆಮಿಷಗಳಿಗೆ ಬಲಿಯಾಗದಿರಿ. ಎಂದು ಬಹಿರಂಗವಾಗಿ ಹೇಳುತ್ತಿದ್ದರು.

೧. ಬಾಹ್ಯ ಧಾರ್ಮಿಕ ಆಚರಣೆಗಳು. ಆ ಆಚರಣೆಗಳಿಂದಲೇ ಆಧ್ಯಾತ್ಮ ಅನುಭವವನ್ನು ಪಡೆಯಲು ಸಾಧ್ಯ. ಉದಾಹರಣೆ : ಉಪವಾಸ, ಪ್ರಾರ್ಥನೆ,

೨. ಅಲೌಕಿಕ ಅನುಭವಗಳಿಂದ ಕೂಡಿದ ವಿಷಯಗಳು ಉದಾಹರಣೆ ದೇವರು, ನಿಸರ್ಗ ಪರಮಾತ್ಮನಲ್ಲಿ ಪ್ರೇಮ ಚಿಶ್ತಿಯಾ ಸಂಪ್ರದಾಯದ ಪ್ರಕಾರ ಪರಮಾತ್ಮನಲ್ಲಿ ಪ್ರೀತಿ ಭಾವ ಹೊಂದಿರುವುದು. ಸೃಷ್ಟಿಯ ಗೂಢತೆ ಪ್ರೇಮ, ಪ್ರೀತಿ ಇಲ್ಲದಿದ್ದರೆ ಇವು ಘಟಿಸುತ್ತಿರಲಿಲ್ಲ.

"ಭೂಮಿಯು ಚಲಿಸುವುದಿಲ್ಲ
ಸಮುದ್ರವು ಕುದಿಯುವುದಿಲ್ಲ
ಮಳೆ ಬೀಳುವುದಿಲ್ಲ
ಸಸ್ಯ ಬೆಳೆಯುವುದಿಲ್ಲ
ಪ್ರಾಣಿಗಳ ಜನನವೇ ಇಲ್ಲ
ಮನುಷ್ಯನಿಗೆ ಪಕ್ವತೆ ಬರುವುದಿಲ್ಲ
ದೇವರನ್ನು ಪೂಜಿಸಲಾಗುವುದಿಲ್ಲ"[೨೩]

ಪ್ರೀತಿಯನ್ನು ಮೂರು ವಿಧಗಳಲ್ಲಿ ವಿಂಗಡಿಸುತ್ತಾರೆ.

೧ ಸಹಜ ಪ್ರೀತಿ : ದೃಶ್ಯ ಅಥವಾ ಅದೃಶ್ಯ ವಸ್ತುವಿನ ಮೇಲೆ ಯಾವುದೇ ವಿರೋಧವನ್ನು ಒಡ್ಡದೇ ಸಮರ್ಪಣೆ ಭಾವದಿಂದ ಪ್ರೀತಿಸುವುದು ಶರಣಾಗತ ಪ್ರೀತಿ.

೨ ಆಧ್ಯಾತ್ಮ ಪ್ರೀತಿ :ಭಗವಂತನ ಕ್ರಿಯೆಯನ್ನು ಪ್ರೀತಿಸುವುದು, ಭಗವಂತನ ಗುಣಗಳನ್ನು ಪ್ರೀತಿಸುವುದು ಸತ್ ಪ್ರೀತಿ.

೩ ಸೃಷ್ಟಿಯ ಅಗಾಧತೆ: ಸೃಷ್ಟಿಯ ಅಗಾಧತೆ ಹಾಗೂ ಕೌತೂಕಗಳನ್ನು ಕಂಡು ಭಗವಂತನ ಸೃಷ್ಟಿ ಕ್ರಿಯೆಯನ್ನು ಪ್ರೀತಿಸುವುದು. ಸುಂದರತ್ವವೇ ಭಗವಂತನ ಸ್ವರೂಪವೆಂದು ಪ್ರೀತಿಸುವುದು. -ಸುಂದರಕ್ಕೆ' ಹೋಲಿಕೆಯಾಗುತ್ತದೆ. ಭಗವಂತನ ಸೌಂದರ್ಯದ

ಅನುಭೂತಿಯಾಗುವಲ್ಲಿ ಅನೇಕರಿಗೆ ಕಷ್ಟಸಾಧ್ಯ. ಈ ಕಷ್ಟ ನಿವಾರಣೆಗೆ ಒಬ್ಬ ಸಮರ್ಥ ಆಧ್ಯಾತ್ಮ ಗುರುವಿನ ಮಾರ್ಗದರ್ಶನ ಅವಶ್ಯವಿರುತ್ತದೆ. ಆ ಪ್ರೀತಿಯ ಅನಭೂತಿಯೇ ಪವಿತ್ರವಾದ ಪ್ರೇಮವಾಗಿರುತ್ತದೆ.

೪ ಆ ಭಗವಂತನ ಪ್ರೇಮಗಳಿಸುವ ಭರದಲ್ಲಿ ಲೌಕಿಕ ಪ್ರೇಮವನ್ನು ಈ ಸೂಫಿಗಳು ಅಲ್ಲಗಳೆಯುವುದಿಲ್ಲ ಆ ಭಗವಂತನ ಪ್ರೀತಿಯನ್ನು ಗಳಿಸಲು ಲೌಕಿಕ ಪ್ರೀತಿಯೇ ಪ್ರಥಮ ಸೋಪಾನವೆಂದು ನಂಬುತ್ತಾರೆ.೨೪

ಹೀಗೆ ಸೂಫಿಸಂತ ಹಾಗೂ ತತ್ವಪದಕಾರರು ಈ ಜಿಲ್ಲೆಯಲ್ಲಿ ಹುಟ್ಟಿ ತಮ್ಮದೇ ಆದ ನವಧರ್ಮ ಅಂದರೆ ಮಾನವ ಧರ್ಮವನ್ನು ಸ್ಥಾಪಿಸಿ ಮನುಕುಲಕ್ಕೆ ಜೀವದಾನ ನೀಡಿದ್ದಾರೆ. ಇಡೀ ಭಾರತದಾದ್ಯಂತ ಸಂಚರಿಸಿ ಮಾನವ ಕುಲಕೋಟಿಗೆ ಮಾನವೀಯ ಮೌಲ್ಯಗಳನ್ನು ತುಂಬುವಲ್ಲಿ ಪ್ರಯತ್ನಿಸಿದ್ದಾರೆ. ಸೂಫಿ ಸಂತರ ಹುಟ್ಟಿ ಬಾಳಿ ಬದುಕಿದ ಕಾಲ ಸುವರ್ಣಯುಗವೆಂದು ಕರೆಯಬಹುದು.

## ಅಡಿ ಟಿಪ್ಪಣಿ

೧. ವಿ.ರಾಘವೇಂದ್ರ ರಾವ್, ಹಿಂದು-ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು ಪು-೪೪-೪೫

೨. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೨೬

೩. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ. ೪೬

೪. ಫಕೀರ ಮಹಮ್ಮದ್ ಕಟ್ಪಾಡಿ, ಸೂಫಿ ಸಂತರು ಪುಟ ೨೬-೨೭

೫. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೧೭

೬. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೨೪

೭. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು – ಪುಟ ೭೯

೮. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೮೬

೯. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೯೦

೧೦. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪುಟ ೯೦

೧೧. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು.ಪುಟ ೧೦೪

೧೨. ಮಾರೆಪ್ಪ ಚೆನ್ನದಾಸರ ಜೀವನ ಮತ್ತು ಸಾಧನೆ – ಅಪ್ರಕಟಿತ ಪುಟ ೨೬

೧೩. ತಿರುಳುಗನ್ನಡ ಪುಟ ೯೨

೧೪. ಬಸವರಾಜ ಸಬರದ, ಹೈದ್ರಾಬಾದ್ ಕರ್ನಾಟಕದ ತತ್ವಪದಗಳು ಪುಟ ೧೯-೨೦

೧೫. ಬಸವರಾಜ ಸಬರದ, ಹೈದ್ರಾಬಾದ ಕರ್ನಾಟಕದ ತತ್ವಪದಗಳು ಪುಟ ೨೧೯-೨೨೦

೧೬. ಬಸವರಾಜ ಸಬರದ, ಹೈದ್ರಾಬಾದ ಕರ್ನಾಟಕದ ತತ್ವಪದಗಳು ಪುಟ ೨೨೨-೨೨೩

೧೭. ಬಸವರಾಜ ಸಬರದ, ಹೈದ್ರಾಬಾದ ಕರ್ನಾಟಕದ ತತ್ವಪದಗಳು ಪುಟ ೨೨೭-೨೨೮

೧೮. ಎನ್. ಮಹಾಂತೇಶ ಬಸಪ್ಪ ಮಾರೆಪ್ಪ ಚೆನ್ನದಾಸರ ಜೀವನ ಮತ್ತು ಸಾಧನೆ (ಎಂ.ಫಿಲ್. ಪ್ರಬಂಧ ಅಪ್ರಕಟಿತ) ಪುಟ ೬೨

೧೯. ಚಂದ್ರಕಾಂತ ಕರದಳ್ಳಿ, ಖ್ವಾಜಾ ಬಂದಾನವಾಜರು ಪುಟ ೩೦

೨೦. ಇಮ್ಮಾಮ್ ಸಾಬ್ ಅವರ ಕೈಬರಹ (ಅಪ್ರಕಟಿತ ತತ್ವಪದಗಳು)

೨೧. ಇಮ್ಮಾಮ್ ಸಾಬ್ ಅವರ ಕೈಬರಹ (ಅಪ್ರಕಟಿತ ತತ್ವಪದಗಳು)

೨೨. ಎನ್. ಮಹಾಂತೇಶ ಬಸಪ್ಪ ಮಾರೆಪ್ಪ ಚೆನ್ನದಾಸರ ಜೀವನ ಮತ್ತು ಸಾಧನೆ (ಎಂ.ಫಿಲ್. ಪ್ರಬಂಧ ಅಪ್ರಕಟಿತ) ಪುಟ ೪೮

೨೩. ಇಮ್ಮಾಮ್ ಸಾಬ್ ಅವರ ಕೈಬರಹ (ಅಪ್ರಕಟಿತ ತತ್ವಪದಗಳು)

೨೪. ಇಮ್ಮಾಮ್ ಸಾಬ್ ಅವರ ಕೈಬರಹ (ಅಪ್ರಕಟಿತ ತತ್ವಪದಗಳು)

# ಅಧ್ಯಾಯ ೬

## ಸಮಕಾಲೀನತೆ ಮತ್ತು ಕೋಮುಸೌಹಾರ್ದತೆ

೬.೧. ಸಾಮಾಜಿಕ ಸ್ಥಿತಿ–ಗತಿಗಳು
೬.೨. ಧಾರ್ಮಿಕತೆ
೬.೩. ಮೂಲಭೂತವಾದದ ಅಂಶಗಳು
೬.೪. ಮತಾಂಧತೆಯ ಒಳನೋಟ
೬.೫. ಇತಿಹಾಸದ ಕುರುಹುಗಳು
೬.೬. ರಾಜಕೀಯ ಕಾರಣಗಳು
೬.೭. ಸಾಹಿತ್ಯಾವಲೋಕನ
೬.೮ ಆಧ್ಯಾತ್ಮಿಕ ಸಾಮರಸ್ಯ

## ಅಧ್ಯಾಯ – ೬

## ಸಮಕಾಲೀನತೆ ಮತ್ತು ಕೋಮು ಸೌಹಾರ್ದತೆ

"ಭಾರತವು ಬಹು ಹಿಂದಿನಿಂದಲೂ ಏಕ ಹಾಗೂ ಅಖಂಡ ದೇಶವೆಂಬಂತೆ ದೇಶಿ ಮತ್ತು ವಿದೇಶಿಯರಿಂದ ಪರಿಗಣಿತವಾಗಿದೆ. ಆದರೆ ಈ ದೇಶವು ವಿವಿಧ ಮತ, ಧರ್ಮ ಹಾಗೂ ಭಾಷೆಗಳ ಬಹುಸಂಸ್ಕೃತಿ ಜನ ಸಮುದಾಯವನ್ನು ಒಳಗೊಂಡದ್ದಾಗಿದೆ. ಇದರಿಂದಾಗಿ ಭಾರತದ ಜನತೆಯಲ್ಲಿ ವೈವಿಧ್ಯದ ನಡುವೆಯೂ ಏಕತೆಗೆ ಅವಕಾಶವಾಗಿದೆ. ಹತ್ತೊಂಬತ್ತನೆಯ ಶತಮಾನದಂದು ದೇಶಾದ್ಯಂತ ವ್ಯಾಪಕವಾದ ರಾಷ್ಟ್ರೀಯ ಜಾಗೃತಿಯು ಪ್ರಾದೇಶಿಕವಾದ ಪ್ರಾಂತಾಭಿಮಾನವನ್ನು ಕೆರಳಿಸಿದ್ದು ಸಹಜವಾಗಿದೆ. ಈ ಪ್ರಾಂತ್ಯಾಭಿಮಾನ ಈಗ ಭಾಷಾವಾರು ಪ್ರಾಂತ್ಯಗಳ ರಚನೆಯಾಗಿ ಪರಿಣಮಿಸಿದೆ."[1]

ಭಾರತೀಯ ಸಮಾಜವು ವೈವಿಧ್ಯಮಯದಿಂದ ಕೂಡಿದೆ. ಆರ್ಯರು ಭಾರತಕ್ಕೆ ಬಂದ ಮೇಲೆ ಆ ಕಾಲ ಘಟ್ಟದಲ್ಲಿಯೇ ಸಮಾಜದಲ್ಲಿ ಸಂಘರ್ಷದ ಜೊತೆಗೆ ಸಾಮರಸ್ಯವು ಇತ್ತೆಂದು ಹೇಳಬಹುದು. ಹೀಗಾಗಿ ಭಾರತವು ಹಲವು ಧರ್ಮಗಳ ನೆಲೆಬೀಡಾಗಿತ್ತು. ಹೀಗೆ ಹಲವು ಧರ್ಮಗಳಿಂದ ಕೂಡಿದ ಭಾರತವು ಎಲ್ಲ ಧರ್ಮಗಳ ನೈತಿಕ ಮೌಲ್ಯಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡು ಒಂದು ಬೃಹತ್ ರಾಷ್ಟ್ರವಾಗಿ ಮೈದಾಳಿದೆ. ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ, ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ತಮ್ಮದೇ ಆಗಿರುವಂತ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿ ಇಟ್ಟ ಹೆಜ್ಜೆ ತೊಟ್ಟ ರೂಪ ಬಹುಮುಖಿ ಚಿಂತನೆಯಿಂದ ಕೂಡಿರುವದನ್ನು ಕಾಣುತ್ತೇವೆ. ಇಲ್ಲಿರುವ ಪ್ರತಿಯೊಂದು ಧರ್ಮಗಳು ತಮ್ಮ ಸಾಂಸ್ಕೃತಿಕ ವಿಚಾರಗಳಿಂದ ಖ್ಯಾತಿ ಹೊಂದಿ ಅವುಗಳ ಒಳಮುಖಗಳನ್ನು ತೋರಿಸುವಲ್ಲಿ ಜೀವಪರ ಚಿಂತನೆಗಳು ಕಾಣಿಸಿಕೊಂಡಿರುವದು ಗಮನಾರ್ಹ.

ಒಂದು ಕಡೆ ಧರ್ಮ-ಧರ್ಮಗಳ ನಡುವೆ ಸಾಹಿತ್ಯ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ಸಾಮರಸ್ಯ ಮೂಡಿರುವಂತೆ ಕಂಡು ಬಂದರೂ, ಮತ್ತೊಂದೆಡೆ ಅವುಗಳ ನಡುವೆ ಕಂಡೂ ಕಾಣದಂತೆ ಸಂಘರ್ಷ ಉಂಟಾಗಿರುವುದನ್ನು ಕಾಣುತ್ತೇವೆ. ಕಾರಣ ಅವರವರ ಧರ್ಮದ ಅಥವಾ ಕೋಮಿನ ಶ್ರೇಷ್ಠತೆಯೆಂಬುದೇ ಮುಖ್ಯವಾಗುತ್ತದೆ. ಹೀಗಾಗಿ ಈ ಧರ್ಮಗಳು ಮಧ್ಯೆ ಕೋಮುಗಲಭೆಗಳು ಸೃಷ್ಟಿ ಯಾಗುತ್ತಿರುವುದು ಶೋಚನೀಯ ಸಂಗತಿಯಾಗಿದೆ.

ಯಾವ ಧರ್ಮ ಜನರ ಜೀವನ ವಿಧಾನವನ್ನು ಸುವ್ಯವಸ್ಥೆಯಿಂದ ಕಾಪಾಡಬೇಕಿತ್ತೋ, ಅಂತಹ ಧರ್ಮವನ್ನು ಒಂದು ಕೋಮಿಗೆ, ಒಂದು ಮತಕ್ಕೆ ಹಾಗೂ ಒಂದು ಜಾತಿಗೆ ಸೀಮಿತ ಪಡಿಸಿ ಜನರ ನಡುವೆ ಸಹಕಾರವನ್ನುಂಟುಮಾಡದೇ ಕೋಮುದಳ್ಳುರಿಯನ್ನು ಎಬ್ಬಿಸುವಂತಹ ಹಲವಾರು ಸಂದರ್ಭಗಳನ್ನು ಜಗತ್ತಿನಲ್ಲಿ ಕಾಣುತ್ತೇವೆ. ಭಾರತೀಯ ಆಯಾ ಸಂದರ್ಭದಲ್ಲಿ ಈ ಮಾತು

ಒಪ್ಪತಕ್ಕಂತಹ ಸಂಗತಿಯೆಂದರೆ ತಪ್ಪಾಗಲಾರದು. ಏಕೆಂದರೆ, ಭಾರತವು ಮುಖ್ಯವಾಗಿ ಎಲ್ಲಾ ಧರ್ಮಗಳಲ್ಲೂ ವಿಭಿನ್ನತೆಯನ್ನು ಕಂಡರೂ ಅಂತರಂಗದಲ್ಲಿ ಹಿಂದೂ ಮುಸ್ಲಿಂ ಕೋಮುಗಳ ನಡುವೆ ಉದ್ಭವಿಸುವಂತಹ ಭಿನ್ನ ವಿಚಾರಗಳಿಗೆ ಕೊಡಲಿ ಪೆಟ್ಟನ್ನು ಹಾಕದೇ ಉರಿಯುವ ಬೆಂಕಿಗೆ ಎಣ್ಣೆಯನ್ನು ಸುರಿಯುವಂತಹ ಕೆಲಸವನ್ನು ಮಾಡುತ್ತಿರುವುದು ಶೋಚನೀಯವಾಗಿದೆ.

ಕೋಮು ಸೌಹಾರ್ದತೆಯ ಪ್ರಸ್ತುತ ಸ್ಥಿತಿ–ಗತಿಗಳನ್ನು ಅವಲೋಕನ ಮಾಡುವಂತಹ ಸಂಧರ್ಭದಲ್ಲಿ ಆಯಾ ಕೋಮುಗಳ ನಡುವೆ ಸೃಷ್ಟಿಯಾದಂತಹ ಅಸ್ತಿತ್ವದ ಪರಿಕಲ್ಪನೆ ಇಲ್ಲಿ ಮುಖ್ಯವಾಗುತ್ತದೆ. ಈ ದೃಷ್ಟಿಯಿಂದಲೇ ಕೋಮುಗಳ ನಡುವೆ ತಮ್ಮ ಸಿದ್ಧಾಂತಗಳನ್ನು ಉಳಿಸಿ ಬೆಳೆಸುವುದಕ್ಕಾಗಿ ಮುಂದಿನ ಪೀಳಿಗೆಗೆ ಆಯಾ ಕೋಮುಗಳ ಅಸ್ತಿತ್ವಕ್ಕಾಗಿ ಘರ್ಷಣೆಗಳು ಉಂಟಾಗುತ್ತವೆ. ಇದಕ್ಕೆ ಪ್ರಮುಖ ಕಾರಣಗಳೆಂದರೆ ಸಾಮಾಜಿಕ, ಧಾರ್ಮಿಕ, ಮೂಲಭೂತವಾದ, ಇತಿಹಾಸ, ಆಧ್ಯಾತ್ಮಿಕತೆ ಹಾಗೂ ಮತಾಂಧತೆ ಮುಂತಾದವುಗಳಾಗಿವೆ.

**೬.೧. ಸಾಮಾಜಿಕ ಸ್ಥಿತಿ–ಗತಿಗಳು :**

**೬.೨. ಧಾರ್ಮಿಕ – ಶೈಕ್ಷಣಿಕತೆ**

**೬.೩ ಮೂಲಭೂತವಾದದ ಅಂಶಗಳು**

**೬.೪ ಮತಾಂಧತೆ ಒಳನೋಟ**

**೬.೫ ಇತಿಹಾಸದ ಕುರುಹುಗಳು**

**೬.೬ ರಾಜಕೀಯ ಕಾರಣಗಳು**

**೬.೭ ಸಾಹಿತ್ಯಾವಲೋಕನ:**

**೬.೮ ಆಧ್ಯಾತ್ಮಿಕ ಸಾಮರಸ್ಯ**

**೬.೧.ಸಾಮಾಜಿಕ ಸ್ಥಿತಿ–ಗತಿಗಳು :**

"ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯು ಎಚ್ಚತ್ತಿದ್ದಿತ್ತೆಂಬುದನ್ನೂ, ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೆ ಇತರರಿಗಾಗಿಯೂ ಬಾಳಬೇಕೆಂಬ ಅರಿವು ಅವನಿಗೆ ಸಂಪೂರ್ಣವಾಗಿ ಇದ್ದಿತೆಂಬುದನ್ನು ತೋರಿಸುವುದಾಗಿದೆ."[೨]

ಸಮಾಜ ಎಂದಾಗ ಎಲ್ಲಾ ಜಾತಿಯ, ಎಲ್ಲಾ ವರ್ಗದ, ಎಲ್ಲಾ ವರ್ಣದ ಹಾಗೂ ಎಲ್ಲಾ ಧರ್ಮಗಳ ಮಿಲನವೆಂಧರ್ಥ. ಆದರೆ ಇಂದಿನ ಸಮಾಜ ಒಂದು ಜಾತಿಯ ಒಂದು ಕೋಮಿನ ಸಮಾಜವಾಗುತ್ತಾ ನಡೆದಿರುವುದು ದುರಂತವೇ ಸರಿ. ನಮ್ಮಲ್ಲಿಯ ಸಾಮಾಜಿಕ ಸಮಸ್ಯೆ ಎಂದಾಗ ಎರಡು ಧರ್ಮಗಳ ನಡುವೆ ನಡೆಯುವ ಘೋರವಾದ ಚಿಂತನೆಗಳ ಹಿಂದೆ ಮತಾಂಧತೆ ತಾಂಡವಾಡುತ್ತದೆ. ಹೀಗಾಗಿ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವೆ ನಡೆಯುವ ಕೋಮು

ಗಲಭೆಗಳು ಮನುಷ್ಯ – ಮನುಷ್ಯರ ನಡುವೆ ಆತಂಕ ಹುಟ್ಟಿಸುವುದಲ್ಲದೆ ದೇಶದ ಪ್ರಗತಿಗೆ ಮಾರಕವಾಗಿದೆ. ಹಾಗಾದರೆ ಇಸ್ಲಾಂ ಧರ್ಮ ಭಾರತವನ್ನು ಪ್ರವೇಶಿಸಿದ್ದು ಯಾವಾಗ? ಏಕೆ? ಹಿಂದೂ ಧರ್ಮದೊಂದಿಗೆ ಇದರ ಗಲಭೆಯೇಕೆ? ಎಂಬ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ನಾವು ಇಸ್ಲಾಂ ಧರ್ಮವನ್ನು ಕುರಿತು ಹೇಳುವಂತಹ ಸಂದರ್ಭದಲ್ಲಿ ಪ್ರಸ್ತುತ ರೂಪದಲ್ಲಿರುವ ಹಿಂದೂ ಮತ್ತು ಮುಸ್ಲಿಂ ಸಮಸ್ಯೆಯು ಹಳೆಯದಾದ ಸಮಸ್ಯೆಯಾಗಿದ್ದು, ಈ ಸಮಸ್ಯೆಯನ್ನು ತೊಡೆದು ಹಾಕಲು ಸಾಧ್ಯವಿಲ್ಲದಷ್ಟು ದ್ವೇಷ ಹುಟ್ಟಿಕೊಂಡಿರುವದನ್ನು ಗಮನಿಸಿದಾಗ ಈ ಎರಡು ಕೋಮುಗಳ ನಡುವೆ ಮೊದಲಿನಿಂದಲೂ ಪರಸ್ಪರ ದ್ವೇಷ ಮತ್ತು ಅಪನಂಬಿಕೆಗಳು ಇರುವುದನ್ನು ಕಾಣುತ್ತೇವೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯು ಈ ಎರಡು ಕೋಮುಗಳ ನಡುವೆ ಏರ್ಪಟ್ಟಂತ ಗಲಭೆಗೆ ಪ್ರತ್ಯೇಕವಾದ ಆಯಾ ಧರ್ಮದ ಸಮುದಾಯದ ಪ್ರಜ್ಞೆ ಪ್ರಮುಖ ಕಾರಣವಾಗಿದೆ. ಎರಡು ಕೋಮುಗಳ ನಡುವಿನ ರಾಜಕೀಯ ಮತ್ತು ಆರ್ಥಿಕ ಸಂಬಂಧಗಳು ಧರ್ಮಾಂಧತೆಯಿಂದ ಮುಕ್ತವಾಗಿರುವುದು ಒಂದು ಕಡೆಯಾದರೆ, ಇನ್ನೊಂದು ಕಡೆ ಕೋಮುವಾರು ಭಾವನೆಯು ಭಾರತದ ರಾಷ್ಟ್ರೀಯತೆಗೆ ಧಕ್ಕೆಯ ಸಮಾಧಿಯಾಗಿ ಬೆಳೆದು ಬಂದಿತು. ಅಷ್ಟೇ ಅಲ್ಲದೇ ಇಸ್ಲಾಂ ಧರ್ಮ, ಪ್ರಾದೇಶಿಕತೆಯ ಭಾವಾನಾತ್ಮಕತೆಯನ್ನು ಬೆಳೆಸಿದಂತೆ ಕಂಡು ಬಂದರೂ, ಅಂತರಂಗದಲ್ಲಿ ಸಾಮಾಜಿಕ ಅಸ್ತಿತ್ವ ಉಳಿಸಿಕೊಳ್ಳುವಲ್ಲಿ ಪ್ರಯತ್ನಿಸಿದೆ.

ಬೌದ್ಧ ಮತ್ತು ಹಿಂದೂ ಧರ್ಮದ ನಡುವೆ ಹೋರಾಟ ಏರ್ಪಟ್ಟಂತಹ ಸಂದರ್ಭದಲ್ಲಿ ನಮ್ಮ ದೇಶಕ್ಕೆ ಇಸ್ಲಾಂ ಧರ್ಮ ಆಗಮಿಸಿತು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಎಲ್ಲಾ ಧರ್ಮಗಳಂತೆಯೇ ಈ ಧರ್ಮವೂ ಕೂಡ ಸಾಮಾಜಿಕ ಮತ್ತು ನೈತಿಕವಾಗಿ ಬೆಳೆಯಿತು. ಅದರ ಮೂಲಕ ತನ್ನ ಅನುಯಾಯಿಗಳನ್ನು ಮೇಲೆತ್ತುವಂತಹ ಆಧ್ಯಾತ್ಮಿಕ ಚಿಂತನೆಯನ್ನು ಅನುಸರಿಸಿತು. ಇದರಿಂದಾಗಿ ಈ ಧರ್ಮ ಅನಿವಾರ್ಯವೆಂಬಂತೆ ರಾಜಕೀಯದ ಹಿತಾಸಕ್ತಿಗೆ ತಳಕು ಹಾಕಿಕೊಳ್ಳಲೇ ಬೇಕಾಯಿತು. ಆದಾಗ್ಯೂ, ·ದೇವರು ಒಬ್ಬನೇ, ನಾವೆಲ್ಲ ಆತನ ಸೇವಕರು, ನಾವೆಲ್ಲರೂ ಸೋದರರಂತೆ ಬಾಳುವೆ ನಡೆಸಬೇಕು ಎಂಬ ಉಕ್ತಿಯನ್ನಿಟ್ಟುಕೊಂಡ ಈ ಧರ್ಮವು ಇತರ ಧರ್ಮಗಳಿಗಿಂತ ವಿಶಿಷ್ಟ ಎನಿಸುವುದಿಲ್ಲ. ಅಂದರೆ ಎಲ್ಲಾ ಧರ್ಮಗಳ ಸಿದ್ಧಾಂತಗಳನ್ನು ಒಳಗೊಂಡಂತೆ ಕಾಣುತ್ತದೆ.

ಇಸ್ಲಾಂ ಧರ್ಮವು ಭಾರತಕ್ಕೆ ಆಗಮಿಸಿದಾಗ, ಹಿಂದೂ ಧರ್ಮದ ಕೆಳದರ್ಜೆಯ ಜನರ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿತು. ಇದರಿಂದಾಗಿ ಇಲ್ಲಿರುವ ಮತಾಂಧರು ಆ ಧರ್ಮವನ್ನು ಒಪ್ಪಿಕೊಂಡರೆ ಕಷ್ಟವೆಂದು ತಿಳಿದುಕೊಂಡರು. ಅಂತಹ ಸಂಧರ್ಭದಲ್ಲಿ ಆಗಿನ ಜನರು ಕೋಮುಭಾವನೆಯನ್ನು ಹುಟ್ಟುಹಾಕುವಂತಹ ಸಾಮೂಹಿಕ ಪ್ರಜ್ಞೆ ಬೆಳೆಸಿಕೊಂಡಿರಲಿಲ್ಲ. ಹಿಂದೂ ಧರ್ಮದ ಅವಹೇಳನಕಾರಿಯಾಗಿರುವಂತಹ ದುಷ್ಟ ಸಾಮಾಜಿಕ ಪದ್ಧತಿಯು ಕಳಂಕಕಾರಿಯಾಗಿದ್ದು,

ಇಂತಹ ಸಂಧರ್ಭದಲ್ಲಿ ಮುಸ್ಲಿಂ ದೊರೆಗಳು ಇಸ್ಲಾಂ ಧರ್ಮದ ಮೂಲಕ ತನ್ನ ಮಾನವೀಯ ಮೌಲ್ಯಗಳನ್ನು ಜನರ ಮನಸ್ಸಿನಲ್ಲಿ ತುಂಬಿದರು. ಆ ಸಂದರ್ಭದಲ್ಲಿ ಹಿಂದೂ ಧರ್ಮ ತನ್ನ ಅವಹೇಳನ ಕಾರಿಯಾಗಿರುವ ಪದ್ಧತಿಗಳಿಗೆ ಕಡಿವಾಣ ಹಾಕಲಿಲ್ಲ.

ಹಿಂದೂ ಧರ್ಮದ ಅತ್ಯಂತ ಕೆಳಗಿರುವ ಕೊರವ ಮತ್ತು ಚಮ್ಮಾರರು ಇಸ್ಲಾಂ ಧರ್ಮದ ಕೆಲವೊಂದು ಸಿದ್ಧಾಂತಗಳಿಗೆ ಬದ್ಧರಾದರು ಎಂಬುದು ತಿಳಿದುಬಂದಿದೆ. ಆದರೆ ಹಿಂದೂ ಧರ್ಮವು ಇವರನ್ನು ಪೂರ್ವಾಗ್ರಹ ಪೀಡಿತದಿಂದ ಮುಕ್ತಿ ಹೊಂದಿಸಲಾರದೇ, ಜೀವನದಲ್ಲಿ ಜಿಗುಪ್ಸೆ ಉಂಟುಮಾಡುವಂತೆ ಮಾಡಿತು. ಅಷ್ಟೇ ಅಲ್ಲದೇ ತನ್ನ ಕ್ರೂರವಾದ ಮುಖಗಳಿಂದ ಕೆಳವರ್ಗದ ಜನರಿಗೆ ಕಡೆಯ ಸ್ಥಾನವನ್ನು ನೀಡಿತು. ಆದರೆ ಮುಸ್ಲಿಂ ಧರ್ಮವು ಮತಾಂತರದ ಚಿಂತನೆಯನ್ನು ಮುಂದಿಟ್ಟು ಆರ್ಯರಿಂದ ಕಡೆಗೊಂಡಿದ್ದ ಜನರನ್ನು ತನ್ನತ್ತ ಕರೆದುಕೊಂಡಿತು. ಆ ಜನರಿಗೆ ಇದು ದಿವ್ಯ ಜ್ಞಾನದಂತೆ ಕಾಣಿಸಿಕೊಂಡಿತು. ಅಲ್ಲದೆ ಆ ಧರ್ಮವು ಅವರಿಗೆ ಆಕರ್ಷಣೀಯವಾಗಿ ಕಂಡಿತು. ಹೀಗಾಗಿ ಹಿಂದೂ ಧರ್ಮದ ಕೆಳವರ್ಗದ ಜನರು ಇಸ್ಲಾಂ ಸಿದ್ಧಾಂತಕ್ಕೆ ಬದ್ಧರಾದರು.

ಹಿಂದೂ ಧರ್ಮವು ಮೂರ್ತಿ ಪೂಜೆಗೆ ವಿಶೇಷವಾದ ಸ್ಥಾನವನ್ನು ನೀಡಿತ್ತು. ಅಷ್ಟೇ ಅಲ್ಲದೇ ವರ್ಗ–ವರ್ಣದಿಂದ ಜಾತಿಯ ನಿರ್ಭಂಧನೆ ವಿಧಿಸಿತು. ಹೀಗಾಗಿ ಇಸ್ಲಾಂ ಧರ್ಮವು ಮೂರ್ತಿಪೂಜೆಗೆ ಹೆಚ್ಚು ಒತ್ತು ಕೊಡದೆ ದೇವರೊಡನೆ ನೇರವಾಗಿ ಒಂದಾಗುವ ಭಾವನೆಯನ್ನು ತಂದೊಡ್ಡಿತು. ಹೀಗಾಗಿ ಇಸ್ಲಾಂ ಧರ್ಮಕ್ಕೆ ಅದರ ಪ್ರಗತಿಯನ್ನು ತಡೆಗಟ್ಟುವಂತಹ ಧಾರ್ಮಿಕ ವ್ಯವಸ್ಥೆ ಎದುರಾಗಲಿಲ್ಲ. ಇಂತಹ ಸಂದರ್ಭದಲ್ಲಿ ಇವೆರಡು ಧರ್ಮಗಳ ನಡುವೆ ಕಂಟಕ ಪ್ರಾಯವಾದ ಕೋಮುಗಲಭೆಗಳು ಜಾಗತೀಕರಣದ ಪ್ರಚಲಿತ ದಿನಗಳಲ್ಲಿ ನಡೆಯುತ್ತಿರುವುದನ್ನು ಕಾಣುತ್ತೇವೆ.

ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ತಿತ್ವ ಉಳಿಸಿಕೊಳ್ಳುವುದು ಹಾಗೂ ಅಳಿಸಿ ಹೋಗುವ ಭೀತಿಯನ್ನು ಹೋಗಲಾಡಿಸಲು ಧರ್ಮ ಹವಣಿಸುತ್ತಿರುತ್ತದೆ. ಹೀಗಾಗಿ ಇನ್ನೊಂದು ಮತದ ಜೊತೆಗೆ ಸ್ಪರ್ಧೆಗೆ ಇಳಿಯುವುದು ಸಹಜವಾದ ಕಾರಣವಾಗಿದೆ. ಅಂದರೆ ತನ್ನ ಧರ್ಮ, ಅಧಿಕಾರ, ಹಣ, ಸಂಪತ್ತು, ಕಾನೂನು ಮತ್ತು ಸಿದ್ಧಾಂತಗಳನ್ನು ಇಟ್ಟುಕೊಂಡ ಯಾವುದೇ ಧರ್ಮವು ತನ್ನ ಧರ್ಮವನ್ನು ಮಾನವ ಧರ್ಮ ಎಂದು ಸಾರುತ್ತದೆ. ಅದೇ ರೀತಿಯಲ್ಲಿ ಮನೋಭಾವನೆಗಳನ್ನು ತುಂಬುವದು ಪ್ರತಿಯೊಂದು ಧರ್ಮದ ಸಿದ್ಧಾಂತವಾಗಿರುತ್ತದೆ. ಯಾವುದೇ ಧರ್ಮ ತನ್ನ ಪ್ರಧಾನ ಭಾವನೆಗಳಿಂದ ತನ್ನ ಭೂತ ಮತ್ತು ಭವಿಷ್ಯತ್ ಕಾಲದ ಜನಾಂಗಕ್ಕೆ ಉಪಯೋಗವಾಗುವಂತೆ ವ್ಯವಸ್ಥೆಯನ್ನು ಹುಟ್ಟು ಹಾಕುತ್ತದೆ. ಅಷ್ಟೇ ಅಲ್ಲದೆ ಅದಕ್ಕನುಗುಣವಾಗಿ ಕಾನೂನುಗಳನ್ನು ರೂಢಿಸಿಕೊಳ್ಳುತ್ತದೆ. ಹಾಗೇಯೆ ಅನುಕೂಲಗಳನ್ನು ಹುಟ್ಟುಹಾಕುತ್ತದೆ. ಇಂತಹ ಸಂದರ್ಭದಲ್ಲಿ ಪ್ರಧಾನವಾಗಿರುವ ಯಾವುದೇ ಧರ್ಮ ಇನ್ನೊಂದು ಧರ್ಮದ ಅಧಿಕಾರವನ್ನು ತಡೆಯಲು ಪ್ರಯತ್ನಿಸುತ್ತದೆ.

ತನ್ನ ಸಿದ್ಧಾಂತಗಳ ಮೂಲಕ ಕಾನೂನುಗಳನ್ನು ಹುಟ್ಟುಹಾಕಿ, ಅವುಗಳನ್ನು ಇತರ ಧರ್ಮಗಳಿಗಿಂತ ಶ್ರೇಷ್ಠವಾಗಿ ಉಳಿಸಿಕೊಳ್ಳಲು ಹೋರಾಟವನ್ನು ಕೈಗೊಳ್ಳುತ್ತದೆ. ಅಂತಹ ಸಂದರ್ಭದಲ್ಲಿ ಎರಡು ಧರ್ಮಗಳ ನಡುವೆ ಗಲಭೆಗಳು ಏರ್ಪಡುತ್ತವೆ. ಈ ಗಲಭೆಗಳನ್ನು ಪ್ರಚೋಧಿಸಲು ಹಿಂದೂ ಧರ್ಮದ ಆರ್.ಎಸ್.ಎಸ್. ಅನುಸರಿಸುವ ತಂತ್ರಗಳು, ಇಸ್ಲಾಂ ಧರ್ಮವು ಪ್ರಪಂಚದಲ್ಲಿ ಅಲ್ಲಾಹನು ಎಂದಾದರೂ ಹಿಂದೂಗಳ ಮನೆಗೆ ಬೆಂಕಿ ಹಚ್ಚಿದ್ದಾನೆಯೇ ಎನ್ನುವ ಚಿಂತನೆಗಳನ್ನಿಟ್ಟು, ಇವೆರಡು ಧರ್ಮಗಳು ತಮ್ಮ ತಮ್ಮಲ್ಲಿ ವಿಷ ಬೀಜವನ್ನು ಬಿತ್ತಿಕೊಳ್ಳುವುದರ ಮೂಲಕ ಸಾಮಾಜಿಕ ಚೌಕಟ್ಟನ್ನು ಹಾಕಿಕೊಳ್ಳುತ್ತವೆ. ಎಲ್ಲಿ ಜನಸಂಖ್ಯೆ ಹೆಚ್ಚಾಗಿರುತ್ತದೆಯೋ ಅಲ್ಲಿ ಆ ಧರ್ಮದ ಪ್ರಾಬಲ್ಯತೆ ಹೆಚ್ಚು ಇರುತ್ತದೆ. ಅಷ್ಟೇ ಅಲ್ಲದೆ ಈ ಗಲಭೆಗಳು ಉತ್ತಮ ಸಾಮಾಜಿಕ ರಚನೆಗೆ ಹಲವಾರು ತೊಡಕುಗಳನ್ನು ಉಂಟುಮಾಡುತ್ತವೆ.

ಇದರಿಂದಾಗಿ ದೇಶದಲ್ಲಿ ಭಯಾನಕವಾದ ವಾತವರಣದ ಸೃಷ್ಟಿಯಾಗುತ್ತದೆ. ಇದಕ್ಕೆ ಒಂದು ಸ್ಪಷ್ಟವಾದ ಉದಾಹರಣೆಯೆಂದರೆ ಇತ್ತೀಚಿಗೆ ನಡೆದ ಬಾಬ್ರೀ ಮಸೀದಿ ಹಾಗೂ ರಾಮ ಮಂದಿರದ ಗಲಭೆಗಳು. ಬಾಬರಿ ಮಸೀದಿ ಧ್ವಂಸ ಮಾಡಿದ ಮರುದಿನದಿಂದಲೇ ರಾಮಮಂದಿರ ನಿರ್ಮಾಣ ಆರಂಭವಾಗುವುದೆಂದು, ಆರಂಭಿಸುವುದೆಂದು ಸಂಘಪರಿವಾರ ಹೇಳಿಕೊಂಡಿದೆ. “ಡಿಸೆಂಬರ್ ೬, ೧೯೯೨ ರಂದು ಮಸೀದಿ ಉರುಳಿತು. ಆದರೆ ರಾಮಮಂದಿರ ನಿರ್ಮಾಣ ಆಗಲಿಲ್ಲ. ೧೯೯೩ ಉರುಳಿತು. ಆಗಲೂ ಆಗಲಿಲ್ಲ. ೧೯೯೪ ಉಹು:। ೧೯೯೮ ಉರುಳಿತು. ಆದರೂ ಮಂದಿರ ನಿರ್ಮಾಣದ ಲಕ್ಷಣಗಳು ಕಾಣಲಿಲ್ಲ. ವಿಶ್ವಹಿಂದೂ ಪರಿಷತ್ತು, ಭಜರಂಗದಳ, ಆರ್.ಎಸ್.ಎಸ್, ಹಿಂದೂ ಉಗ್ರರಿಗೆ (Terrorist) ಹೊಟ್ಟೆಯಲ್ಲಿ ಹೊತ್ತಿದ್ದ ಬೆಂಕಿ ಮಂದಿರ ನಿರ್ಮಾಣ ನಿಧಾನವಾದಂತೆಲ್ಲ ಬರುಬರುತ್ತ ಧಗಧಗ ಉರಿಯ ತೊಡಗಿತು.”[೨]

ಹೀಗೆ ರಾಮ-ರಹೀಮ ಎಂಬ ದೈವದ ಪರಿಕಲ್ಪನೆಯನ್ನೊಳಗೊಂಡ ಇವೆರಡರ ನಡುವೆ ನಡೆಯುವ ಕೋಮುಗಲಭೆಗಳು ದೇಶದ ಸರ್ವಾಂಗೀಣ ಅಭಿವೃದ್ಧಿಯನ್ನು ಕುಂಠಿತಗೊಳಿಸಿ, ದೇಶದಲ್ಲಿ ಅಸ್ಥಿರತೆಯನ್ನು ತರುವುದರ ಮೂಲಕ ಅಶಾಂತಿಯನ್ನು ಉಂಟುಮಾಡುತ್ತೆವೆ. ಹೀಗಾಗಿ ದೇಶದ ಮೂಲೆ ಮೂಲೆಗಳಲ್ಲಿ ಕೋಮು ಸೌಹಾರ್ದತೆಯು ಅತೀ ಅವಶ್ಯವೆನಿಸಿದೆ. ಈ ಸೌಹಾರ್ದತೆಯ ಭಾವನೆಯನ್ನು ಬೆಳೆಸಬೇಕಾದರೆ ಸಮಾಜದಲ್ಲಿ ಸೃಷ್ಟಿ ಮಾಡಿರುವ ಅಗೋಚರ, ಅನೈತಿಕ ಮೌಲ್ಯಗಳನ್ನು ದೂರವಿಟ್ಟು, ಹಿಂದೂ ಮುಸ್ಲಿಂ ಎನ್ನುವ ಧರ್ಮ ಭೇಧವನ್ನು ಮರೆತು ಸೌಹಾರ್ದತೆಯಿಂದ ಬಾಳಿದಾಗ ಮಾತ್ರ ಈ ದೇಶಕ್ಕೆ ಉಜ್ವಲವಾದ ಭವಿಷ್ಯವಿದೆ. ಇದನ್ನು ಬಿಟ್ಟು ಸಮಾಜದಲ್ಲಿರುವ ಅವಿವೇಕಿ ಧರ್ಮಾಂಧರು ಭಾರತದ ಇತಿಹಾಸವನ್ನು ತಿರುಚಿ, ಪುರ್ನರುಚ್ಚರಿಸಿ ಮತಾಂಧತೆಯನ್ನು ಉಂಟುಮಾಡುವುದಕ್ಕೆ ಕಾರಣ ಕರ್ತರಾಗಿದ್ದಾರೆ. “ಕೋಮು ಗಲಭೆಗಳಿಗೆ ಮುಸ್ಲಿಂ ಕಾರಣರೋ, ಹಿಂದೂಗಳೂ ಕಾರಣರೋ

ಎಂಬುದನ್ನು ತಿಳಿಯುವುದು ಕಷ್ಟದ ಕೆಲಸ. ಯಾವ ಜನಾಂಗ ಹೆಚ್ಚಾಗಿರುತ್ತದೇಯೊ, ಆ ಜನಾಂಗದ ದಬ್ಬಾಳಿಕೆ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಇದಕ್ಕೆ ಪ್ರಮುಖವೆಂದರೆ ಪೂರ್ವಾಗ್ರಹ ಪೀಡಿತದ ದೇವಾಲಯ ಹಾಗೂ ಧರ್ಮದ ಸಮಸ್ಯೆಗಳು ಕಾರಣಗಳಾಗಿ ಕಾಣಿಸಿಕೊಳ್ಳುತ್ತವೆ. ೧೯೬೮ ರಿಂದ ಇಲ್ಲಿಯವರೆಗೆ ನಡೆದಿರುವ ಕೋಮುಗಲಭೆಗಳಲ್ಲಿ ಮೃತಪಟ್ಟವರ ಸಂಖ್ಯೆಯನ್ನು ಗಮನಿಸಬಹುದು.

| ವರ್ಷ | ಕೋಮು ಗಲಭೆಗಳ ಸಂಖ್ಯೆ | ಮೃತರ ಸಂಖ್ಯೆ | | ಒಟ್ಟು |
|---|---|---|---|---|
| | | ಹಿಂದೂ | ಮುಸ್ಲ್ಮಾನ | |
| ೧೯೬೮ | ೩೪೬ | ೨೪ | ೯೯ | ೧೩೩ |
| ೧೯೬೯ | ೫೯೦ | ೬೬ | ೫೫೮ | ೬೭೪ |
| ೧೯೭೦ | ೫೨೧ | ೬೮ | ೧೭೬ | ೨೯೮ |
| ೧೯೭೧ | ೩೨೧ | ೩೮ | ೬೫ | ೧೦೩ |
| ೧೯೭೨ | ೨೧೦ | ೨೧ | ೪೫ | ೭೦ |
| ೧೯೭೩ | ೨೪೨ | ೨೬ | ೪೫ | ೭೨ |
| ೧೯೭೪ | ೨೪೮ | ೨೬ | ೬೧ | ೮೭ |
| ೧೯೭೫ | ೨೦೫ | ೧೧ | ೨೨ | ೩೩ |
| ೧೯೭೬ | ೧೬೯. | ೨೦ | ೧೯ | ೩೯ |
| ೧೯೭೭ | ೧೮೮ | ೧೨ | ೨೪ | ೩೬ |
| ೧೯೭೮ | ೨೧೯ | ೫೧ | ೫೬ | ೧೦೮ |
| ೧೯೭೯ | ೩೦೪ | ೮೦ | ೧೫೦ | ೨೬೧ |
| ೧೯೮೦ | ೪೨೭ | ೮೭ | ೨೭೮ | ೩೭೫ |
| ಒಟ್ಟು | ೩೯೪೯ | ೫೩೦ | ೧೫೯೮ | ೨೨೮೯ |

ಈ ಸಮ್ಮಿಶ್ರ ಅಂಕಿ ಸಂಖ್ಯೆಗಳಲ್ಲದೆ ೧೯೬೦ ರ ನಂತರ ಕೆಲವು ದೊಡ್ಡ ಕೋಮು ಗಲಭೆಗಳಲ್ಲಿ ಸತ್ತ ಹಿಂದೂ ಹಾಗೂ ಮುಸಲ್ಮಾನರ ಅಂಕಿಸಂಖ್ಯೆಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ಮೃತರ ಅಂಕಿಸಂಖ್ಯೆ**

| ಸ್ಥಳ | ವರ್ಷ | ಹಿಂದೂ | ಮುಸ್ಲಿಂ | ಅನ್ಯ | ಒಟ್ಟು |
|---|---|---|---|---|---|
| ಅಲಿಗಢ | ೧೯೬೧ | ೦೧ | ೧೨ | – | ೧೩ |
| ರಾಂಚಿ / ಹಟಿಯಾ | ೧೯೬೭ | ೨೦ | ೧೫೬ | ೦೧ | ೧೭೭ |
| ಅಹಮದಾಬಾದ್ | ೧೯೬೯ | ೨೪ | ೪೩೦ | ೫೮ | ೫೧೨ |
| ಭಿವಂಡಿ | ೧೯೭೦ | ೧೭ | ೫೬ | ೦೨ | ೭೫ |
| ಜಲಗಾಂವ್ | ೧೯೭೦ | ೦೧ | ೪೨ | – | ೪೩ |
| ಫಿರೋಜಾಬಾದ್ | ೧೯೭೨ | ೦೩ | ೧೬ | ೦೨ | ೨೧ |
| ಅಲಿಗಢ | ೧೯೭೯ | ೦೬ | ೧೯ | ೦೩ | ೨೮ |
| ಮುರಾದಾಬಾದ್ | ೧೯೮೦ | ೧೮ | ೧೪೨ | ೦೬ | ೧೬೬ |
| ಮೀರತ್ | ೧೯೮೨ | ೦೬ | ೨೧ | ೦೨ | ೨೯ |
| ಒಟ್ಟು | | ೯೬ | ೮೯೨ | ೭೪ | ೧೦೬೨ |

ಈ ಮೇಲಿನ ಎರಡೂ ಕೋಷ್ಟಕಗಳಿಂದ ಸ್ಪಷ್ಟವಾಗುವುದೆಂದರೆ ಸ್ವಾತಂತ್ರ್ಯಾನಂತರದ ಎಲ್ಲಾ ದಂಗೆಗಳಲ್ಲಿ ಕೆಲವು ಅಮುಖ್ಯ ಅಪವಾದಗಳನ್ನು ಹೊರತುಪಡಿಸಿ, ಸತ್ತವರಲ್ಲಿ ಹಿಂದೂಗಳ ಸಂಖ್ಯೆಗೆ ಹೋಲಿಸಿದರೆ ಮುಸಲ್ಮಾನರ ಸಂಖ್ಯೆ ಹೆಚ್ಚಿದೆ."[೪]

ಈ ಮೇಲಿನ ಕೋಮುದಳ್ಳುರಿಗಳಿಗೆ ತುತ್ತಾದ ಹಿಂದೂ ಮತ್ತು ಮುಸ್ಲಿಂ ಜನಸಮುದಾಯದ ಸಂಖ್ಯೆಗಳನ್ನು ಪರಿಗಣಿಸಿದಲ್ಲಿ, ಹೀಗೆಯೇ ಗಲಭೆಗಳು ನಡೆಯುತ್ತಲೇ ಹೋದಲ್ಲಿ ವ್ಯಕ್ತಿ–ವ್ಯಕ್ತಿಗಳ ನಡುವೆ ಇರುವ ಪ್ರೀತಿ, ವಿಶ್ವಾಸ, ನಂಬಿಕೆ ಹಾಗೂ ಅನುಕಂಪಗಳೆಂಬ ಮಾನವೀಯ ಮೌಲ್ಯಗಳು ಅಳಿದು ಹೋಗಿ, ಮುಂದೊಂದು ದಿನ ಮಾನವ ಜನಾಂಗದ ಉಳಿವಿನ ಭವಿಷ್ಯತ್ತೇ ಇಲ್ಲದಂತಾಗುತ್ತದೆ. ಆದಕಾರಣ ಸೂಫಿ–ಸಂತರ ವಿಚಾರಧಾರೆಗಳು ಜನಮನಗಳಲ್ಲಿ ತರುವಂತಹ ಕೆಲಸ ಆಗಬೇಕಾಗಿದೆ.

**೬.೨. ಧಾರ್ಮಿಕ – ಶೈಕ್ಷಣಿಕತೆ :**

'ಮನುಷ್ಯ–ಮನುಷ್ಯನನ್ನಾಗಿ ನೋಡದ, ಹಸಿದ ಹೊಟ್ಟೆಗೆ ರೊಟ್ಟಿಯ ಚೂರನ್ನು ಕೊಡಲಾಗದ, ವಿಧವೆಯರ ಕಣ್ಣೀರನ್ನು ಒರೆಸಲಾಗದ ದೇವರಲ್ಲಾಗಲೀ, ಧರ್ಮದಲ್ಲಾಗಲೀ ನನಗೆ ನಂಬಿಕೆ ಇಲ್ಲ' ಎಂಬ ಸ್ವಾಮಿವಿವೇಕಾನಂದ ಅವರ ಅಭಿಪ್ರಾಯವನ್ನು ಗಮನಿಸಿದರೆ, ನಿಜವಾದ ಧರ್ಮ ಮಾನವೀಯತೆಯ ತಳಹದಿಯದಾಗಿರಬೇಕು ಎಂಬುದನ್ನು ತಿಳಿಸುತ್ತದೆ. "ಭಾರತೀಯ ಸಮಾಜದಲ್ಲಿ ಕೋಮುವಾದ ಹಾಗೂ ಅದರಿಂದ ಉದ್ಭವಿಸುವ ಗಲಭೆಗಳಿಗೆ ಎಷ್ಟೋ ಸಲ ಅಸಮಾನತೆ ಹಾಗೂ ಶೋಷಣೆಯನ್ನಾಧರಿಸಿದ

ಆರ್ಥಿಕ ಸಂಬಂಧಗಳೂ ಮಹತ್ವದ ಕಾರಣಗಳಾಗಿದ್ದವು. ಇವುಗಳಲ್ಲಿ ರಾಜಕೀಯ ಸಂಚುಗಳ ಮೂಲಕ ಪ್ರಾಂತೀಯ ಆರ್ಥಿಕ ವಾಸ್ತವಗಳ ಸಮತೋಲನ ಬದಲಾಯಿಸುವ ಪ್ರಯತ್ನಗಳನ್ನೂ ನಾವು ಗಮನಿಸಬಹುದು. ಎಷ್ಟೋ ಸಂದರ್ಭಗಳಲ್ಲಿ ಕೋಮುವಾದಿ ಶಕ್ತಿಗಳು ತಮ್ಮ ಸಮುದಾಯದ ಹಿಂದುಳಿಯುವಿಕೆಗೆ ಕನ್ನಡಿ ಹಿಡಿದು ಇತರ ಸಮುದಾಯದ ವಿರುದ್ಧ ಹೋರಾಟ ಮಾಡಲೆತ್ನಿಸುತ್ತವೆ. ಸಾಮಾನ್ಯವಾಗಿ ಇಡೀ ಪ್ರಯತ್ನದ ಹಿಂದೆ ರಾಜಕೀಯ ಅಥವಾ ಧಾರ್ಮಿಕ ಮಹತ್ವಕಾಂಕ್ಷೆಗಳು ಅಡಗಿರುತ್ತವೆ."[9]

ಹೀಗಾಗಿ ಆಯಾ ದೇಶದಲ್ಲಿ ಆ ದೇಶದ ಧರ್ಮವೇ ಪ್ರಧಾನವಾಗಿರುತ್ತದೆ. ಭಾರತೀಯ ಧರ್ಮವೆಂದರೆ, ಹಿಂದೂ ಧರ್ಮ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ವಿದೇಶಿ ಧರ್ಮಗಳೆಂದು ಕರೆದಿದ್ದಾರೆ. ಇವು ಭಾರತೀಯ ಧರ್ಮದ ಮೇಲೆ ಸತತವಾಗಿ ದಾಳಿ ನಡೆಸಿವೆ ಎಂಬ ಮಾತು ಒಪ್ಪುವಂತಹ ಸಂಗತಿಯಲ್ಲ. ಧರ್ಮವೆಂದರೆ ಸಂಸ್ಕೃತಿಯೆಂದರ್ಥ. ಇದನ್ನು ಗಮನಿಸಿದರೆ ಎಲ್ಲಾ ಜನ ಸಮುದಾಯಗಳ ಸಂಸ್ಕೃತಿ ಭಾರತದಲ್ಲಿ ಕಾಣಸಿಗುತ್ತದೆ. ಆದರೆ ಭಾರತೀಯ ಹಿಂದೂ ಧರ್ಮ ತನ್ನ ಸ್ವಷ್ಟತೆಯನ್ನು ಪಡೆದುಕೊಳ್ಳುವದರ ಮೂಲಕ ಇತರ ಧರ್ಮಗಳ ಮೇಲೆ ಅವಹೇಳನಕಾರಿ ವಿಷಬೀಜವನ್ನು ಬಿತ್ತುತ್ತಿರುವುದು ಸರಿಯಾದ ಕ್ರಮವಲ್ಲ. ಈ ಮಾತು ಎಲ್ಲಾ ಧರ್ಮಗಳಿಗೂ ಅನ್ವಯಿಸುತ್ತದೆ. ಅಂದರೆ ಯಾವುದೇ ಧರ್ಮವಿರಲಿ ಮಾನವನ ಬದುಕಿಗೆ ಪ್ರೇರಕ–ಪೂರಕವಾಗಿರಬೇಕು ಎಂಬುದನ್ನು ಒತ್ತಿ ಹೇಳುತ್ತದೆ.

"ಕೋಮುವಾದ ಇಂದು ಎರಡು ವೈಪರೀತ್ಯಗಳಿಗೆ ಕಾರಣವಾಗಿದೆ. ಒಂದು ಮೂಲಭೂತವಾದಕ್ಕೆ ಅಂಟಿಕೊಂಡು ಅನ್ಯಜಾತಿ ದ್ವೇಷವನ್ನು ಸೃಷ್ಟಿಸುವುದು. ಇದು ಎಲ್ಲರಿಗೂ ದಿನನಿತ್ಯ ಅನುಭವಕ್ಕೆ ಬಂದ ಸಂಗತಿಯೇ ಆಗಿದೆ. ಎರಡನೆಯದು ನಾಸ್ತಿಕತೆಗೆ ಹಾದಿ ಮಾಡಿಕೊಡುತ್ತಿರುವುದು. ಇದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಇದನ್ನು ಸೂಕ್ಷ್ಮ ಚಿಂತನೆಗೆ ಒಳಪಡಿಸಿದರೆ ಆಸ್ತಿಕತನವೇ ಪ್ರಧಾನವಾದದ್ದಾಗಿದೆ. ಕೋಮುವಾದವು ತನಗರಿವಿಲ್ಲದಂತೆ ಆಸ್ತಿಕತೆಗೆ ಪೆಟ್ಟು ಕೊಡುತ್ತ ನಾಸ್ತಿಕತೆಗೆ ಪುಷ್ಟಿಕೊಡುತ್ತದೆ ಎಂಬುದು ಸ್ಪಷ್ಟವಾಗುತ್ತದೆ."[10]

ಹೀಗಾಗಿ ಹಿಂದೂ ಮತ್ತು ಮುಸ್ಲಿಂರು ಪರಸ್ಪರ ವೈರಿಗಳು ಎಂಬ ಮಾತು ಸರಿಯಾದ ಕ್ರಮವೆನಿಸುವುದಿಲ್ಲ, ಏಕೆಂದರೆ ಎರಡು ಸಮುದಾಯದ ಗಣ್ಯವ್ಯಕ್ತಿಗಳು ತಮ್ಮ ಹಿತಾಸಕ್ತಿಗಳನ್ನು

ಆಗಿದೆ. ಒಂದು ರೀತಿಯಿಂದ ಗಮನಿಸಿದಾಗ ಎರಡೂ ಧರ್ಮದ ಕೆಳವರ್ಗದ ಬಡವರು, ವಿಚಾರವಂತರು, ತಮ್ಮ ಧಾರ್ಮಿಕ ಎಲ್ಲೆಗಳನ್ನು ಮೀರಿ ಪರಿವರ್ತಿತ ಸೂಫಿ ಸಂತರ ವಿಚಾರಗಳಿಗೆ ಬದ್ಧರಾದಲ್ಲಿ ಕೋಮು ಸೌಹಾರ್ದತೆ ಕಾಣಲು ಸಾಧ್ಯ. ಪ್ರತಿಯೊಂದು ಧರ್ಮ ತನ್ನ ಸಿದ್ಧಾಂತಗಳೇ

ಶ್ರೇಷ್ಠವೆಂದು ಹೇಳುವುದು ಸಹಜ. ಆದರೆ ಎಲ್ಲಾ ಧರ್ಮಗಳು ಒಂದಲ್ಲಾ ಒಂದು ರೀತಿಯಿಂದ ಜನರ ಹಿತಾಸಕ್ತಿಗೆ ಹಾಗೂ ಅವರ ಏಳಿಗೆಗೆ ಕಂಕಣಬದ್ಧವಾಗಿ ನಿಂತಿರುವುದು ಕಂಡುಬರುತ್ತದೆ.

ಹಿಂದೂ ಧರ್ಮದಲ್ಲಿದ್ದುಕೊಂಡು ಮಾನವ ಪರ ಚಿಂತನೆಗೆ ಎಡೆಮಾಡಿಕೊಟ್ಟ ಸೂಫಿಗಳು ತಮ್ಮದೇ ಆದ ಹೊಸ ಧರ್ಮವನ್ನು ಹುಟ್ಟುಹಾಕಿದರು. ಇದಕ್ಕೆ ಕಾರಣ ಧರ್ಮಗಳಲ್ಲಿ ತಾಂಡವಾಡುತ್ತಿರುವ ಮೌಢ್ಯತೆಯೇ ಆಗಿದೆ. ಸೂಫಿ-ಸಂತರ ಧರ್ಮವು ಪ್ರತಿಬಿಂಬಿಸುವ ಕಾಳಜಿಗಳನ್ನು ನೋಡಿದರೆ, ಇವು ಭಾವೈಕ್ಯತೆಗೆ ಪ್ರೇರಕ ಶಕ್ತಿಯಾಗಿ ಕಾಣಿಸಿಕೊಂಡಿವೆ. ಈ ಹಿನ್ನೆಲೆಯಲ್ಲಿ ಹಿಂದೂ ಮತ್ತು ಇಸ್ಲಾಂ ಧರ್ಮದ ನಡುವೆ ಇರುವ ಕಳಂಕಕಾರಿಯಾದ ಗಲಭೆಗಳು ನಡೆದು ಘೋರವಾದ ಆಘಾತಕಾರಿಯನ್ನುಂಟು ಮಾಡಿದವು. ಎಲ್ಲಿ ಅಹಿಂಸೆಯನ್ನು ಭೋಧಿಸಬೇಕಾಗಿತ್ತೋ, ಅಲ್ಲಿ ಹಿಂಸೆಯು ತಾಂಡವವಾಡತೊಡಗಿದೆ. ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಬ್ರಿ ಮಸೀದಿಯನ್ನು ಧ್ವಂಸಮಾಡಿ ಹಿಂದೂ ಧರ್ಮದ ರಾಮ ಮಂದಿರವನ್ನು ಕಟ್ಟುವುದೆಂಬ ಮಾತುಗಳು ಕೋಮುವಾದಕ್ಕೆ ಪ್ರೇರಕ ಶಕ್ತಿಯಾಗಿವೆ. ಈಗ ನಡೆಯುತ್ತಿರುವ ಕೋಮು ಗಲಭೆಗಳು ಆಯಾ ಧರ್ಮದ ಸಾಮಾನ್ಯ ಜನರನ್ನು ಹೀನಾಯವಾಗಿ ಧ್ವಂಸ ಮಾಡಿದವು. ಹಿಂದೂ ಧರ್ಮವೆಂದರೆ ಅದೊಂದು ಪುಣ್ಯಧರ್ಮ, ಜನಸಮುದಾಯದ ಜೀವನ ಶೈಲಿಯನ್ನು ಬದಲಿಸುವ ಶಕ್ತಿ ಈ ಧರ್ಮಕ್ಕಿದೆ ಎಂಬ ಮಾತು ಒಂದು ಕಡೆ. ಮತ್ತೊಂದು ಕಡೆ ಪರಧರ್ಮದ ಅನೇಕ ತತ್ವಜ್ಞಾನಿಗಳು ಈ ದೇಶದ ಆಧ್ಯಾತ್ಮಕತೆಗೆ ದುಡಿದು, ಸೌಹಾರ್ದತೆಗೆ ಸಂಕೇತವಾಗಿ ತಮ್ಮ ಜೀವನವನ್ನು ಮುಡಿಪಿಟ್ಟ ತುಳಸಿದಾಸ ರಾಮನ ಭಕ್ತನಾದರೆ, ಆತನ ಆಶ್ರಯ ತಾಣ ಮಸೀದಿ. ಇಂತಹದ್ದನ್ನು ಕಂಡಲ್ಲಿ ಎರಡು ಧರ್ಮಗಳ ನೈಜತೆಗೆ ತುಳಸಿದಾಸರು ಸಾಕ್ಷಿಯಾಗಿದ್ದಾರೆ.

ಭಾರತದ ಕವಿ, ತತ್ವಜ್ಞಾನಿ, ಆಧ್ಯಾತ್ಮಿಕ ಗುರುಗಳಾದ ಕಬೀರವರು ಮೂಲತ: ಇಸ್ಲಾಂ ಧರ್ಮದವರು. ಆದರೂ ಹಿಂದೂ ಧರ್ಮದ ಅನೇಕ ಅನುಯಾಯಿಗಳು ಕಬೀರವರ ಆಧ್ಯಾತ್ಮಿಕತೆಯನ್ನು ಒಪ್ಪಿಕೊಂಡಿರುವಲ್ಲಿ ಮಾನವೀಯತೆ ಎದ್ದು ಕಾಣುತ್ತದೆ. ಇವರಂತೆ, ಗುರುನಾನಕರವರು ಇಸ್ಲಾಂ ಧರ್ಮ ಬೋಧಿಸುವ ದೈವಿಕ ಐಕ್ಯತೆ ಹಾಗೂ ಹಿಂದು ಧರ್ಮದ ಪುನರುತ್ಥಾನದ ನೈತಿಕತೆಗೆ ಒತ್ತುಕೊಟ್ಟರು. ಆಧ್ಯಾತ್ಮಿಕ ಸುಧಾರಣೆಗಳ ತತ್ವಗಳನ್ನು ಸಮೀಕರಿಸಿ, ಹೊಸ ಧರ್ಮವನ್ನು ಹುಟ್ಟುಹಾಕಿದರು. ಇವರ ಈ ಹೊಸ ಧರ್ಮವೇ ಕೋಮುಸೌಹಾರ್ದತೆಯ ಧರ್ಮವಾಗಿದೆ.

"ಕೋಮುವಾದದಿಂದ ಒಂದು ಮತದ ಧರ್ಮಗ್ರಂಥ ಇನ್ನೊಂದು ಮತದವರಿಗೆ ಅದು ಕೇವಲ ಒಂದು ಪುಸ್ತಕ. ಅಲ್ಲದೆ ಅದರಲ್ಲಿ ಉಕ್ತವಾದ ವಿಚಾರಗಳು ಸುಳ್ಳಿನ ಕಂತೆ. ಒಂದು ಜನಾಂಗದ ದೇವಮಂದಿರ ಇನ್ನೊಂದು ಜನಾಂಗಕ್ಕೆ ನಾಲ್ಕು ಗೋಡೆಗಳ ಬರೀ ಕಟ್ಟಡ. ಮಂದಿರ-ಮಸೀದಿಗಳು ಸ್ವಜನಾಂಗದವರಿಗೆ ಮುಕ್ತಿಯಧಾಮ ಎನಿಸಿ, ಭಕ್ತಿಯ ಮಹಾಪೂರ ಉಕ್ಕಿಸಿದರೆ ಅನ್ಯ ಜನಾಂಗದವರಿಗೆ

ನಿರ್ಭಾವುಕ ಸ್ಥಳಗಳು, ದ್ವೇಷದ ನೆಲೆಗಳು"[2] ಆಗಿ ಕಾಣಿಸುತ್ತವೆ. ಹೀಗಾಗಿ ಕೋಮುವಾದದ ಸಂಘರ್ಷವು ವಾಸ್ತವಿಕವಾಗಿ ಧರ್ಮಮೂಲದ್ದಲ್ಲ. ಅದು ರಾಜಕೀಯ ಮತ್ತು ಆರ್ಥಿಕ ಮೂಲದ್ದು. ಧರ್ಮ ಎಂಬ ಶಬ್ದವು ಕೆಟ್ಟದಿನಗಳನ್ನು ಸೃಷ್ಟಿಮಾಡುತ್ತಲೇ ನಡೆದಿರುವುದನ್ನು ಕಾಣುತ್ತೇವೆ. ಎಲ್ಲ ಧರ್ಮಗಳು ಸಾಮಾನ್ಯವಾಗಿ ತಮ್ಮ ಮೂಲಭೂತ ಹಿತಾಸಕ್ತಿಗೆ ಒತ್ತುಕೊಟ್ಟರೆ, ಧರ್ಮಗಳ ಧರ್ಮಗಳ ನಡುವೆ ಇರುವ ಸಂಘರ್ಷವನ್ನು ಕೊನೆಗಾಣಿಸದೇ ಮತ್ತಷ್ಟೂ ಜಟಿಲವಾದ ಸಾಮಾಜಿಕ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಆದುದರಿಂದಲೇ ಈ ಧರ್ಮಗಳ ಕುರಿತು ಕಬೀರರು ಹೇಳುವ ಮಾತು ಹೀಗಿದೆ;

"ಹಿಂದೂಗಳು ಮತ್ತು ಮುಸ್ಲಿಂಮಿಯರು ಒಬ್ಬರೇ, ಅವರು ಒಬ್ಬನೇ ದೇವರನ್ನು ಪೂಜಿಸುತ್ತಾರೆ, ಅವರು ಒಬ್ಬನೇ ತಂದೆಯ ಮಕ್ಕಳು, ಅವರಲ್ಲಿ ಹರಿಯುತ್ತಿರುವುದು ಒಂದೇ ರಕ್ತ ಎಂದು ಅವನು ಮತ್ತೆ ಮತ್ತೆ ಹೇಳುತ್ತಾನೆ. 'ಸೃಷ್ಟಿಯಾಗಿರುವ ಸ್ತ್ರೀ ಪುರಷರೆಲ್ಲ ನಿನ್ನ ರೂಪ. ಕಬೀರನು ಅಲ್ಲಾಹ್ ಮತ್ತು ರಾಮನ ಪುತ್ರ. ಅವನು (ತಂದೆ) ಕಬೀರನ ಗುರು ಮತ್ತು ಪೀರ್,' 'ಮತ್ತು ನಿಜವಾದ ಗುರುಗಳು ತೋರಿಸಿದ ಒಂದೇ ಒಂದು ಪಂಥ ಹಿಂದೂಗಳಿಗೂ ತುರ್ಕರಿಗೂ ಇದೆ; ಕಬೀರನು ಹೇಳುತ್ತಾನೆ, ಓ ಸಂತರೆ ಕೇಳಿ! ರಾಮ ಎನ್ನಿ ಅಥವಾ ಖುದಾ ಎನ್ನಿ, ಅದನ್ನು ಅರ್ಥಮಾಡಿಕೊಳ್ಳುವವರ ಧರ್ಮ ಒಂದೇ, ಅವರು ಪಂಡಿತರಾಗಿರಲಿ ಅಥವಾ ಷೇಕರಾಗಿರಲಿ"[3]

ಈ ಎರಡು ಕೋಮುಗಳ ನಡುವೆ ಸಾಮರಸ್ಯವನ್ನುಂಟು ಮಾಡುವಲ್ಲಿ ಕಬೀರವರು ಮಾಡಿದ ಪ್ರಯತ್ನ ನಿಜಕ್ಕೂ ಪ್ರಶಂಶನೀಯುವಾಗಿದೆ.. ಇವರ ಅನೇಕ ಜನ ಶಿಷ್ಯರಲ್ಲಿ ಹಿಂದೂ ಮತ್ತು ಮುಸ್ಲಿಂರು ಇದ್ದರು. ಹೀಗೆ ಬಂದಿರುವಂತಹ ಧರ್ಮದ ನಡುವೆ ಕೋಮು ಸೌಹಾರ್ದತೆಯ ಬದಲಾಗಿ ಕೋಮುಗಲಭೆಗಳು ಹೆಚ್ಚುತ್ತಿರುವುದು ದುರಂತವಾಗಿದೆ.

**ಶೈಕ್ಷಣಿಕತೆ :**

ಎಲ್ಲಾ ಧರ್ಮಗಳಿಗೂ ಸಾಮಾನ್ಯವಾದ ಮೂಲಭೂತ ಸತ್ಯಗಳಿಗೆ ಒತ್ತು ಕೊಟ್ಟರೆ ವಿವಿಧ ಧಾರ್ಮಿಕ ಗುಂಪುಗಳ ನಡುವೆ ಉತ್ತಮ ಸಂಬಂಧವನ್ನು ಸ್ಥಾಪಿಸಲು ಸಹಾಯವಾಗುತ್ತದೆ. "ಇಡೀ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ದೇಶದ ಯುವ ಜನಾಂಗಕ್ಕೆ ಶಿಕ್ಷಣವನ್ನು ನೀಡುವಂತಹ ಧಾರ್ಮಿಕ ಶಿಕ್ಷಣ ಸಂಸ್ಥೆಗಳನ್ನು ರಾಷ್ಟ್ರೀಕರಣ ಮಾಡಬೇಕು. ಪ್ರತ್ಯೇಕತಾವಾದದ ಬೀಜಗಳ ಬಿತ್ತನೆ ನಡೆಯುವುದು ಇಲ್ಲಿಯೇ. ಧಾರ್ಮಿಕ ಶಿಕ್ಷಣ ನೀಡಿದ ಶಾಲೆಗಳಲ್ಲಿ ಹಿಂದೂ ಮತ್ತು ಮುಸ್ಲಿಂ ವಿದ್ಯಾರ್ಥಿಗಳು ಅಕ್ಕಪಕ್ಕದಲ್ಲಿ ಕುಳಿತು ಹಿಂದೂ ಮತ್ತು ಮುಸ್ಲಿಂ ಸಂಬಂಧಗಳ ಬಗೆಗೆ ವಿಶಾಲವಾದ ದೃಷ್ಟಿಕೋನವನ್ನು ಹೊಂದಿರುತ್ತಾರೆ; ಇವರಿಗೆ ಹೋಲಿಸಿದರೆ, ಧಾರ್ಮಿಕ ಶಿಕ್ಷಣ ಸಂಸ್ಥೆಗಳೊಡನೆ ಅವಿನಾಭಾವ ಸಂಬಂಧವನ್ನು ಹೊಂದಿರುವ ಪ್ರತ್ಯೇಕತೆಯ ವಾತಾವರಣದಲ್ಲಿ ಬೆಳೆದ ಮಕ್ಕಳಿಗೆ ಇಂತಹ ವಿಶಾಲ ದೃಷ್ಟಿಕೋನ ಇರುವುದಿಲ್ಲ. ಇದು ಸಾಮಾನ್ಯಜ್ಞಾನ.

ಈ ವಿಚಾರವಾಗಿ ನಮ್ಮ ನಿರ್ದಿಷ್ಟ ಶಿಫಾರಸುಗಳು ಹೀಗಿವೆ;

೧. "ಇನ್ನು ಮುಂದೆ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಅಥವಾ ಯಾವುದೇ ಕೋಮು ಅಥವಾ ಅದರ ಯಾವುದೇ ಉಪಜಾತಿಗಳ ಶಾಖೆಗಳ ಹೆಸರಿನಲ್ಲಿ ಶಾಲೆ ಅಥವಾ ಕಾಲೇಜನ್ನು ಪ್ರಾರಂಭಿಸಬಾರದು.

೨. ಸಾಧ್ಯವಾದ ಕಡೆಗಳಲ್ಲೆಲ್ಲ, ಅಸ್ತಿತ್ವದಲ್ಲಿರುವ ಧಾರ್ಮಿಕ ಪಂಥದ ಸಂಸ್ಥೆಗಳ ಹೆಸರುಗಳನ್ನು ಕೋಮುವಾದಿಯಾಗಿ ಕಾಣದಂತೆ ಬದಲಾಯಿಸಬೇಕು. ವಿಳಂಬವು ಅನಿವಾರ್ಯವಾಗಿದ್ದಲ್ಲಿ ಸಾಧ್ಯವಾದಷ್ಟು ಬೇಗ ಬದಲಾವಣೆ ತರಲು ಕ್ರಮ ಕೈಗೊಳ್ಳಬೇಕು.

೩. ಈ ಸಂಸ್ಥೆಗಳ ಆಡಳಿತ ಮಂಡಳಿಗಳಲ್ಲಿ ಬೇರೆ ಕೋಮುಗಳಿಗೆ ಸೇರಿದ ಸದಸ್ಯರನ್ನು ಕ್ರಮೇಣ ಸೇರಿಸಿಕೊಳ್ಳಬೇಕು. ಸಂಸ್ಥೆಯ ನಿರ್ವಹಣೆಯಲ್ಲಿ ಅವರ ಧ್ವನಿಗೂ ನಿಜವಾದ ಬೆಲೆಕೊಡಬೇಕು.

೪. ಅಧ್ಯಯನದ ಸರಣಿ ಮತ್ತು ಉಪನ್ಯಾಸಗಳನ್ನು, ಕೋಮುಭಾವನೆಗಿಂತ ವಿಭಿನ್ನವಾಗಿ, ವಿಶಾಲವಾದ ಸಾಂಸ್ಕೃತಿಕ ಮತ್ತು ರಾಷ್ಟ್ರೀಯ ದೃಷ್ಟಿಕೋನವನ್ನು ನೀಡುವಂತೆ ರಚಿಸಬೇಕು.

೫. ಬೇರೆ ಕೋಮುಗಳಿಗೆ ಸೇರಿದ ವಿದ್ಯಾರ್ಥಿಗಳನ್ನು ಆಹ್ವಾನಿಸಬೇಕು ಮತ್ತು ಜೊತೆಗೆ ಸೇರಲು ವಿಶೇಷವಾದ ಪ್ರೋತ್ಸಾಹವನ್ನು ಕೊಡಬೇಕು. ಯಾವುದೇ ಒಂದು ನಿರ್ದಿಷ್ಟ ಕೋಮಿಗೆ ಸೇರಿದ ವಿದ್ಯಾರ್ಥಿಗಳಿಗೆ ಆದ್ಯತೆ ಕೊಡುವುದನ್ನು ರದ್ದುಗೊಳಿಸಬೇಕು.

೬. ಸ್ಥಿತ್ಯಂತರದ ಅವಧಿಯಲ್ಲಿ, ಅಲಿಗಡ್ ಮುಸ್ಲಿಂ ವಿಶ್ವವಿದ್ಯಾಲಯ ಅಥವಾ ಇಸ್ಲಾಮಿಯ ಕಾಲೇಜ್, ಲಾಹೋರ್‌ದಂತಹ ಮುಸ್ಲಿಂ ಸಂಸ್ಥೆಯ ವಿದ್ಯಾರ್ಥಿಗಳನ್ನು ಬನಾರಸ್ ಹಿಂದೂ ವಿಶ್ವವಿದ್ಯಾಲಯ ಅಥವಾ ಡಿ.ಎ.ವಿ. ಕಾಲೇಜ್, ಲಾಹೋರ್ ಅಂತಹ ಹಿಂದೂ ಸಂಸ್ಥೆಗಳು ಉತ್ಸವ ಸಂದರ್ಭಗಳಲ್ಲಿ ಅಥವಾ ಇತರ ಪ್ರಮುಖ ಸಂದರ್ಭಗಳಲ್ಲಿ ಒಂದು ವಾರ ಅಥವಾ ಹತ್ತುದಿನಗಳ ಅವಧಿಗೆ ಆಹ್ವಾನಿಸಬೇಕು ಮತ್ತು ಪ್ರತಿಕ್ರಮವಾಗಿಯೂ ಮಾಡಬೇಕು. ಭೇಟಿಯ ಈ ಸಂದರ್ಭಗಳು ವಿದ್ಯಾರ್ಥಿಗಳ ಪಾಲಿಗೆ ಸಂತೋಷಕರ ಮತ್ತು ಪ್ರಯೋಜನಕಾರಿ–ಯಾಗಬೇಕು. ಸಂದರ್ಶಕ ವಿದ್ಯಾರ್ಥಿಗಳಿಗೆ ತಾವು ಆತಿಥೇಯ ಸಂಸ್ಥೆಗಳ ಪ್ರೀತಿಪಾತ್ರ, ಗೌರವಾನ್ವಿತ ಅತಿಥಿಗಳು ಎಂಬ ಭಾವನೆ ಬರುವಂತಾಗಬೇಕು ಮತ್ತು ಸಾಮಾಜಿಕ ಜೀವನದಲ್ಲಿ ಅವರು ಮುಕ್ತವಾಗಿ ಬೆರೆಯಲು ಉತ್ತೇಜನ ನೀಡಬೇಕು. ಬಹುತೇಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು, ಧಾರ್ಮಿಕ ಶಿಕ್ಷಣ ಸಂಸ್ಥೆಗಳಾಗಿಲ್ಲದಿದ್ದರೂ, ವಾಸ್ತವದಲ್ಲಿ ಒಂದು ಅಥವಾ ಇನ್ನೊಂದು ಕೋಮಿನ ವಿದ್ಯಾರ್ಥಿಗಳಿಗೆ ಸೀಮಿತವಾಗಿವೆ. ಈ ಮಿತಿಗಳನ್ನು ತೆಗೆದುಹಾಕುವಲ್ಲಿ ಅವು ಮುಂಚೂಣಿಗೆ ಬರಬೇಕು.

೭. ಇತಿಹಾಸವನ್ನು ಕುರಿತು ಹೊಸ ಪುಸ್ತಕಗಳನ್ನು ರಚಿಸಬೇಕು. ಅವು ಸತ್ಯನಿಷ್ಠರಾಗಿರಬೇಕು. ಅವು ಕೋಮುವಾದಿ ಭಾವನೆಯನ್ನು ಬೆಳೆಸುವಂತೆ ಇರಬಾರದು. ಇತಿಹಾಸ ಮತ್ತು ಪುರಾಣದ ನಾಯಕಮಣಿಗಳನ್ನು ಮಾತೃಭೂಮಿಯಲ್ಲಿ ನೆಲೆಸಿರುವ ಎಲ್ಲಾ ಸಮುದಾಯಗಳ ಸಾಮಾನ್ಯ

ನಾಯಕರೆಂದು ಗೌರವಿಸುವ ಮೂಲಕ ರಾಷ್ಟ್ರೀಯ ದೃಷ್ಟಿಕೋನವನ್ನು ರೂಢಿಸಿಕೊಳ್ಳಲು ನೆರವಾಗುವಂತಿರಬೇಕು. ಬಹುಪಾಲು ಪ್ರಮಾಣಬೂತ ಪುಸ್ತಕಗಳನ್ನು ಬರೆದವರು ವಿದೇಶಿಯರು ಅಥವಾ ಅವರ ಪ್ರಭಾವಕ್ಕೆ ಒಳಗಾದವರು. ಅವರ ಉದ್ದೇಶ ಹಿಂದೂ ಮತ್ತು ಮುಸ್ಲಿಂರಲ್ಲಿ ಪರಸ್ಪರ ವೈಷಮ್ಯದ ಭಾವನೆಗಳನ್ನು ಕೆರಳಿಸುವುದು. ಶಾಲೆ ಮತ್ತು ಕಾಲೇಜುಗಳಲ್ಲಿ ಬೋಧಿಸುವ ಪಠ್ಯಪುಸ್ತಕಗಳನ್ನು ಸಾಮಾನ್ಯವಾಗಿ ಅವರ ಪ್ರಭಾವದಡಿಯಲ್ಲಿ ಬರೆಯಲಾಗಿದೆ. ಮಾನವನ ಬರಹಗಾರಿಕೆಯಲ್ಲಿ ದೋಷ ಮತ್ತು ಪಕ್ಷಪಾತಗಳು ಅನಿವಾರ್ಯವಾದರೆ, ಅವರು ವಾಸಿಯಾದ ಗಾಯಗಳನ್ನು ಮತ್ತೆ ಕೆರೆಯುವುದು ಬೇಡ, "ಹಳೆಯ ಯುದ್ಧಗಳನ್ನು" ಮರೆತು ಕ್ಷಮಿಸಲಿ; ಪ್ರೇಮ ಮತ್ತು ಭ್ರಾತೃತ್ವವನ್ನು ಬೆಳಗಿಸಲಿ."

ಹೀಗೆ ಧಾರ್ಮಿಕ ಹಾಗೂ ಶೈಕ್ಷಣಿಕ ವ್ಯವಸ್ಥೆಯನ್ನು ಕುರಿತು ಗಮನಿಸಿದಾಗ ಇವೆರಡು ರಾಷ್ಟ್ರೀಯ ದೃಷ್ಟಿಕೋನವನ್ನು ರೂಢಿಸಿಕೊಳ್ಳಲು ನೇರವಾಗುತ್ತಾ ಹಿಂದೂ ಹಾಗೂ ಮುಸ್ಲಿಂರ ನಡುವೆ ಪರಸ್ಪರ ವೈಷ್ಯಮ್ಯದ ಭಾವನೆಗಳನ್ನು ಕಿತ್ತೋಗೆದು ಸೌಹಾರ್ದತೆಯ ಭಾವನೆಗಳನ್ನು ತುಂಬುವ ಪ್ರಯತ್ನ ನಿಜಕ್ಕೂ ಶ್ಲಾಘನೀಯ.

**೬.೩.ಮೂಲಭೂತವಾದದ ಅಂಶಗಳು:**

ಮೂಲಭೂತವಾದವೆಂದರೆ ಧರ್ಮವನ್ನು ಅದರ ರೀತಿ – ನೀತಿಗಳನ್ನು ಕೆಟ್ಟ ಸ್ಥಿತಿಗೆ ತರುವುದರ ಜೊತೆಗೆ ಕೋಮುಗಳಲ್ಲಿ ವಿಷಬೀಜ ಬಿತ್ತುವ ಕೆಲಸವಾಗಿದೆ. ಧರ್ಮದ ಮೊದಲ ರೀತಿ – ನೀತಿಗಳನ್ನು ಮುಂದುವರೆದ ರೀತಿಯಲ್ಲಿ ಅನುಸರಿಸಿಕೊಂಡು ಹೋಗುವ ಆಷಾಡಭೂತಿಯನ್ನು ಹುಟ್ಟು ಹಾಕುವವರೆ 'ಮೂಲಭೂತವಾದಿಗಳು' ಇವರದು ಧರ್ಮದ ಉದ್ದೇಶ. ಪ್ರತಿಯೊಂದು ಧರ್ಮವು ಸಮಾಜದ ಪರಿವರ್ತನೆಗೆ ಪ್ರೇರಕ ಶಕ್ತಿಯಾದರೆ ಪ್ರತಿಯೊಂದು ಧರ್ಮದ ಮೂಲಭೂತವಾದಿಗಳು ತಮ್ಮ ಧರ್ಮದ ಹಿಡಿತ ಎಲ್ಲಿ ತಪ್ಪುತ್ತದೆ ಎಂಬ ಮನೋಭಾವನೆಯನ್ನು ಹುಟ್ಟು ಹಾಕುವುದರ ಮೂಲಕ ಧರ್ಮದ ನೀತಿಗೆ ಕಂಕಣ ಬದ್ದರಾಗುತ್ತಾರೆ. ಏಕೆಂದರೆ ಆ ಕಾಲದ ಧಾರ್ಮಿಕ ನಡವಳಿಕೆಗಳು ಅದರಿಂದ

ಅದರಿಂದಲೇ ಗೌರವ ಸ್ಥಾನಮಾನಗಳನ್ನು ಪಡೆದ ಇವರು ತಮ್ಮ ಪ್ರಗತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಕೆಲಸಕ್ಕೆ ಕೈಹಾಕುತ್ತಾರೆ.

ಮೂಲ ಧರ್ಮದ ರೀತಿ– ನೀತಿಗಳಿಂದ ಉನ್ನತ ಸ್ಥಾನಮಾನಗಳು ಕೈತಪ್ಪಿ ಹೋಗುತ್ತವೆ ಎಂಬ ಭಾವನೆ ಒಂದು ಕಡೆಯಾದರೆ, ನಾವು ಶ್ರೇಷ್ಠರು ಉಳಿದೆಲ್ಲಾ ಜಾತಿಗಳು ನಮಗಿಂತ ಕನಿಷ್ಟರು ಎಂಬುದು ಮತ್ತೊಂದೆಡೆ. ಏಕೆಂದರೆ ಸಾಮಾನ್ಯ ಜನರಿಗೆ ಧಾರ್ಮಿಕ ನಿಯಮಗಳು ಅನೇಕ ರೀತಿಯಾದ ಕಟ್ಟುಪಾಡುಗಳನ್ನು ವಿಧಿಸಿದೆ. ಸಾಮಾನ್ಯ ಜನರ ಶ್ರಮವನ್ನು ದೋಚಿ ಅವರ ನಡುವೆ ಬಾಂಧವ್ಯವನ್ನು

ಬೆಳೆಸುವಲ್ಲಿ ಮೇಲ್ನೋಟಕ್ಕೆ ಶ್ರಮಿಸಿದಂತೆ ಕಾಣುತ್ತಾರೆ. ಅಷ್ಟೇ ಅಲ್ಲದೆ ತಮ್ಮ ಸೋಗಲಾಡಿತನದಿಂದ ಇತರ ಧರ್ಮಗಳ ಜೊತೆ ಸೇಡನ್ನು ಮನಸ್ಸಿನಲ್ಲಿಟ್ಟುಕೊಂಡು ಸಾಮಾನ್ಯ ಜನರ ನಡುವೆ ಕೋಮುಗಲಭೆಗಳು ಉಂಟಾಗುವಂತೆ ಪ್ರೇರಕ ಶಕ್ತಿಯಾಗುತ್ತಾರೆ. ಇಲ್ಲಿ ತನ್ನ ಧರ್ಮ ಮತ್ತು ವ್ಯಕ್ತಿ ಶ್ರೇಷ್ಠತೆ ಬಹುಮುಖ್ಯ ಎನಿಸುತ್ತದೆ.

ಒಬ್ಬ ವ್ಯಕ್ತಿ ಶ್ರೇಷ್ಠ ಇನ್ನೊಬ್ಬ ವ್ಯಕ್ತಿ ಕನಿಷ್ಠ, ನನ್ನ ಧರ್ಮ ಮತ್ತು ದೇವರು ಶ್ರೇಷ್ಠ ಇನ್ನೊಬ್ಬರ ಧರ್ಮ ಮತ್ತು ದೇವರು ಕನಿಷ್ಠ ಎಂದಾಗ ಮಾತ್ರ ಆ ಎರಡು ಕೋಮುಗಳ ನಡುವೆ ಸಮಸ್ಯೆಗಳು ಉದ್ಭವಿಸುತ್ತವೆ. ಈ ಸಮಸ್ಯೆಗೆ ಕಾರಣ ಮೂಲಭೂತತನ. ಯಾವ ಧರ್ಮಗಳೂ ದೇವರಲ್ಲಿ ಭಿನ್ನಾಭಿಪ್ರಾಯವನ್ನುಂಟು ಮಾಡುವುದಿಲ್ಲ. 'ದೇವನೊಬ್ಬ ನಾಮ ಹಲವು' ಎಂಬ ಅಂಶವನ್ನು ವ್ಯಕ್ತಪಡಿಸುತ್ತವೆ. ಇದನ್ನು ಹೊರತು ಪಡಿಸಿ ಮೂಲಭೂತವಾದಿಗಳು ಪರಧರ್ಮದ ಜನರನ್ನು ದ್ವೇಷಿಸುವುದಷ್ಟೆ ಅಲ್ಲದೇ ತಮ್ಮ ಅನುಯಾಯಿಗಳನ್ನು ಬಿಟ್ಟು ಇತರ ಧರ್ಮದ ಜನರ ಮೇಲೆ ಸೇಡು ಉದ್ಭವಿಸುವಂತೆ ಮಾಡುತ್ತಾರೆ.

ಮೂಲಭೂತವಾದಿಗಳ ಮುಖ್ಯ ಉದ್ದೇಶ ಇತರೆ ಧರ್ಮಕ್ಕಿಂತ ತಮ್ಮ ಧರ್ಮ ಶ್ರೇಷ್ಠವೆಂದು ಅದರ ಸಿದ್ಧಾಂತಗಳನ್ನು ತಮ್ಮ ಅನುಯಾಯಿಗಳಲ್ಲೂ ತುಂಬುವುದರ ಮೂಲಕ ತಮ್ಮ ಬೆಳೆಯನ್ನು ಬೇಯಿಸಿಕೊಳ್ಳುವಲ್ಲಿ ಪ್ರಮುಖರಾಗುತ್ತಾರೆ. ಈ ದೃಷ್ಟಿಯಿಂದ ಸಮಾಜದಲ್ಲಿ ಬದುಕುವ ಹಲವಾರು ಧರ್ಮಿಯರಲ್ಲೂ ಸ್ವಪ್ರತಿಷ್ಠೆಯನ್ನು ಹೆಚ್ಚಿಸುವುದರ ಮೂಲಕ ಸಾಮರಸ್ಯಕ್ಕೆ ಅಡ್ಡಿಯನ್ನುಂಟು ಮಾಡಿ ಕೋಮುಗಲಭೆಗೆ ಕಾರಣರಾಗುತ್ತಾರೆ.

ಪ್ರಪಂಚ ವಿಶಾಲವಾಗಿದೆ. ಹಲವಾರು ದಾರಿಗಳಿದ್ದರೆ ಯಾವ ದಾರಿಯ ಮೂಲಕವಾದರೂ ಆ ಸ್ಥಳವನ್ನು ಮುಟ್ಟಬಹುದು. ಅಂತೆಯೇ ಕಳೆದ ಐದು ಸಾವಿರ ವರ್ಷಗಳ ಹಿಂದೆ ನಡೆದ ಧರ್ಮಯುದ್ಧಗಳಲ್ಲಿ ಯಾವುದೋ ಒಂದು ಧರ್ಮ ಉಳಿಯಬೇಕಾಗಿತ್ತು. ಆದರೆ ಅದು ಸಾಧ್ಯವಾಗಲಿಲ್ಲ, ಕಾರಣ ಈ ಮೂಲಭೂತವಾದಿಗಳೆ. ಎಲ್ಲಿಯವರೆಗೆ ಈ ಮೂಲಭೂತವಾದಿಗಳು ತಮ್ಮ ಧರ್ಮ ಶ್ರೇಷ್ಠತೆಯನ್ನು ಮರೆತು ಎಲ್ಲಾ ಧರ್ಮದ ಮಾನವೀಯ ಮೌಲ್ಯಗಳಿಗೆ ಒತ್ತುಕೊಡುವುದಿಲ್ಲವೋ ಅಲ್ಲಿಯವರೆಗೆ ಕೋಮು ಸೌಹಾರ್ದತೆ ಮೂಡಲು ಸಾಧ್ಯವಿಲ್ಲ.

**೬.೪.ಮತಾಂಧತೆಯ ಒಳನೋಟ:**

ಮತಾಂಧತೆ ಎಂಬುದು ಕೆಲವು ವ್ಯಕ್ತಿಗಳಿಗೆ ಅಂಟಿಕೊಂಡ ವ್ಯಾಧಿ. ಹಾಗೆಯೇ ಒಂದು ಗಟ್ಟಿಯಾದ ವ್ಯಸನವು ಆಗಿದೆ. ಇದು ಒಂದು ಮತದ ಕುರುಡುತನ ಅಷ್ಟೇ. ಇದು ಒಂದು ರೀತಿಯ ಅಮಲು. ಇದುವೇ ಕೋಮುವಾದವನ್ನು ಪ್ರೋತ್ಸಾಹಿಸುತ್ತದೆ. ತನ್ನ ಸ್ವಂತ ಕೋಮಿನ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತದೆ. ಹಾಗೇಯೆ ತನ್ನ ಕೋಮಿನ ಹಿತವನ್ನು ಸಾಧಿಸುವ ಪ್ರಯತ್ನ

ಮಾಡುತ್ತದೆ. ಸ್ವಜನ ಪಕ್ಷಪಾತವನ್ನು ಹುಟ್ಟು ಹಾಕುತ್ತದೆ. ಕೋಮು ಸೌಹಾರ್ದತೆಯನ್ನು ಕದಡಿ ಕೋಮುಕಲಹಗಳನ್ನು ಪ್ರಚೋದಿಸುತ್ತದೆ. ಪರಸ್ಪರ ಕೋಮುಗಳ ದ್ವೇಷಕ್ಕೆ ಕಾರಣವಾಗುತ್ತದೆ. ಇದಕ್ಕೆ ಒಳಿತು ಮತ್ತು ಕೆಡಕು ಎಂಬ ಅಂಶಗಳು ಗೋಚರಿಸುವುದಿಲ್ಲ.

ಇದರ ಹಿಂಸೆ, ದುರ್ನಡತೆ, ಕ್ರೂರತನ ಮನುಷ್ಯ ಮನುಷ್ಯರಲ್ಲಿ ಭೇದವನ್ನು ಕಲ್ಪಿಸುತ್ತದೆ. ತಾವು ಶ್ರೇಷ್ಠ ಎಂಬ ಭ್ರಮೆಯನ್ನುಂಟುಮಾಡುತ್ತದೆ. ಮತ್ತೊಂದು ಮತದ ದೇವರನ್ನು ಕೀಳಾಗಿ ಕಾಣುವ ಪ್ರವೃತ್ತಿಯನ್ನು ಬೆಳೆಸುತ್ತದೆ. ಹಾಗೆಯೇ ತಮ್ಮ ಧರ್ಮದ ಬಗೆಗೆ ದುರಭಿಮಾನವನ್ನೂ ಮೂಡಿಸುತ್ತದೆ. ಮಾನವರನ್ನು ಚಿಂತನಾಹೀನರನ್ನಾಗಿ ಮಾಡುತ್ತದೆ. ಇದು ಆಕ್ರಮಣ ಹಾಗೂ ಅತಿಕ್ರಮಣತೆಗೆ ಧರ್ಮದ ಮುದ್ರೆಯನ್ನು ಒತ್ತುತ್ತದೆ. ಮನುಷ್ಯರನ್ನು ಸಜೀವವಾಗಿ ಸುಡುತ್ತದೆ. ಇದು ಸಂಪ್ರದಾಯ ಮತ್ತು ಪ್ರತಿಗಾಮಿತನವನ್ನು ಬೆಂಬಲಿಸುತ್ತದೆ. ಸಂಪ್ರದಾಯ ಮತ್ತು ನಂಬಿಕೆಗಳಿಗೆ ಭದ್ರ ಬುನಾದಿಯಾಗುತ್ತದೆ. ಅಲ್ಲದೇ ಆಯಾ ಧರ್ಮಗಳ ಮೂಲಗ್ರಂಥಗಳಿಗೆ ಮತ್ತಷ್ಟು ಪುಷ್ಠಿ ಕೊಡುವುದರ ಮೂಲಕ ಮತಾಂಧತೆಗೆ ಕಾರಣವಾಗುತ್ತದೆ. ಅಷ್ಟೇ ಅಲ್ಲದೇ ಆಯಾ ಧರ್ಮದ ವಿಚಾರಗಳು, ಸಿದ್ಧಾಂತಗಳು ಮತ್ತು ನೈತಿಕ ಮೌಲ್ಯಗಳು ಸತ್ಯವೆಂದು ಸಾರುವುದರ ಮೂಲಕ ಧರ್ಮಗಳಲ್ಲೂ ಭಿನ್ನ ಭೇದವನ್ನು ಹುಟ್ಟುಹಾಕುತ್ತದೆ.

ಈ ರೀತಿಯಾಗಿ ಇರುವ ಮತಾಂಧತೆಯು ಮಾನವನ ಏಳಿಗೆಯನ್ನು ಬಿಟ್ಟು ಅವರವರ ನಡುವೆ ಮನುಷ್ಯಕುಲವನ್ನು ನಾಶಮಾಡುವಂತಹ ಸ್ಥಿತಿಗೆ ತಲುಪಿದ್ದರಿಂದಲೇ ಇದು ಇಪ್ಪತ್ತನೇಯ ಶತಮಾನದಲ್ಲೂ ಕಾಣಸಿಗುತ್ತದೆ. ಆದ್ದರಿಂದಲೆ ಇದೊಂದು ಅಫೀಮು ಆಗಿ ಇನ್ನೊಂದು ಧರ್ಮದ ವಿರುದ್ಧ ಕಾರಣಗಳನ್ನು ಸೃಷ್ಟಿಸಿ ಕೋಮು ಸಾಮರಸ್ಯವನ್ನು ತರುವ ಬದಲು ಕೋಮುದಳ್ಳುರಿಯನ್ನು ಎಬ್ಬಿಸುವ ಕೆಲಸವನ್ನು ನಿರ್ವಹಿಸುತ್ತದೆ. ಹೀಗಾಗಿ ಈ ಶತಮಾನದಲ್ಲೂ ಇದರ ಸ್ವರೂಪ ಉಗ್ರವಾಗಿ ಮೈದಾಳಿ ಭಯನಕವಾದ ಸಮಾಜವನ್ನು ನಿರ್ಮಾಣ ಮಾಡುತ್ತಿರುವುದು ದುರಂತವಾಗಿದೆ.

**೬.೫.ಇತಿಹಾಸದ ಕುರುಹುಗಳು:**

"ಇತಿಹಾಸವನ್ನು ಮರೆತವರು, ಇತಿಹಾಸವನ್ನು ಸೃಷ್ಟಿಸಲಾರರು" ಎಂಬ ಡಾ। ಬಿ.ಆರ್. ಅಂಬೇಡ್ಕರ್ ಅವರ ಮಾತು ಸತ್ಯದ ಸಂಗತಿ. ಗತಕಾಲದ ಧರ್ಮ-ಧರ್ಮಗಳ ನಡುವೆ ಇರುವ ಸಾಮರಸ್ಯವು ಬದುಕಿನ ವಾಸ್ತವ ಸಂಗತಿಗಳನ್ನು ಅಭಿವ್ಯಕ್ತಿಸುತ್ತವೆ. ಹೀಗಾಗಿ ಇತಿಹಾಸದ ಆಧಾರಗಳನ್ನು ಪ್ರಮುಖವಾಗಿಟ್ಟುಕೊಂಡು ಚಾರಿತ್ರಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಅಂಶಗಳನ್ನು ತಿಳಿಯುತ್ತೇವೆ. ಹೀಗಾಗಿ ಇತಿಹಾಸವು ಮರೆತುಹೋದ ಹಿಂದಿನ ವೇದನೆಗಳನ್ನು ಮೆಲಕುಹಾಕಿ ಇಂದಿನ ಬದುಕಿನ ಸಾಮರಸ್ಯಕ್ಕೂ ಕಾರಣವಾಗುತ್ತದೆ. ಚರಿತ್ರೆ ಆಗು-ಹೋಗುಗಳಿಗೆ ಈಗಿನ ಜನ ಸಮುದಾಯ ಹೊಣೆಗಾರರಲ್ಲ. ಚರಿತ್ರೆಯನ್ನು ಕುರಿತು ಹೀಗೆ ಇದ್ದಿರಬಹುದು ಅಥವಾ ಹೀಗೆ ಇತ್ತು ಎಂದು

ಹೇಳಬಹುದೇ ವಿನಃ ಹೀಗೆಯೇ ಇತ್ತೆಂದು ವಾದಿಸಲು ಆಗುವುದಿಲ್ಲ. ಹಾಗೊಂದು ವೇಳೆ ವಾದವಿದ್ದರೂ ಚಾರಿತ್ರಿಕ ಅಧ್ಯಯನಕ್ಕೆ ಅರ್ಥವಿರುವುದಿಲ್ಲ.

ಭಾರತದಲ್ಲಿ ಬ್ರಿಟಿಷರ ಪ್ರಭಾವಶಾಲಿ ಉಪಸ್ಥಿತಿಗೆ ಮೊದಲು ಕೇವಲ ಒಂದು ಹಿಂದೂ ಮುಸ್ಲಿಂ ಘರ್ಷಣೆಯ ಸುಳಿವು ಸಿಗುತ್ತದೆ. ಅವನ್ನು ನಿಜವಾದ ಅರ್ಥದಲ್ಲಿ ಕೋಮುಗಲಭೆ ಎಂದು ಕರೆಯಬಹುದು. ಈ ಗಲಭೆ ೧೭೧೪ರಲ್ಲಿ ಅಹಮದಾಬಾದಿನಲ್ಲಿ ನಡೆದಿತ್ತು. ಗಲಭೆಯ ಒಬ್ಬ ಪ್ರತ್ಯಕ್ಷದರ್ಶಿ ಖಾಫಿಖಾನ್‌ನ ವಿವರಣೆಯ ಪ್ರಕಾರ ಒಬ್ಬ ಹಿಂದೂ ತನ್ನ ನೆರೆಮನೆಯ ಮುಸಲ್ಮಾನ್‌ನ ವಿರೋಧವನ್ನು ಲೆಕ್ಕಿಸದೆ ಎರಡೂ ಮನೆಗಳೆದುರಿನ ಜಂಟಿ ಅಂಗಳದಲ್ಲಿ ಹೋಳಿಯ ದಹನದ ತಯಾರಿ ಮಾಡಿದ. ಆ ವಿವಾದದಿಂದಾಗಿ ಪ್ರಕರಣವನ್ನು ಒಬ್ಬ ಮುಸಲ್ಮಾನ್ ಅಧಿಕಾರಿ ಬಳಿ ತರಲಾಯಿತು. ಅವನು ಹಿಂದೂವಿನ ಪರವಾಗಿ ತೀರ್ಪು ನೀಡಿದ ಹಾಗೂ ಹಿಂದೂ ಹೋಳಿ ದಹನ ಮಾಡಿದ. ಮರುದಿನ ಮುಸಲ್ಮಾನ್ ಪೈಗಂಬರರನ್ನು ಗೌರವಿಸಲು ತನ್ನ ಮನೆ ಎದುರು ಒಂದು ಗೋವಿನ ಕುರ್ಬಾನಿ (ಬಲಿ) ಕೊಟ್ಟ. ಇದರಿಂದ ಕೆರಳಿದ ನೆರೆಹೊರೆಯ ಹಿಂದೂಗಳು ಒಂದು ಗೂಡಿದರು. ಹಾಗೂ ಅಲ್ಲಿದ್ದ ಮುಸಲ್ಮಾನರ ಮೇಲೆ ಹಲ್ಲೆ ಮಾಡಿದರು. ಈ ಹಲ್ಲೆಯಲ್ಲಿ ಕುರ್ಬಾನಿ ಕೊಟ್ಟ ಮುಸಲ್ಮಾನನ ಹದಿನಾಲ್ಕು ವರ್ಷದ ಮಗನ ಕೊಲೆಯಾಯಿತು. ಈ ಘಟನೆಯಿಂದ ಅನೇಕ ಮುಸಲ್ಮಾನರು ಕೆಂಡಾಮಂಡಲವಾದರು, ಒಂದೆಡೆ ಸೇರಿದರು. ನಗರದಲ್ಲಿ ನೆಲೆಸಿದ್ದ ಅಫಘಾನ್ ಸೈನಿಕರು ಕೂಡ ಅವರ ನೆರವಿಗೆ ಬಂದರು. ಮುಂದಿನ ಮೂರ್‍ನಾಲ್ಕು ದಿನಗಳ ಕಾಲ ನಡೆದ ದಂಗೆಯಲ್ಲಿ ಅಪಾರ ಸಂಪತ್ತು ನಷ್ಟವಾಯಿತು. ಹಾಗೂ ಹಲವಾರು ಹಿಂದೂಗಳು ಹಾಗೂ ಮುಸಲ್ಮಾನರ ಕೊಲೆಯಾಯಿತು. ಎರಡೂ ಕೋಮುಗಳ ನಾಯಕರು ಶಾಂತಿ ಸ್ಥಾಪನೆಗೆ ಅರಸನಲ್ಲಿ ಮನವಿ ಮಾಡಿಕೊಂಡರು.

೧೭೧೪ರಲ್ಲಿ ನಡೆದ ಅಹಮದಾಬಾದಿನ ಈ ಗಲಭೆಯ ವಿವರಗಳೊಂದಿಗೆ ದಾಖಲಾದ ಮೊದಲ ಘಟನೆಯಾಗಿದ್ದು, ಅದರಲ್ಲಿ ಕೋಮು ಗಲಭೆಯ ಎಲ್ಲ ಅವಶ್ಯಕ ಅಂಶಗಳು ಅಡಗಿವೆ. ಹೀಗೆ ನೀಡಿದ ನಿದರ್ಶನಗಳೂ ಈ ಗಲಭೆಗಿಂತ ಹೇಗೆ ಭಿನ್ನವಾಗುತ್ತವೆ ಎನ್ನುವುದನ್ನು ಅರ್ಥೈಸಿಕೊಳ್ಳಲು ನಾವು ಮಧ್ಯಯುಗದ ರಾಜ್ಯ ಹಾಗೂ ನಾಗರಿಕರ ಸಂಬಂಧಗಳು ಹಾಗೂ ಹಿಂದೂ ಮುಸಲ್ಮಾನ್ ಪ್ರಜೆಗಳ ಅಂತರ್‌ಸಂಬಂಧಗಳ ಜೊತೆ ಜೊತೆಗೆ ರಾಜ್ಯದ ಮೂಲಭೂತ ಸ್ವರೂಪವನ್ನು ಗಮನಿಸಬೇಕಾಗುತ್ತದೆ.

"ಮಧ್ಯಯುಗ ಅಥವಾ ಮುಸ್ಲಿಂರ ಆಳ್ವಿಕೆಯ ಭಾರತದ ಇತಿಹಾಸದ ಕಾಲಘಟದಲ್ಲಿನ ಹಿಂದೂ ಮುಸ್ಲಿಂ ಸಂಬಂಧಗಳನ್ನು ಗುರುತಿಸುವ ಸಂದರ್ಭದಲ್ಲಿ ಇತಿಹಾಸಕಾರರು ಹೆಚ್ಚಾಗಿ ಉತ್ಪ್ರೇಕ್ಷೆಗೆ ಮೊರೆ ಹೋಗುತ್ತಾರೆ. ಒಂದೆಡೆ ಮೊ.ಯಾಸೀನರಂಥ ಇತಿಹಾಸಕಾರರಿದ್ದಾರೆ. ಅವನ ಪ್ರಕಾರ ಮೊಗಲ್ ಆಡಳಿತದ ಹೆಚ್ಚಿನ ಅವಧಿಯಲ್ಲಿ ಹಿಂದೂಗಳು ಹಾಗೂ ಮುಸಲ್ಮಾನರ ಸದ್ಭಾವ, ಸೌಹಾರ್ದ ಹಾಗೂ ಸಹಿಷ್ಣುತೆ ಎಲ್ಲೆಲ್ಲೂ ಮೆರೆದಿತ್ತು. ಇತರ ಉತ್ಪ್ರೇಕ್ಷೆಯ ಇತಿಹಾಸಕಾರರ ಪ್ರಕಾರ ಭಾರತದ ಇತಿಹಾಸದ

ಮುಸ್ಲಿಂ ಯುಗ ಅತಿರೇಕಗಳು (ಮೂರ್ತಿಭಂಜನೆ, ಬಲಾತ್ಕಾರದ ಮತಾಂತರ, ಜಿಜಿಯಾ, ದೌರ್ಜನ್ಯ, ಕೊಲೆ ಸುಲಿಗೆ ಹಾಗೂ ಹತ್ಯಾಕಾಂಡ) ಹಾಗೂ ಅಸಹಿಷ್ಣುತೆಗೆ ಇನ್ನೊಂದು ಹೆಸರಾಗಿತ್ತು."[೧೦] ಇದಕ್ಕೆ ನಿದರ್ಶನವೆಂಬಂತೆ ಇಬ್ಬರ ವ್ಯಕ್ತಿಗಳ ಸೌಹಾರ್ದತೆಯನ್ನು ಗಮನಿಸಬಹುದು.

ಮೊಗಲ್ ಸಾಮ್ರಾಜ್ಯ ಸ್ಥಾಪನೆಯಾದ ಮೇಲಂತೂ ಭಾರತೀಯರ ಪರಮ ಧ್ಯೇಯವಾದ ಹಿಂದು ಮುಸಲ್ಮಾನರ ಭ್ರಾತೃತ್ವಭಾವವು ಪುಷ್ಟಿಗೊಂಡು ಪರಮಾವಧಿಯನ್ನು ಮುಟ್ಟಿತು. ಮೊಗಲರ ಮೂಲ ಪುರಷನಾದ ಬಾಬರನು ಇದಕ್ಕೋಸ್ಕರವೇ ಹೆಣಗಾಡಿದನು. ತನ್ನ ರಾಜನೀತಿಯ ರಹಸ್ಯವನ್ನು ತನ್ನ ಮರಣಶಾಸನದಲ್ಲಿ ಬರೆದು ಅದನ್ನು ತನ್ನ ಪ್ರೀತಿಯ ಪುತ್ರನಾದ ಹುಮಾಯೂನನ ಕೈಯಲ್ಲಿ ಇಟ್ಟನು. "ಈ ಭರತ ಭೂಮಿಯು ವಿಶೇಷವಾಗಿ ಹಿಂದುಮತದವರಿಂದ ತುಂಬಿರುವುದು. ಅವರ ಪ್ರೀತಿಯನ್ನು ಗಳಿಸುವುದು ಅತ್ಯಾವಶ್ಯಕ. ಹೆದರಿಕೆಗಳಿಂದ ಇದು ಸಾಧ್ಯವಲ್ಲ. ಉದಾರಭಾವನೆಗಳಿಂದ ಅವರ ಮನಸ್ಸನ್ನು ಒಲಿಸಿಕೊಳ್ಳುವುದೇ ಸೂಕ್ತವಾದದ್ದು. ಆದುದರಿಂದ ಗೋಹತ್ಯೆಯನ್ನು ಈ ರಾಜ್ಯದಲ್ಲಿ ನಿರ್ಭಂಧದಿಂದ ನಿಲ್ಲಿಸು; ಅವರ ಮುಖಂಡರುಗಳನ್ನು ಗೌರವಿಸು; ಹೀಗೆ ಮಾಡಿದಲ್ಲಿ ನಮ್ಮ ರಾಜ್ಯವು ಚಿರಸ್ಥಾಯಿಯಾಗುವುದು" ಹೀಗೆ ಬಾಬರನು ಅವನ ಮರಣಶಾಸನದಲ್ಲಿ ಉಪದೇಶಮಾಡಿದನು.

ಮೊಗಲರ ವೈರಿಯಾದ ಷೇರಷಹನಂತೂ ರಾಜ್ಯದಲ್ಲಿ ಹಿಂದುಗಳಿಗೂ ಮಹಮ್ಮದೀಯರಿಗೂ ಒಂದೇ ಸಮನಾದ ಅಧಿಕಾರವನ್ನೂ ಜವಾಬ್ದಾರಿಯನ್ನೂ ಕೊಟ್ಟು ಪರಸ್ಪರ ಸೌಹಾರ್ದವೆಂಬ ಚಿಲುಮೆ ಉಕ್ಕಿ ಹರಿಯುವಂತೆ ಮಾಡಿದನು. ಹಿಂದುಗಳಿಗೆ ದೊಡ್ಡ ಅಧಿಕಾರವನ್ನೂ ಕೊಟ್ಟನು. ತೋದರಮಲ್ಲನೇ ಇವರಲ್ಲಿ ಮುಖಂಡನು. ತನ್ನ ದೇಶದಲ್ಲೆಲ್ಲಿಯೂ ಹಿಂದೂಗಳಿಗೂ ಮುಸಲ್ಮಾನರಿಗೂ ಪ್ರತ್ಯೇಕವಾಗಿ ಮುಸಾಫರ್ ಖಾನೆಗಳನ್ನು ಸ್ಥಾಪಿಸಿದನು. ಹಿಂದು ಮುಸಾಫರ್ ಖಾನೆಯಲ್ಲಿ ಬ್ರಾಹ್ಮಣ ಪರಿಚಾರಕರು ನೇಮಿಸಲ್ಪಟ್ಟರು. ಸಂಸ್ಕೃತ ಭಾಷೆಗೆ ಗೌರವವು ದೊರೆಯಿತು. ಹುಕುಂನಾಮೆಗಳೂ ಫರ್ ಮಾನ್‌ಗಳೂ ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಬರೆಯಲ್ಪಟ್ಟವು. ತನ್ನ ನಾಲ್ಕು ವರ್ಷಗಳ ಆಳ್ವಿಕೆಯಲ್ಲಿ ಇವನು ಜನಗಳಿಗೆ ಮಾಡಿದ ಉಪಕಾರಗಳಿಗೂ ರಾಜ್ಯಾಡಳಿತದಲ್ಲಿ ಮಾಡಿದ ತಿದ್ದುಪಾಟುಗಳಿಗೂ ಸಮವಾದವು, ಚರಿತ್ರೆಯಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. ಚರಿತ್ರೆಯಲ್ಲಿ ಇವನಿಗೆ ಸದೃಶನಾದವನೆಂದರೆ ಬಹುಶಃ ಜೂಲಿಯಸ್ ಸೀಸರ್ ಒಬ್ಬನೇ. ಇವನ ವಂಶವು ನಿರ್ಮೂಲವಾದರೂ ಇವನ ತಿದ್ದುಪಡಿಗಳು ಬೇರೂರಿ ಇವನ ಶತ್ರುವಾದ ಅಕ್ಬರನು ಕೂಡ ಅವುಗಳನ್ನು ಅನುಸರಿಸಬೇಕಾಯಿತು.

ಅಕ್ಬರ್ ಮಹಾಶಯನು ಮುಸಲ್ಮಾನ್ ಚಕ್ರವರ್ತಿಗಳಲ್ಲಿ ಚೂಡಾಮಣಿ ಎನ್ನಬಹುದು. ಇವನ ನಿಸ್ಸೀಮ ಸಾಹಸವೂ ಕಾರ್ಯದಕ್ಷತೆಯೂ ಅದ್ವಿತೀಯ ಮೇಧಾಶಕ್ತಿಯೂ ವಿಶ್ವವ್ಯಾಪಿಯಾದ ಔದಾರ್ಯವೂ ಇಡೀ ಭಾರತಖಂಡದ ಜನರಲ್ಲೆಲ್ಲಾ ಆಶ್ಚರ್ಯಗೊಳಿಸಿತು. ಇವನ ಕೀರ್ತಿ ದಿಗಂತದವರೆಗೂ ವ್ಯಾಪಿಸಿತು.

ಇಂಥ ಮಹಾಪುರುಷನ ಅವತಾರವು ಭಾರತೀಯರ ಪುಣ್ಯವೆಂದು ನಿರ್ವಿವಾದವಾಗಿ ಹೇಳಬಹುದು. ಅರ್ಧಶತಮಾನದ ಆಡಳಿದಲ್ಲಿ ಭರತ ಭೂಮಿಯ ಜೀವನದಲ್ಲಿ ಉದಾತ್ತವಾದ ಧ್ಯೇಯಗಳೂ ನೆಲಸಿದವು. ಇವನು ದೂರದರ್ಶಿಯೂ ದಯಾಳುವೂ ಧೀರನೂ ಆದ ರಾಜನೀತಿ ನಿಪುಣನೆಂದು ಚಿಕ್ಕವಯಸ್ಸಿನಲ್ಲಿಯೇ ಪ್ರಖ್ಯಾತಿ ಪಡೆದನು. ಆದ್ದರಿಂದಲೇ ಇವನು ಹೇಮುವನ್ನು ಕೊಲ್ಲಲು ಹೇಸಿದನು. ಹಿಂದುಗಳ ಮೇಲಿನ ತೆರಿಗೆಗಳನ್ನು ವಜಾಮಾಡಿದನು. "ರಾಜಪುತ್ರರೊಡನೆ ಸ್ನೇಹ ಸಂಬಂಧವನ್ನು ಬೆಳಸಿದನು. ಸಾಮಾನ್ಯ ಜನರ ಸೌಖ್ಯವೇ ತನ್ನ ಸೌಖ್ಯವೆಂದು ತಿಳಿದು ಹಗಲಿರುಳೂ ಒಂದೇ ಸಮನಾಗಿ ದುಡಿದನು. ಇವನು ಮಾಡಿದ ನೆಲಗಂದಾಯದ ಏರ್ಪಾಡು ರೈತರಿಗೆ ಕ್ಷೇಮವನ್ನೂ ರಾಜನಿಗೆ ಕೀರ್ತಿಯನ್ನೂ ತಂದವು. ಇವನ ಧರ್ಮಸುಧಾರಣೆಗಳಂತೂ ಇವನ ಕೀರ್ತಿಯನ್ನು ಶಾಶ್ವತಗೊಳಿಸಿದವು. ಅಸಹನೀಯವಾಗಿದ್ದ ಮತವೈಷಮ್ಯಗಳನ್ನು ಹೋಗಲಾಡಿಸಿ ಏಕಧರ್ಮವನ್ನು ಪಾಲಿಸುವ ಒಂದು ಜನಾಂಗವನ್ನು ನಿರ್ಮಾಣ ಮಾಡುವುದಕ್ಕೋಸ್ಕರ "ದೀನಿ ಇಲ್ಲಾಹಿ" ಮತವನ್ನು ಸ್ಥಾಪಿಸಿದನು. ಸಂಕುಚಿತ ಮನಸ್ಕರಾದ ಅವನ ಸಮಕಾಲೀನರಿಗೆ ಇದು ಸರಿಹೋಗಲಿಲ್ಲ. ಇದರಿಂದ ಈ ಮಹಾತ್ಮನ ಉತ್ಕೃಷ್ಟವಾದ ಆಸೆಯು ನಿರಾಶೆಯಾಯಿತು. ಆದರೂ ರಾಜಕೀಯದಲ್ಲಿ ಅಕ್ಬರನು ಹಾಕಿದ ಮೇಲ್ಪಂಕ್ತಿಯು ಸ್ಥಿರವಾಯಿತು. ಮುಸಲ್ಮಾನ ರಾಜ್ಯದಲ್ಲಿ ಹಿಂದುಗಳಿಗೆ ಅಭಿಮಾನವೂ ಉತ್ಸಾಹವೂ ಹುಟ್ಟಿದವು. ಹಿಂದು ಮುಸಲ್ಮಾನರಲ್ಲಿ ಸೌಹಾರ್ದವು ವೃದ್ಧಿಗೊಂಡಿತು."[10]

ಆದರೆ ಭಾರತದ ಕಥೆ ಸಂಘರ್ಷದ್ದೇ ಅಲ್ಲ. ಅದು ಸಂಪೂರ್ಣವಾಗಿ ಸಾಮರಸ್ಯದ್ದಾಗಿದೆ. ಪರಸ್ಪರ ಹತ್ತಿರ ಬದುಕಬೇಕಾದವರು ಕೊಡುಕೊಳ್ಳುವಿಕೆಯನ್ನು ಮಾಡಲೇಬೇಕಾಗುತ್ತದೆ. ಕುಷಾಣರ ಕೊಡುಗೆಯಾದ ಪೈಜಾಮಿಗೆ ಅಧುನಿಕ ರೂಪ ಕೊಟ್ಟವರು ಮುಸ್ಲಿಂಮರು; ಇಂದಿನ ಹಿಂದು ಮಹಿಳೆಯರಿಗೆ ಪರಮ ಪವಿತ್ರವಾದ ಮೂಗಿನ ನತ್ತು ಮುಸ್ಲಿಂರದ್ದಾಗಿದೆ. ಇಂಥ ಸಾಮರಸ್ಯದ ಅತ್ಯುನ್ನತ ದಾಖಲೆಯೇ 'ದೀನ್ ಎ ಇಲಾಹಿ'; ಬಾಬರನೇ ತನ್ನ ಮಗನಿಗೆ ಹಿಂದುಗಳನ್ನು ಪ್ರೀತಿ ಸೌಹಾರ್ದತೆಯಿಂದ ನೋಡಿಕೊಳ್ಳಬೇಕೆಂದು ಹೇಳಿದ್ದನು. ಅದು ಮೊಮ್ಮಗ ಅಕ್ಬರನಲ್ಲಿ ಫಲಿಸಿತು. ಹಿಂದೂ – ಮುಸ್ಲಿಂರ ಧರ್ಮದ ಒಳಿತಿನ ಅಂಶಗಳನ್ನು ತೆಗೆದು ಕಸಿ ಮಾಡಿದ ಪಂಥವೇ 'ದೀನ ಎ ಇಲಾಹಿ; ಅಕ್ಬರ್ – ಬೀರಬಲ್‌ರ ಕಥೆಯಂತೂ ಜನಜನಿತವಾಗಿದೆ. ಇಂಥ ಸಾಮರಸ್ಯದ ಅತ್ಯುನ್ನತ ಉದಾಹರಣೆಯಾಗಿ ಟಿಪ್ಪು ಸುಲ್ತಾನನನ್ನು ಗಮನಿಸಬೇಕು. ಮರಾಠರು (ಹಿಂದುಗಳು) ಶೃಂಗೇರಿ ಮಠವನ್ನು ಸುಲಿದಾಗ ಅದರ ಹಾನಿಯನ್ನು ತುಂಬಿಕೊಟ್ಟು ಪ್ರಸಾದ ಸ್ವೀಕರಿಸಿ, ರಾಜ್ಯದ ಒಳಿತಿಗಾಗಿ ಪ್ರಾರ್ಥನೆ ಮಾಡಲು ಸ್ವಾಮಿಗಳನ್ನು ವಿನಂತಿಸಿಕೊಂಡವನು ಟಿಪ್ಪು.

"ಅಕ್ಬರನು ಫತ್ತೇಪುರಸಿಕ್ರಿಯಲ್ಲಿ ಕಾಣುವ ರಜಪೂತ ರೀತಿ, ಲೋಕವನ್ನೇ ಸೂರೆಗೊಂಡಿರುವ ಅದ್ಭುತ ಕಲಾಕೃತಿ ತಾಜ್‌ಮಹಲ್‌ನಲ್ಲಿ ಮೈದಾಳಿದ ಹಿಂದೂ ಪಂಚರತ್ನ ರೀತಿಯ ವಿನ್ಯಾಸ ಇವು ಮುಸ್ಲಿಂನ ಇರಾನಿ ಶಿಲ್ಪರೀತಿಗೆ ತೊಡಿಸಿದ ಭಾರತೀಯ ಶಿಲ್ಪಕಲೆಯ ಮುಕುಟಗಳು ಎಂದು ರಾಷ್ಟ್ರಕವಿ

ಕುವೆಂಪು ಅನ್ನುತ್ತಾರೆ. ಸೂಫಿ ಪಂಥ ಹಿಂದು- ಮುಸ್ಲಿಂ ತತ್ವಜ್ಞಾನದ ಸಾಮರಸ್ಯದ ಸಂಕೇತ. ಉಪನಿಷತ್ತಿನ ತತ್ವಜ್ಞಾನ ಆಕರ್ಷಿಸಿದೆ; ಇಸ್ಲಾಂ ಧರ್ಮದ ಬಂಧುತ್ವ, ಸಾಮಾಜಿಕ ವ್ಯವಸ್ಥೆ ಹಿಂದುಗಳನ್ನು ಆಕರ್ಷಿಸಿದೆ. ಸತ್ಯದ ಸಾಕ್ಷಾತ್ಕಾರಕ್ಕಾಗಿ ಔರಂಗಜೇಬನಂಥ ಸರ್ವಾಧಿಕಾರಿಯನ್ನೇ ಸೂಫಿಗಳು ಎದುರುಹಾಕಿಕೊಂಡಿದ್ದಾರೆ.

ಮುಸ್ಲಿಂ ಶಿಶುನಾಳ ಶರೀಫರಿಗೆ ಗೋವಿಂದ ಭಟ್ಟ ಗುರುವಾದರೆ ಹಿಂದು ಮಹಿಪತಿದಾಸನಿಗೆ ಮುಸ್ಲಿಂ ಸೂಫಿ ಗುರುವಾಗಿದ್ದಾರೆ. ಅಮೀರಖುಸ್ರೊ ಹಿಂದು – ಇರಾನಿ ರಾಗಗಳನ್ನು ಕಸಿ ಮಾಡಿ ಅನೇಕ ರಾಗಗಳನ್ನು ಕಂಡುಹಿಡಿದನು. ಇವನೇ ಸಿತಾರವನ್ನು ಕಂಡುಹಿಡಿದವನು ಎನ್ನುತ್ತಾರೆ. ಅರಬಿ ಮತ್ತು ಹಿಂದೂ ಸಂಗೀತದ ಸಂಗಮದಿಂದಲೇ ಹಿಂದೂಸ್ಥಾನಿ ಎಂದು ಕರೆಯುವ ಷಹನುಂಗ್ ಎಂಬ ಸಂಗೀತ ಸಿದ್ಧವಾಯಿತು ಎನ್ನುವುದು ತಜ್ಞರ ಅಭಿಪ್ರಾಯ. ಅಕ್ಬರನ ಆಸ್ಥಾನದಲ್ಲಿ ಪ್ರಸಿದ್ಧನಾಗಿದ್ದ ತಾನ್‌ಸೇನ್ ಹರಿದಾಸ ಸ್ವಾಮಿಯ ಶಿಷ್ಯನೂ, ಸೂರದಾಸನ ಮಿತ್ರನೂ ಆಗಿದ್ದನಂತೆ."[೨]

ಕೆಲ ಬುದ್ಧಿಜೀವಿಗಳು ತಾವು ಹೆಸರು ಪಡೆಯಲು ಚರಿತ್ರೆಯನ್ನು ಪ್ರಬಲ ಕೋಮಿನವರ ಪರವಾದ ವಾದವನ್ನು ಮಂಡಿಸುತ್ತಾರೆ. ಈ ಮೂಲಕ ಅದನ್ನು ಇಂದಿನ ಸಮಾಜಕ್ಕೆ ಅಪಥ್ಯವಾಗುವ ರೀತಿಯಲ್ಲಿ ಚಿತ್ರಿಸುತ್ತಾರೆ. ಯಾವುದೇ ಒಂದು ಪಂಥಕ್ಕೆ ಬೆಂಬಲ ಸೂಚಿಸುವ ಬುದ್ಧಿಜೀವಿಗಳು ಇನ್ನೊಂದು ಪಂಥದ ವಿರುದ್ದ ತೆಗಳುವಿಕೆಯನ್ನು ಮಾಡುವುದು ಕಾಣತ್ತೇವೆ. ಆ ಮೂಲಕ ಎರಡೂ ಸಮುದಾಯಗಳು ಘರ್ಷಣೆಗೆ ಇಳಿಯುವ ಸ್ಥಿತಿಯನ್ನು ತರುವಲ್ಲಿ ಚರಿತ್ರೆಯನ್ನು ತಿರಿಚುವಿಕೆಯಿಂದ ಮಾಡುತ್ತಾರೆ. ಅಂತೆಯೇ ಚಾರಿತ್ರಿಕ ಸನ್ನಿವೇಶಗಳ ಮೂಲಕ ಜನಮಾನಸದಲ್ಲಿ ಇನ್ನೊಂದು ಮತದ ಬಗೆಗೆ ದ್ವೇಷ ಅಸೂಯೆಗಳು ಹುಟ್ಟುವಂತೆ ನೈಜತೆಯನ್ನು ಮರೆಮಾಚಿ ಘರ್ಷಣೆಗಳನ್ನು ಸೃಷ್ಟಿಸುವ ಕೆಲಸಗಳನ್ನು ಮಾಡುತ್ತಾರೆ.

ಆಯಾ ಧಾರ್ಮಿಕ ಪಂಥಗಳು ತಮ್ಮ ಧಾರ್ಮಿಕ ಸಂಘಟನೆಗಳ ಮೂಲಕ ಸದಸ್ಯರನ್ನು ಒಳಗೊಂಡಿರುವುದು ಇಂದಿನ ಗಲಭೆಗಳಿಗೆ ಹಾಗೂ ಸೌಹಾರ್ದತೆಯು ವಿಫಲವಾಗಲು ಮತ್ತೊಂದು ಪ್ರಮುಖ ಅಂಶ. ಜನಸಾಮಾನ್ಯರು ಯಾರೂ ಸಹ ಧಾರ್ಮಿಕ ಅವಘಡಗಳಿಗೆ ಪ್ರಥಮವಾಗಿ ಸ್ಪಂದಿಸುವುದಿಲ್ಲ. ಕೆಲವು ಧಾರ್ಮಿಕ ಸಂಘಟನೆಗಳ ಸದಸ್ಯರುಗಳು ಇಂತಹ ಕ್ರಿಯೆಗಳಿಗೆ ಹುರಿದುಂಬಿಸಿ ಜನರಲ್ಲಿ ಒಂದು ರೀತಿಯ ಉದ್ವೇಗಕ್ಕೆ ಕಾರಣವಾಗುವ ಸನ್ನಿವೇಶಗಳನ್ನು ಸೃಷ್ಟಿಸುತ್ತಾರೆ. ಇದುವೇ ಹಲವು ಅನಾಹುತಗಳಿಗೆ ದಾರಿಮಾಡಿಕೊಡುತ್ತದೆ.

**೬.೬.ರಾಜಕೀಯ ಕಾರಣಗಳು :**

ಯಾವುದೇ ಒಂದು ಧಾರ್ಮಿಕ ಪಂಗಡವನ್ನು ತಮ್ಮೆಡೆಗೆ ಸೆಳೆಯಲು ಆ ಮೂಲಕ ರಾಜಕೀಯ ಪಕ್ಷವನ್ನು ಅಧಿಕಾರದಲ್ಲಿಡಲು ಕೆಲವು ಪಕ್ಷಗಳು ತಮ್ಮ ಹಲವು ಕಾರ್ಯ ತಂತ್ರದಲ್ಲಿ ಹಲವು

ಯೋಜನೆಗಳನ್ನು ಹಾಕಿಕೊಂಡಿರುತ್ತವೆ. ತಮ್ಮ ಪಕ್ಷದ ಮುಖ್ಯ ಧ್ಯೇಯಕ್ಕೆ ಒಂದು ಧಾರ್ಮಿಕ ಪಂಥಕ್ಕೆ ಒತ್ತೆಯಾಗಿಟ್ಟುಕೊಂಡಿರುತ್ತವೆ. ಅಲ್ಲದೇ ಧಾರ್ಮಿಕ ಪಂಥಕ್ಕೆ ಬೆಂಬಲವನ್ನು ಸೂಚಿಸುವ ನೆಪದಲ್ಲಿ ಆಯಾ ಧಾರ್ಮಿಕ ವ್ಯಕ್ತಿಯನ್ನು ರಾಜಕೀಯ ಮುಖ್ಯಸ್ಥನಾಗಿ ನೇಮಿಸುವ ಹುನ್ನಾರವು ನಡೆಯುತ್ತದೆ. ಅಷ್ಟೇ ಅಲ್ಲದೇ ಕೆಲವು ಘಟನೆಗಳಿಗೆ ಸಂಬಂಧಿಸಿದಂತೆ ಮೀನಾಮೇಶ ತಂತ್ರದ ಹೇಳಿಕೆಗಳನ್ನು ಬಿತ್ತರಿಸುವುದರ ಮೂಲಕ ತಾವು ಆ ಧರ್ಮದ ಬೆಂಬಲಕ್ಕೆ ಇದ್ದೇವೆ ಎಂದು ಬಿಂಬಿಸಿಕೊಳ್ಳುತ್ತವೆ. ಇದನ್ನೇ ಸಂದರ್ಭಕ್ಕೆ ತಕ್ಕಂತಹ ಅವಕಾಶವಾದಿತನ ಎಂದು ಹೇಳಬಹುದು.

ಇಂತಹ ಪಕ್ಷದಲ್ಲಿ ದೇಶ, ದೇಶಕ್ಕಿಂತಲೂ ಸಮುದಾಯ, ಸಮುದಾಯಕ್ಕಿಂತಲೂ ಜನ, ಜನಕ್ಕಿಂತಲೂ ಸರ್ಕಾರ, ಸರ್ಕಾರಕ್ಕಿಂತಲೂ ಪಕ್ಷ, ಪಕ್ಷಕಿಂತಲೂ ತಾನು ಎಂಬ ಸಿದ್ಧಾಂತವು ಅವರೋಹಣ ಕ್ರಮದಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುತ್ತವೆ. ಹಾಗಾಗೀ ಇದೊಂದು ರೀತಿಯ ಸ್ವಾರ್ಥವಾದ ರಾಜಕಾರಣ ಎನ್ನಬಹುದಾಗಿದೆ. ಯಾವ ಸಮುದಾಯದಿಂದ ತನ್ನ ಅಧಿಕಾರವನ್ನು ಉಳಿಸಿ ಹಾಗೂ ಗಳಿಸಿಕೊಳ್ಳುವಿಕೆಯ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಇಂತಹ ಹಲವು ಕಾರ್ಯತಂತ್ರಗಳನ್ನು ಹಲವು ಪಕ್ಷಗಳು, ತಮ್ಮ ಧ್ಯೇಯವಾನ್ನಾಗಿ ಬಳಸಿಕೊಂಡಿರುತ್ತವೆ. ಆ ಮೂಲಕ ಕೆಲವು ಸಮುದಾಯಗಳನ್ನು ಉದ್ರಿಕ್ತಗೊಳಿಸುವ ಯೋಜನೆಯಲ್ಲಿ ತೊಡಗಿರುತ್ತವೆ. ಹಾಗೆಯೇ ಕೆಲವು ಧಾರ್ಮಿಕ ಸಂಘಟನೆಗಳು ಸಹ ರಾಜಕೀಯ ಪಕ್ಷಗಳನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿರುತ್ತವೆ. ಇಂತಹ ಸಂದರ್ಭದಲ್ಲಿ ಜನರು ನೈಜ ಹಾಗೂ ವಾಸ್ತವವನ್ನು ಸಹಿಸಿಕೊಂಡು ಪಕ್ಷಗಳಿಗೆ ಬೆಂಬಲವನ್ನು ಕೊಡಬೇಕಾದ ಅನಿವಾರ್ಯತೆಯಿದೆ. ಇಲ್ಲದಿದ್ದಲ್ಲಿ ರಾಜಕೀಯ ಅನಾಚಾರಗಳು ನಡೆದಲ್ಲಿ ಅದಕ್ಕೆ ಯಾರು ಹೊಣೆಗಾರರಲ್ಲ.

ಇತಿಹಾಸವನ್ನು ನಾವು ಸ್ವಲ್ಪ ತಿರುಗಿ ನೋಡಿದಾಗ ಹಿಂದೂ ಮತ್ತು ಮುಸ್ಲಿಂರ ಸಂಬಂಧಗಳ ಪರಿಕಲ್ಪನೆಯು ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಮೇಲಿನ ಸ್ಥೂಲ ಚಿತ್ರಣದಿಂದ ಕ್ರಿಶ. ೧೦ನೇ ಶತಮಾನಕ್ಕಿಂತ ಪೂರ್ವದಲ್ಲಿಯೇ ಅರಬ್ ವರ್ತಕರು ಮತ್ತು ಧರ್ಮ ಪ್ರಚಾರಕರು ಕನ್ಯಾಕುಮಾರಿಯಿಂದ ಹಿಂದೂಕುಶ್‌ವರೆಗೂ ಭಾರತಾದ್ಯಂತ ಹರಡಿಕೊಂಡಿದ್ದರು ಎನ್ನುವುದು ವೇದ್ಯವಾಗುತ್ತದೆ. ಘಜ್ನಿ ಮಹಮ್ಮದ್‌ನು ಒಂದಾದ ಮೇಲೊಂದರಂತೆ ತನ್ನ ದಂಡಯಾತ್ರೆಯನ್ನು ಪ್ರಾರಂಭಿಸುವದಕ್ಕಿಂತ ಮೊದಲೇ ಎರಡು ಶತಮಾನಗಳಿಗೂ ಹಿಂದಿನ ಸಮಯದಿಂದ ಅವರು ಹಿಂದೂಗಳೊಡನೆ ಅತ್ಯಂತ ನಿಕಟವಾಗಿ ಬಾಳುತ್ತಿದ್ದರು. ಎಲ್ಲೆಲ್ಲೊ ರಾಜರು ಅವರಿಗೆ ಅನುಕೂಲವಾಗಿದ್ದದನ್ನು ನಾವು ಕಾಣುತ್ತೇವೆ. ವ್ಯಾಪಾರದ ದೃಷ್ಟಿಯಿಂದ ಅವರು ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಗಮನಾರ್ಹವಾದ ನೆರವನ್ನು ನೀಡಿದರು. ಮತ್ತು ರಾಜ್ಯದ ಬೊಕ್ಕಸವನ್ನು ತುಂಬಿದರು. ಅವರು ದೊರೆಯ ಮಂತ್ರಿಗಳಾಗಿ ಮತ್ತು ಸಲಹೆಗಾರರಾಗಿ ಕೆಲಸಮಾಡಿದರು.

ತಾವು ಬಯಸುವ ಯಾವುದೇ ಉಪಕಸುಬನ್ನು ಆರಿಸಿಕೊಂಡು ಜೀವನ ಮಾಡಲು ಅವರಿಗೆ ಸ್ವಾತಂತ್ರ್ಯವಿತ್ತು. ಜನರು ಮತಾಂತರವಾಗುವುದನ್ನು ತಡೆಯಲು ಯಾವುದೇ ದಂಡವಾಗಲಿ ನಿರ್ಬಂಧವಾಗಲಿ ಇರಲಿಲ್ಲ. ಈ ವಸಾಹತು ನಿವಾಸಿಗಳು ಈ ದೇಶದ ಹೆಂಗಸರನ್ನು ಸಹಜವಾಗಿ ಮದುವೆಯಾಗುತ್ತಿದ್ದರು. ಇದರಿಂದ ಮಿಶ್ರ ಸಂತತಿ ಮತ್ತು ಸ್ಥಳೀಯ ಮತಾಂತರಗಳ ಸಮುದಾಯ ಜೊತೆ ಜೊತೆಗೆ ಬೆಳೆಯುತ್ತಿದ್ದಿತು. ಎರಡು ಶತಮಾನಗಳ ಅವಧಿಯಲ್ಲಿ ಇದು ಗಣನೀಯ ಪ್ರಮಾಣವನ್ನು ತಲುಪಿರಬೇಕು. ಪರಕೀಯ ಆಕ್ರಮಣದ ಸಮಯದಲ್ಲಿ ಆಕ್ರಮಣಕಾರರು ಹಿಂದೂಗಳಾಗಿ ಅಥವಾ ಮುಸ್ಲಿಂರಾಗಲಿ, ಈ ಮುಸ್ಲಿಂರು ತಮ್ಮ ರಾಜನ ಪರವಾಗಿ ಮತ್ತು ರಾಜನಿಗಾಗಿ ಹೋರಾಡುತ್ತಿದ್ದರು. ಅನೇಕ ರಾಜರ ಸೇವೆಯಲ್ಲಿ ಮುಸ್ಲಿಂ ಸೇನಾಪಡೆಗಳು ಮತ್ತು ಸೇನಾಪತಿಗಳು ಇರುತ್ತಿದ್ದರು.

ಮುಸ್ಲಿಂ ದೊರೆಗಳ ಸೇನೆಗಳಲ್ಲಿ ಹಿಂದೂ ತುಕಡಿಗಳು, ದಳಪತಿಗಳು ಇರುತ್ತಿದ್ದರು. ಘಜ್ನಿಯ ಸೇನೆಯಲ್ಲಿ ಮಹಮ್ಮದನ ಕಾಲಕ್ಕಿಂತ ಮೊದಲೇ ಹಿಂದೂ ತುಕಡಿಗಳು ಹಾಗೂ ಅನೇಕ ಹಿಂದೂ ಸೇನಾಪತಿಗಳು ಇದ್ದರು. ಇದೆಲ್ಲದರ ಹೊರತಾಗಿಯೂ ಅನೇಕ ಕಡೆಗಳಲ್ಲಿ ಮುಸ್ಲಿಂರು ತಮಗಾಗಿಯೇ ಸಣ್ಣ ಸಣ್ಣ ಸ್ವತಂತ್ರ ಸಂಸ್ಥಾನಗಳನ್ನು ರೂಪಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರು ಎಂಬುದನ್ನು ನಾವು ನೋಡಬಹುದು. ಮುಸ್ಲಿಂರ ಆಳ್ವಿಕೆಯಲ್ಲಿದ್ದ ಸಿಂದ್ ಮತ್ತು ಮುಲ್ತಾನ್ ಪ್ರದೇಶಗಳಲ್ಲಾಗಲಿ ಹಿಂದೂ ದೊರೆಗಳ ಆಳ್ವಿಕೆಯಲ್ಲಿದ್ದ ಇತರ ಪ್ರದೇಶಗಳಲ್ಲಾಗಲಿ, ಪ್ರಜೆಗಳನ್ನು ನೋಡಿಕೊಳ್ಳುವಾಗ ಅವರ ಧರ್ಮದ ಕಾರಣದಿಂದ ಪಕ್ಷಪಾತದಿಂದ ವಿಧಿಸುತ್ತಿದ್ದ 'ಬ್ರದರಿ' ಮತ್ತು ತೆರಿಗೆಗಳಿಗೆ ಪರ್ಯಾಯವಾಗಿ ಮುಸ್ಲಿಂರು ಒಂದು ಸಾಮಾನ್ಯ ತೆರಿಗೆಯನ್ನು ನೀಡುತ್ತಿದ್ದರು. ಆದರೆ ಈ ಎರಡು ತೆರಿಗೆ ಪದ್ಧತಿಗಳಲ್ಲಿ ತೆರಿಗೆಯ ಹೊರೆ ತೀರಾ ವ್ಯತ್ಯಾಸವಾಗುವ ಸಂಭವವಿರಲಿಲ್ಲ. ಏಕೆಂದರೆ ಜಿಜಿಯಾ ಒಂದು ಲಘು ತೆರಿಗೆ. ಮಹಮ್ಮದೀಯರಿಂದ ಸಂಗ್ರಹಿಸುತ್ತಿದ್ದ ಜಕಾತಿಗಿಂತಲೂ ಲಘುವಾಗಿದ್ದ ತೆರೆಗೆ.

**೬.೭ ಸಾಹಿತ್ಯಾವಲೋಕನ :**

"ದೇಶದಲ್ಲಿ ಕೋಮುವಾದ ಬೆಳೆಯಲು ನಮ್ಮ ರಾಜಕಾರಣಿಗಳು ಬಹುದೊಡ್ಡ ಕೊಡುಗೆಯನ್ನು ಕೊಟ್ಟಿದ್ದಾರೆ. ಅವರಿಂದ ದೇಶಕ್ಕೆ ಅಂಟಿದ ಪಾಪದ ಕಲೆಯನ್ನು ತೊಳೆಯುವ ಕಾರ್ಯ ಸಾಹಿತ್ಯದಿಂದ ಆಗಬೇಕಾಗಿದೆ. ಇದರಲ್ಲಿ ಅವರ ಕೇವಲ ಸ್ವಾರ್ಥ ಅಡಗಿದೆ ಎಂಬುದನ್ನು ಜನಸಾಮಾನ್ಯರಿಗೆ ತಿಳಿಸಿಕೊಡುವ ಮೂಲಕ ಕೋಮುಭಾವನೆಯ ದ್ವೇಷವನ್ನು ಕಡಿಮೆಮಾಡಲು ಸಾಧ್ಯವಿದೆ."[೧೩]

ಹಿಂದಿನಿಂದಲೂ ನಮ್ಮ ಕವಿಗಳು ಜಾತೀಯತೆಯನ್ನು ವಿರೋಧಿಸುತ್ತ ಮಾನವೀಯ ನೆಲೆಯಲ್ಲಿ ಸಮಾಜವನ್ನು ಕಟ್ಟುವತ್ತ ಪ್ರಯತ್ನಿಸಿದ್ದಾರೆ. ಆದಿಕವಿ ಪಂಪ ಒಂಭತ್ತನೆಯ ಶತಮಾನದಲ್ಲಿಯೇ 'ಮಾನವ ಕುಲಂ ತಾನೊಂದೆ ವಲಂ' ಎಂದು ಸಾರಿದ್ದಾನೆ. ಅವನ ತರುವಾಯ ಬಂದ ಮಹಾಕಾವ್ಯದ ಕವಿಗಳು

ತಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ಇಂತಹ ನುಡಿಮಿಂಚುಗಳನ್ನು ಕಥೆಯೊಂದಿಗೆ ಸಮ್ಮಿಳಿತಗೊಳಿಸುತ್ತ ಸಮಾನತೆಗಾಗಿ ಹಂಬಲಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಮೂಡಿಬಂದ ವಚನಕಾರರು ಮತ್ತು ವಚನ ಸಾಹಿತ್ಯ ಕೋಮುವಾದದ ವಿರುದ್ಧ ಚಳುವಳಿಯನ್ನೇ ಹೂಡಿತು. ಮೂಢನಂಬಿಕೆ, ಧಾರ್ಮಿಕ ಡಂಬಾಚಾರ, ವರ್ಗವ್ಯವಸ್ಥೆಯನ್ನು ವಿರೋಧಿಸುತ್ತ ಸಮಾನತೆಯ ಸಮಾಜಕ್ಕಾಗಿ ವಚನಕಾರರು ಹೋರಾಡಿದರು. ಇಂದಿನ ಬಂಡಾಯ ಕವಿಗಳಂತೆ ಕಾಣುವ ವಚನಕಾರರು ಇಂದು ಶರಣರಾಗಿ, ಅವರ ರಚನೆಗಳು ಶರಣ ಸಾಹಿತ್ಯವಾಗಿ ಇಂದು ಹೊಸ ಜಾತಿ, ಹೊಸ ಧರ್ಮ ಹುಟ್ಟಿಕೊಂಡಿದ್ದು ವಿಪರ್ಯಾಸ. ವರ್ಗ ವ್ಯವಸ್ಥೆಯನ್ನು ನಾಶಪಡಿಸಲು ಹೋರಾಡಿದವರ ಪ್ರಯತ್ನದ ಫಲ ಈ ಮೊದಲು ಇರುವ ಜಾತಿಗಳೊಂದಿಗೆ ಇನ್ನೊಂದು ಜಾತಿಯ ಹುಟ್ಟಿಗೆ ಕಾರಣವಾಗಿದ್ದು ವಾಸ್ತವ ಸಂಗತಿ. ಬದುಕನ್ನು ಹಸನಾಗಿಸಲು ಚಿಂತಕರು, ವಿಚಾರವಾದಿಗಳು ಸಾರಿದ ಚಿಂತನೆಗಳೂ, ಉಕ್ತಿ–ಉಪದೇಶಗಳು ಮತ್ತೊಂದು ಧರ್ಮದ ಉದಯಕ್ಕೆ ಕಾರಣವಾಗುವುದು. ಅವರು ಆ ಧರ್ಮದ ಸಂಸ್ಥಾಪಕರಾಗುವುದು ಮತ್ತೊಂದು ಜಾತಿ ಹುಟ್ಟಿಕೊಳ್ಳುವುದು, ಸಮಾಜದ ವಿಘಟನೆಗೆ ಕಾರಣವಾಗುವುದು ನಿರಂತರ ನಡೆದುಕೊಂಡು ಬಂದಿರುವ ಕ್ರಿಯೆ.

ವಚನಕಾರರ ನಂತರ ದಾಸರು ತಮ್ಮ ಕಿರ್ತನೆಗಳ ಮೂಲಕ ಅಸಮಾನತೆಯನ್ನು, ಜಾತೀಯತೆಯನ್ನು ಖಂಡಿಸುತ್ತ ಸಮಾನತೆಯ ಜಾಗೃತಿ ಕಾರ್ಯವನ್ನು ಮಾಡಿದರು. ಸರ್ವಜ್ಞ ತ್ರಿಪದಿಗಳ ಮೂಲಕ ಜಾತೀಯ ಮೇಲಾಟವನ್ನು ಕೊನೆಗಾಣಿಸಲು ಪ್ರಯತ್ನಿಸಿದ. ಶಿಶುನಾಳ ಶರೀಫ, ಗುರುಗೋವಿಂದ ಭಟ್ಟರು ಕೋಮುಭ್ರಮೆಯನ್ನು ಬಿಡಿಸುವ ಮಾಂತ್ರಿಕರಾಗಿದ್ದಾರೆ. ಈ ನಡುವೆ ಆಯಾ ಕಾಲಕ್ಕೆ ಮೂಡಿಬಂದ ಜಾನಪದ ಕಾವ್ಯ, ಕಥೆಗಳ ಮೂಲಕ ಅನಾಮಧೇಯ ಜಾನಪದ ಕವಿಗಳು ಜಾತೀಯತೆಯ ವಿರುದ್ಧ ದನಿ ಎತ್ತಿದ್ದಾರೆ. ಆಧುನಿಕ ಕಾಲಕ್ಕೆ ಬಂದಾಗ ಆಧುನಿಕ ಕಾವ್ಯ, ಕಥೆ, ಕಾದಂಬರಿ, ನಾಟಕಗಳ ಮೂಲಕ ಕವಿಗಳು, ಸಾಹಿತಿಗಳು ಕೋಮುವಾದದ ವಿರುದ್ಧ ಲೇಖನಿ ಬಳಸಿದ್ದಾರೆ. ಬಹುಸಂಖ್ಯಾತ ಲೇಖಕರು ಕಾವ್ಯದಲ್ಲಿ ಸಮಾನತೆಗೆ ಪ್ರೇರಿಸುವ ಕವನಗಳನ್ನು ರಚಿಸಿದ್ದಾರೆ. ಜಾತೀಯತೆಯನ್ನು ಇಡಿಯಾಗಿ ವಸ್ತುವಾಗಿ ಇರಿಸಿಕೊಂಡು ರಚಿತವಾದ ದಲಿತ ಮತ್ತು ದಲಿತೇತರ ಬಹುಸಂಖ್ಯಾತ ಲೇಖಕರ ಕಾದಂಬರಿಗಳು, ನಾಟಕಗಳು, ಕಥೆಗಳು ವಿರಳ. ಇವರ ಕೃತಿಗಳಲ್ಲಿ ದಲಿತ ಸಂಜಾತ ಸಮಸ್ಯೆಯ ಚಿತ್ರಣವಿದೆ. ಕೋಮು ಸಮಸ್ಯೆಯನ್ನು ಕುರಿತು ಯು.ಆರ್. ಅನಂತಮೂರ್ತಿ ಅವರ ನೀಳ್ಗತೆ 'ಬರ' ಮತ್ತು ಪೂರ್ಣ ಚಂದ್ರ ತೇಜಸ್ವಿಯವರ ಕಾದಂಬರಿ 'ಚಿದಂಬರ ರಹಸ್ಯ' ವಿಶುಕುಮಾರ ಅವರ 'ಕರಾವಳೀ ಎಂಬ ಕಾದಂಬರಿ ಉಲ್ಲೇಖನೀಯವಾಗಿದೆ.

ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ಅಲ್ಪಸಂಖ್ಯಾತ ಲೇಖಕರು ತಮ್ಮ

– ಮುಸ್ಲಿಂ

ಕೋಮುವಾದವನ್ನು ಗಾಢವಾಗಿ ಚಿತ್ರಿಸಿದ್ದಾರೆ. ಇವರಲ್ಲಿ ಮಹ್ಮದ ಕುಂಯಿ, ಫಕೀರ ಮುಹ್ಮದ ಕಟ್ಪಾಡಿ,

ಸಾರಾ ಅಬೂಬಕರ, ಕೆ.ಎಸ್.ನಿಸಾರ ಅಹ್ಮದ್, ಎಂ.ಅಕ್ಬರ ಅಲಿ, ಬಿ.ಎ.ಸನದಿ, ಅಬ್ದುಲ್ ರಶೀದ, ಅಬ್ಬಾಸ ಮೇಲಿನಮನಿ ಪ್ರಮುಖರಾಗಿದ್ದಾರೆ. ಇವರು ತಮ್ಮ ಕಥೆ ಕಾದಂಬರಿ, ಲೇಖನಗಳ ಮೂಲಕ ಕೋಮು ಘರ್ಷಣೆಗಳ ಸ್ವರೂಪ, ನಿರರ್ಥಕತೆ, ಅಪಾಯವನ್ನು ತಿಳಿಸುತ್ತ ಜನರಲ್ಲಿ ಸಮಾನತೆಯನ್ನು, ಮಾನವೀಯ ಗುಣಗಳನ್ನು ಎಚ್ಚರಿಸುವ ಕಾರ್ಯ ಮಾಡುತ್ತಿದ್ದಾರೆ. ಇವರ ಕೃತಿಗಳ ಮೂಲಕ ಮುಸ್ಲಿಂ ಬದುಕಿನ ವಿವಿಧ ಮುಖಗಳು ಸಾಹಿತ್ಯಲೋಕಕ್ಕೆ ಪರಿಚಿತವಾದವು. ಜನಸಾಮಾನ್ಯ ಮುಸ್ಲಿಂರು ಎಲ್ಲರಂತೆ ಹಲವು ಸಮಸ್ಯೆಗಳಲ್ಲಿ ಬಳಲುತ್ತಿದ್ದಾರೆ. ಅನಕ್ಷರತೆ, ಬಡತನ, ಮೂಢನಂಬಿಕೆಗಳು ಬಹುಸಂಖ್ಯಾತರಲ್ಲಿ ಹೇಗೊ ಹಾಗೆಯೇ ಅವರ ಬದುಕನ್ನೂ ಕಾಡುತ್ತಿವೆ ಎಂಬ ಸಂಗತಿಗಳು ಚಿರಪರಿಚಿತವಾದವು. ಈ ಲೇಖಕರ ಜೊತೆಗೆ ಬಹುಸಂಖ್ಯಾತ ಲೇಖಕರೂ ಕೋಮು ಸಮಸ್ಯೆಯನ್ನು ಕುರಿತು ಹೆಚ್ಚೆಚ್ಚು ಬರೆದಾಗ ಓದುಗರ ಮೇಲೆ, ಹೆಚ್ಚಿನ ಪ್ರಭಾವ ಉಂಟಾಗಬಲ್ಲುದು. ಎಲ್ಲ ಮತಧರ್ಮದವರ ಮೂಲಭೂತವಾದಿ ಮನೋಭಾವವನ್ನು ಖಂಡಿಸುತ್ತ, ದೇಶದ ಒಳ ಮತ್ತು ಹೊರಗಿನ ಎಲ್ಲ ಬಗೆಯ ಉಗ್ರವಾದಿತನವನ್ನು ವಿರೋಧಿಸುತ್ತ, ಜನತೆಯನ್ನು ಮಾನವೀಯ ನೆಲೆಯಲ್ಲಿ ನಿಲ್ಲಿಸುವಂತಹ ಕಾರ್ಯ ಮಾಡುತ್ತ ಮತ್ತು ದೇಶವನ್ನು ಸರ್ವ ಜನಾಂಗದ ಶಾಂತಿಯ ತೋಟವಾಗಿಸುವ ಶಕ್ತಿ ಸಾಹಿತ್ಯಕ್ಕೆ ಇದೆ.

**೬.೮. ಆಧ್ಯಾತ್ಮಿಕ ಸಾಮರಸ್ಯ :**

ಕೋಮು ಸಾಮರಸ್ಯ ಅಥವಾ ಸೆಕ್ಯೂಲರಿಸಂ ಎಂಬುದನ್ನು ನಮ್ಮ ಸಂವಿಧಾನವು ಯಾವ ಧರ್ಮವನ್ನು ರಾಷ್ಟ್ರಧರ್ಮವೆಂದು ಸ್ವೀಕರಿಸಲಿಲ್ಲ. ಧರ್ಮದ ಕುರಿತಾಗಿ ಅದರದ್ದೇ ಆದ ಲೌಕಿಕ ದೃಷ್ಟಿಯಿರುವುದು ಕಾಣುತ್ತೇವೆ.. ಆದರೂ ರಾಷ್ಟ್ರದ ಎಲ್ಲಾ ಧರ್ಮಗಳಿಗೂ ಆಚರಣೆಯ ಸ್ವಾತಂತ್ರ್ಯದ ಖಾತ್ರಿಯನ್ನು ನೀಡಲಾಗಿದೆ. ಧಾರ್ಮಿಕ ಅಥವಾ ನಾಸ್ತಿಕ ಆಚರಣೆಯನ್ನು ಅವರವರ ಆತ್ಮಸಾಕ್ಷಿಗೆ ಬಿಡಲಾಗಿದೆ. ಆದರೆ ಭಾರತ ಹಿಂದೂ ರಾಷ್ಟ್ರವಾಗಬೇಕೆಂಬ ಹುಯಿಲನ್ನೆಬ್ಬಿಸಿ, ಕೋಮು ಗಲಭೆಯನ್ನು ಪ್ರಚೋದಿಸುವ ನಿಟ್ಟಿನಲ್ಲಿ ಹಿಂದೂ ಘನತೆ ನಾಶವಾಗಿದೆಯೆಂದು ಮಧ್ಯಕಾಲಿನ ಚರಿತ್ರೆ ಯ ದಾಖಲಾತೆಯನ್ನು ಎತ್ತಿ ಹೇಳಿದ್ದಾರೆ. ಮುಸ್ಲಿಂ ವಿರುದ್ಧ ಹಿಂದೂಗಳ ಭಾವವನ್ನು ಉದ್ರೇಕಗೊಳಿಸುವಲ್ಲಿ ತಮ್ಮ ಧರ್ಮ ಅಪಾಯದಲ್ಲಿದೆ, ಎಂದು ಹೇಳುತ್ತಾರೆ. ಒಂದೆಡೆ ಮುಸ್ಲಿಂರ ಪವಿತ್ರ ಕುರಾನಿನ ಒಂದೊಂದು ವಾಕ್ಯ ಸತ್ಯ ಎಂದು ಹೇಳುತ್ತಲೇ 'ತಲಾಕ್' ಬುರುಕ್' ದಂಥ ಅಮಾನವೀಯ ನಡತೆಯನ್ನು ಸಮರ್ಥಿಸಿಕೊಂಡು ತಮ್ಮವರನ್ನು ಪ್ರಗತಿಯಿಂದ ಹಿಂದಕ್ಕೆ ತಳ್ಳುವ ಮುಸ್ಲಿಂರೂ ಅಭದ್ರತೆಯಲ್ಲಿ ಬದುಕುವ ಪರಿಸ್ಥಿತಿಯನ್ನು ತಂದಿಡುವವರೂ ಇದ್ದಾರೆ.

ಹಿಂದೂ, ಮುಸ್ಲಿಂರು ಸರಿ ಸುಮಾರು ಐದನೂರು ವರ್ಷ ಒಟ್ಟೊಟ್ಟಾಗಿ ಬದುಕಿದರೂ ಮತ್ತು ಈ ಬದುಕಿನಲ್ಲಿ ಉಂಟಾದ ಕೊಡು, ಪಡೆ, ಕಲೆ, ಸಂಸ್ಕಾರ, ತೋರಿದ ಸಂಘರ್ಷ, ಸಾಮರಸ್ಯದ ಚರಿತ್ರೆಯನ್ನು ಬಾಳಿನ ಒಳಿತಿನ ದೃಷ್ಟಿಯಿಂದ ನೋಡಲು ಕಲಿಯುವುದೇ ಇಲ್ಲ. ಇವರಿಗೆ ಇತಿಹಾಸವೆಂಬುದು ಧಾರ್ಮಿಕ ಪುನರುಜ್ಜೀವನದ ನೆಪದಲ್ಲಿ ಕೋಮು ದ್ವೇಷದ ಬೆಂಕಿಯನ್ನು ಹರಡಲು

ಬೇಕಾದ ಕಿಡಿಗಳ ಆಕರವಾಗಿದೆ. ಇವರಿಗೆ ಚರಿತ್ರೆ ಏಕತೆಯಿಂದ ವಿವಿಧತೆಯ ಕಡೆಗೆ, ಸಂಕುಚಿತೆಯಿಂದ ವಿಶಾಲತೆಯ ಕಡೆಗೆ ಸಂಘರ್ಷದಿಂದ ಸಾಮರಸ್ಯದ ಕಡೆಗೆ ವಿನ್ಯಾಸಗೊಂಡಿರುವ ರೀತಿಯ ಅರಿವೇ ಆಗುವುದಿಲ್ಲ. ಆದರೆ ನಮ್ಮ ಸಂದರ್ಭ ಅಂದರೆ ಭಾರತೀಯ ಪ್ರಜಾಪ್ರಭುತ್ವದ ಸಂದರ್ಭ ಸಂವಿಧಾನ ರಚನೆಯ ಅಂತಿಮ ಸಭೆಯಲ್ಲಿ ಡಾ॥ ಅಂಬೇಡ್ಕರ್ ಹೇಳಿದ "ನಮಗೆ ನಾವೇ ಸ್ವಾತಂತ್ರ್ಯವನ್ನು ರಕ್ಷಿಸುತ್ತೇವೆ. ಎಂದು ನಮ್ಮ ಧರ್ಮ, ಪಕ್ಷಗಳೆ ರಾಷ್ಟ್ರಕ್ಕಿಂತ ಹೆಚ್ಚಿನದೆಂದು ಗ್ರಹಿಸುತ್ತೆವೆಯೋ ಆಗ ನಮ್ಮ ಸ್ವಾತಂತ್ರವನ್ನು ಕಳೆದುಕೊಳ್ಳುತ್ತೇವೆ.

'ದೇವನೊಬ್ಬ ನಾಮ ಹಲವು' ಎಂಬ ಉಕ್ತಿ ಆಧ್ಯಾತ್ಮಿಕತೆಯ ಸಾಮರಸ್ಯವನ್ನು ಬಿಂಬಿಸುತ್ತದೆ. ಹಿಂದೂ ಮತ್ತು ಮುಸ್ಲಿಂ ಧರ್ಮಗಳು ಉತ್ತಮ ನೆರೆ- ಹೊರೆಯವರಾಗಿ ಬಾಳಬೇಕೆ ಹೊರತು ಯಾವ ಧರ್ಮದಲ್ಲಿ ಬಿನ್ನ ಭೇದ ಸೃಷ್ಟಿಸುವಂತಹ ವಿಚಾರಗಳು ಇಲ್ಲವೆಂಬ ಮಾತನ್ನು ಸಾಧು ಸಂತರು ಸೂಫಿಗಳು ಗುರುತಿಸಿರುವುದನ್ನು ಕಾಣುತ್ತೇವೆ. ನಾವೆಲ್ಲ ಹಿಂದೂಗಳು, ಹಿಂದೂಸ್ಥಾನ ನಮ್ಮ ಮಾತೃಭೂಮಿಯೆಂದು ನಂಬಿದ ಧರ್ಮಗಳು ಸಾಮರಸ್ಯದ ಪ್ರತೀಕವಾಗಿವೆ ಎಂಬ ಮಾತಿಗೆ ಕವಿ ಇಕ್ಬಲ್ ಹೀಗೆ ಹಾಡಿದ್ದಾರೆ.

"ತುಮ್ ರಾಮ್ ಕಹೋ, ವೋ ರಹೀಮ್ ಕಹೇ,
ದೋನೊಂ ಕೀ ಗರಬ್ ಅಲ್ಲಾಹ ಸೇ ಹೈ.
ತುಮ್ ದೀನ ಕಹೋ, ವೋ ಧರಮ್ ಕಹೇ,
ಮನ್‌ಷಾ ತೋ ಉಸೀ ಕೀ ರಾಹ್ ಸೇ ಹೈ,
ತುಮ್ ಇಷ್ಕ್ ಕಹೋ, ವೋ ಪ್ರೇಮ್ ಕಹೇ,
ಮತಲಬ್ ತೋ ಉಸೀ ಕೀ ಚಾಹ್ ಸೇ ಹೈ,
ವೋ ಯೋಗಿ ಹೋ, ತುಮ್ ಸಾಲಿಕ್ ಹೋ,
ಮಕ್‌ಸದ್ ದಿಲ್-ಉ-ಆಗಾಹ್ ಸೇ ಹೈ,
ಕೋಂ ಲಡತಾ ಹೈ, ಮೂರಖ್ ಬಂದೇ,
ಯೇ ತೆರೀ ಖಾಮ್ ಖಯಾಲೀ ಹೈ,
ಹೈ ಪರ್ ಕೀ ಜಡ್ ತೋ ಏಕ್ ವಹೀ
.ಹರ್ ಮಝುಬ್ ಏಕ್ ಎಕ್ ಡಾಲೀ ಹೈ"

ಈ ಮೇಲಿನ ಪದ್ಯವನ್ನು ಗಮನಿಸಿದಾಗ ರಾಮ, ರಹೀಮ, ಧರ್ಮ, ದೀನ್, ಪ್ರೇಮ್, ಇಷ್ಕ್ ಸಾಲಿಕ್, ಯೋಗಿ ಎಲ್ಲವೂ ಒಂದಲ್ಲ ಒಂದು ಅರ್ಥದಲ್ಲಿ ಒಂದೇ. ಆದರೆ ನಾವು ಧರ್ಮದ ಸಾಮರಸ್ಯವನ್ನು ಮೂಲೆಗಿಟ್ಟು, ಕೋಮುದಳ್ಳುರಿಗೆ ದಾರಿಮಾಡಿಕೊಡುತ್ತಾ ಕದನ-ಜಗಳವನ್ನು ಹಚ್ಚುವ ಮೂರ್ಖರಾಗುತ್ತೇವೆ. ಈ ಎಲ್ಲಾ ಧರ್ಮಗಳು ದೇವರೆಂಬ ತಾಯಿಯ, ರೆಂಬೆಕೊಂಬೆಗಳು ಎಂದು

ನುಡಿಯುವುದರ ಮೂಲಕ ಸಾಮರಸ್ಯದ ಮೂಲಕ ಆಧ್ಯಾತ್ಮಿಕ ಸಾಮರಸ್ಯಗಳ ಮೂಲವಾಗಿವೆ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಅನೇಕ ಸಾಧು ಸಂತರು, ಸೂಫಿಗಳು ಹಾಗೂ ಶರಣರು ತಮ್ಮ ಸೈದಾಂತಿಕ ನಿಲುವುಗಳನ್ನು ಪ್ರತಿಪಾದಿಸಿರುವುದನ್ನು ಕಾಣುತ್ತೇವೆ.

ಕೊಪ್ಪಳ ಜಿಲ್ಲೆಯು ಕನ್ನಡ ನಾಡಿನಲ್ಲಿ ವಿಶಿಷ್ಟವಾದ ಸಂಸ್ಕೃತಿ, ಸಾಹಿತ್ಯವನ್ನು ಹೊಂದಿದೆ. ಕನ್ನಡ ನಾಡಿನ ಹೈದ್ರಾಬಾದ್ ಕರ್ನಾಟಕವು, ಕರ್ನಾಟಕದ ಉಳಿದ ಪ್ರದೇಶಗಳಿಗಿಂತ ಸಾಹಿತ್ಯ ಧರ್ಮ ಸಮಾಜ, ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಬಹುಮುಖಿ ಚಿಂತನೆಯನ್ನು ಒಳಗೊಂಡಿದೆ. ಸಾಹಿತ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಭದ್ರ ಬುನಾದಿಯಾದರೆ ಧರ್ಮದ ದೃಷ್ಟಿಯಿಂದ ಮಾನವ ಪರ, ಜೀವಪರ ಕಾಳಜಿಗಳನ್ನು ಒಂದೆಡೆ ತಂದಂತಹ ಕೀರ್ತಿ ಸಲ್ಲುತ್ತದೆ. ಸಮಾಜ ಮತ್ತು ಸಾಂಸ್ಕೃತಿಕವಾಗಿ ಈ ಪ್ರದೇಶವು ಕನ್ನಡ ನಾಡಿಗೆ ಕೊಟ್ಟ ಕೊಡುಗೆ ಅಮೂಲ್ಯವಾದದ್ದಾಗಿದೆ. ಆದರೂ ದುರಂತವೆಂದರೆ ಆರ್ಥಿಕ ಮತ್ತು ಶೈಕ್ಷಣಿಕವಾಗಿ ತೀರಾ ಹಿಂದುಳಿದ ಪ್ರದೇಶವೆಂಬ ಹಣೆ ಪಟ್ಟಿಯನ್ನು ಕಟ್ಟಿಕೊಂಡು ತೀರಾ ಹಿಂದೂಳಿದಿರುವುದನ್ನು ಇಂದಿಗೂ ಕಾಣುತ್ತೇವೆ. ಈ ಪ್ರದೇಶವು ವಿಭಿನ್ನ ಧರ್ಮಗಳ; ವಿಭಿನ್ನ ಸಂಸ್ಕೃತಿಯ ವಿಭಿನ್ನ ಸಂಪ್ರದಾಯದ ಆಚರಣೆಗಳನ್ನು ಆಚರಿಸುವಂತ ಸಂದರ್ಭದಲ್ಲಿ ಏಕತೆಯನ್ನು ಮೆರೆಯುತ್ತದೆ.

## ಅಡಿ ಟಿಪ್ಪಣಿ

೧. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಪರಂಪರೆ ಸಂಪುಟ–೧ ಪುಟ–ಪೀಠಿಕೆ XIII

೨. ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಪುಟ–೨೧೧

೩. ಕೋ.ಚೆನ್ನಬಸಪ್ಪ, ಭಾರತದಲ್ಲಿ ಕೋಮುದ್ವೇಷ ಪುಟ–೧೨೨

೪. ಹಸನ್ ನಯೀಂ ಸುರಕೋಡ (ಅನು), ಕೋಮುಗಲಭೆಗಳು ಹಾಗೂ ಭಾರತದ ಪೋಲೀಸರು ಪುಟ–೫೩–೫೪

೫. ಹಸನ್ ನಯೀಂ ಸುರಕೋಡ (ಅನು), ಕೋಮುಗಲಭೆಗಳು ಹಾಗೂ ಭಾರತದ ಪೋಲೀಸರು ಪುಟ–೩೪

೬. ಮೈನುದ್ದೀನ ರೇವಡಿಗಾರ, ಕೋಮುವಾದ ನಾಸ್ತಿಕತೆ ಮತ್ತು ಪುಟ–೧

೭. ಮೈನುದ್ದೀನ ರೇವಡಿಗಾರ, ಕೋಮುವಾದ ನಾಸ್ತಿಕತೆ ಮತ್ತು ಪುಟ–೨

೮. ಈಶ್ವರ ಚಂದ್ರ, (ಅನು) ಕೋಮುವಾರು ಸಮಸ್ಯೆ ಪುಟ– ೮೯

೯. ಈಶ್ವರ ಚಂದ್ರ, (ಅನು) ಕೋಮುವಾರು ಸಮಸ್ಯೆ – ಪುಟ–೧೬೦–೧೬೧

೧೦. ಹಸನ್ ನಯೀಂ ಸುರಕೋಡ (ಅನು), ಕೋಮುಗಲಭೆಗಳು ಹಾಗೂ ಭಾರತದ ಪೊಲೀಸರು ಪುಟ– ೧೭

೧೧. ವಿ. ರಾಘವೇಂದ್ರ ರಾವ್, ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರುಗಳು– ಪುಟ–೧೩–೧೪

೧೨. ಎಮ್.ಎಸ್.ಪಾಟೀಲ್, ಆಯ್ದ ವೈಚಾರಿಕ ಪ್ರಬಂಧಗಳು– ಪುಟ– ೭೨–೭೩

೧೩. ಮೈನುದ್ದೀನ ರೇವಡಿಗಾರ, ಕೋಮುವಾದ ನಾಸ್ತಿಕತೆ ಮತ್ತು... ಪುಟ – ೩೪

೧೪. ಈಶ್ವರ ಚಂದ್ರ, (ಅನು) ಕೋಮುವಾರು ಸಮಸ್ಯೆ ಪುಟ – ೧೫೪–೧೫೫

# ಅಧ್ಯಾಯ – ೭

## ಸಮರೋಪ ಹಾಗೂ ಅಧ್ಯಯನದ ಫಲಿತಗಳು

ಕನ್ನಡ ನಾಡಿನಲ್ಲಿ ಕೊಪ್ಪಳ ಜಿಲ್ಲೆಯು ವಿಶಿಷ್ಟವಾದ ಸಂಸ್ಕೃತಿ, ಸಾಹಿತ್ಯ ಮತ್ತು ಪರಂಪರೆಯನ್ನು ಹೊಂದಿದೆ. ಕನ್ನಡ ನಾಡಿನ ಸಾಹಿತ್ಯದ ಬಹುಮುಖ್ಯ ಸೃಷ್ಟಿ ಇಲ್ಲಿಂದಲೇ ಆಯಿತು. ಕನ್ನಡದ ಮೊಟ್ಟಮೊದಲ ಕೃತಿ ಶ್ರೀವಿಜಯನ ಕವಿರಾಜಮಾರ್ಗ, ಬ್ರಾಜಿಷ್ಣುವಿನ ಆರಾಧನಾ ಕರ್ಣಾಟಟೀಕಾ, ಶಿವಕೋಟ್ಯಾಚಾರ್ಯನ ವಡ್ಡಾರಾಧನೆ, ತಿರುಳ್ಗನ್ನಡ ಪ್ರದೇಶ, ಪಂಪ, ನಾಗಚಂದ್ರರಂತಹ ಕವಿಗಳು, ಬಸವಾದಿ ಶಿವಶರಣರ ವಚನಗಳು, ಸ್ವರವಚನಗಳು, ಹರಿದಾಸರ ಕೀರ್ತನೆಗಳು, ಸೂಫಿ ಕವಿಗಳ ಕಾವ್ಯಗಳು, ಪುರಾಣ ಮಹಾಕಾವ್ಯಗಳಂತಹ ಶ್ರೇಷ್ಠವಾದ ಜನಪದ ಸಾಹಿತ್ಯ ಹಾಗೂ ತತ್ವಪದ ಸಾಹಿತ್ಯವು ಇಲ್ಲಿ ರಚನೆಗೊಂಡಿದೆ.

ಈ ನಾಡನ್ನು ಪ್ರಾರಂಭದಲ್ಲಿ ಶಾತವಾಹನರು ಆಳಿದ್ದಾರೆ. ಈ ವಂಶಕ್ಕೆ ಸಂಬಂಧಿಸಿದ ೫೫೩೪ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಕೊಪ್ಪಳ ತಾಲ್ಲೂಕಿನ ಚಿಕ್ಕಸಿಂದೋಗಿಯಲ್ಲಿ ದೊರೆತಿರುವುದನ್ನು ಇಲ್ಲಿ ನೆನೆಯಬಹುದು. ಕದಂಬವಂಶ ಸ್ಥಾಪಕ ಮಯೂರಶರ್ಮನ ಒಂದು ಶಾಸನದಲ್ಲಿ ಕೊಪ್ಪಳವನ್ನು "ಕುಪಣಚಮೂ" ಎಂದು ಉಲ್ಲೇಖಿಸಲಾಗಿದೆ. ೨ನೆಯ ಪುಲಿಕೇಶಿಯ ಕಾಲದಲ್ಲಿ ಬಂದಿದ್ದ ಚೀನಾ ಪ್ರವಾಸಿ ಹುಯೆನ್‌ತ್ಸಾಂಗನು ಈ ಸ್ಥಳವನ್ನು "ಕೊಂಕಣಪುಲೋವು" ಎಂದು ಕರೆದಿದ್ದಾನೆ. ಹೀಗಾಗಿ ಈ ಸ್ಥಳ ಆ ಕಾಲದಲ್ಲಿಯೂ ಪ್ರಸಿದ್ಧಿಯನ್ನು ಪಡೆದುದಾಗಿತ್ತು ಎಂಬುದು ಸ್ಪಷ್ಟವಾಗುತ್ತಿದೆ. ಕುಕನೂರಿನ ಕಲಕೋಳಿ ಶಾಸನವು ಬಾದಾಮಿ ಚಾಲುಕ್ಯ ವಿಕ್ರಮಾದಿತ್ಯನನ್ನು ಹಲಗೇರಿಯ ಒಂದು ಶಾಸನ ವಿಜಯಾದಿತ್ಯನನ್ನು ಹೆಸರಿಸಿವೆ.

ಇಂಡಿಯಾದ ಚರಿತ್ರೆಯಲ್ಲಿ ಅಜರಾಮರವಾದ ಹೆಸರನ್ನು ಪಡೆದಿರುವ ಮೌರ್ಯ ದೊರೆ ಅಶೋಕನ ಕಾಲದ ಶಾಸನ ಜಿಲ್ಲೆಯಲ್ಲಿ ದೊರೆತಿರುವುದು ಈ ಜಿಲ್ಲೆಯ ಇತಿಹಾಸ ರಚನೆಗೆ ದೊರೆತ ಮಹತ್ವದ ಆಕರ. ಪ್ರಯಶಃ ಆ ಕಾಲಕ್ಕಾಗಲೇ ಇದೊಂದು ಪ್ರಮುಖ ಕೇಂದ್ರವಾಗಿದ್ದಿರಬಹುದು. ಏಕೆಂದರೆ ಶಿಲಾಯುಗಕ್ಕೆ ಸಂಬಂಧಿಸಿದ ಕೆಲ ವರ್ಣಚಿತ್ರಗಳೂ ಕೂಡ ಇಲ್ಲಿ ದೊರೆತಿವೆ. ಆ ಕಾಲದ ಈ ಸ್ಥಳದ ಪ್ರಸಿದ್ಧಿಯನ್ನು ಕಂಡು ಅಶೋಕನು ಇಲ್ಲಿ ಶಾಸನ ಬರೆಯಿಸಿರಬಹುದು. ನಂತರದ ಕಾಲದಲ್ಲಿ ಬಂದ ಅನ್ಯ ಧರ್ಮೀಯರಿಗೂ ಕೂಡ ಇದು ಆಕರ್ಷಣೀಯ ಸ್ಥಳವಾದಂತಿದೆ. ಇಲ್ಲಿ ಕೋಮು ಸೌಹಾರ್ದತೆಯ ಅನೇಕ ತಾಣಗಳಿವೆ. ಇದಕ್ಕೆ ಸಾಕ್ಷಿ ಎಂಬಂತೆ ಇಲ್ಲಿನ ಅನೇಕ ದರ್ಗಾಗಳು ಹಾಗೂ ಮಠಗಳು ಸೂಫಿ ಸಂತರ ತಾಣಗಳು ಇಂದಿಗೂ ಕೋಮು ಸೌಹಾರ್ದತೆಗೆ ನಿದರ್ಶನವಾಗಿ ಕಾಣುತ್ತೇವೆ. ಇವೆಲ್ಲವನ್ನು ನೋಡಿದರೆ ಈ ಸ್ಥಳವು ಧರ್ಮ ಧರ್ಮಗಳ ನಡುವೆ ಕೋಮು ಸೌಹಾರ್ದತೆಯ ಭಾವನೆಗಳನ್ನು ಮೂಡಿಸುವಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇಲ್ಲಿ ಬೇರೆ ಧರ್ಮಗಳು ತಮ್ಮ

ಧಾರ್ಮಿಕ ಸಿದ್ಧಾಂತಗಳನ್ನು ತೋರಿಸುವಲ್ಲಿ ಪ್ರಯತ್ನಿಸಿದಂತೆ ಕಂಡುಬಂದಿಲ್ಲವಾದರೂ ಕೊಪ್ಪಳವು ಬೌದ್ಧ, ಜೈನ ಮತ್ತು ಶೈವರ ಧರ್ಮಸಿದ್ಧಾಂತಗಳಿಗೆ ನೆಲೆಯನ್ನು ಕಲ್ಪಿಸಿರುವುದು ಕಾಣುತ್ತೇವೆ.

ಹೀಗಾಗಿ ಇಲ್ಲಿನ ಅನೇಕ ಕೋಮು ಸೌಹಾರ್ದತೆಯ ತಾಣಗಳು ಸರ್ವ ಸಮಾನತೆ, ಸಹೋದರತೆ, ಸಹಕಾರ ಮನೋಭಾವನೆಗಳನ್ನು ಪ್ರತಿಪಾದಿಸುವ ಸಂಕೇತಗಳಾಗಿವೆ. ಹೈದ್ರಾಬಾದ ಕರ್ನಾಟಕದ ವಿವಿಧ ಸ್ಥಳಗಳಾದ ತಿಂಥಣಿ ಮೌನೇಶ್ವರ, ಕೊಡೆಕಲ್ ಬಸವಣ್ಣ, ವಡಬಾಳದ ನಾಗನಾಥ, ಯಾನಾಗುಂದಿಯ ಮಾತೆ ಮಾಣಿಕೇಶ್ವರಿ, ಹಲಕಟ್ಟಿಯ ವೀರಭದ್ರೇಶ್ವರ ಹಾಗೂ ಸೂಫಿ ಸಂತರ ಉರುಸ್, ಖ್ವಾಜಾ ಬಂದೇ ನವಾಜ್, ಶ್ರೀ ಶರಣಬಸವೇಶ್ವರ, ಲಾಡ್ಲೆಮಾಶಾಕ, ನೀಲೂರು ಮೈಹಿಬೂಬ ಸುಬಾನಿ, ಲಾಡ್ಲ ಮಶಾಖ ಜೇವರ್ಗಿ, ಕೂಡಿ ಬಾಬ ಸಾಹೇಬ ಭಟಕರ್ೀ, ಬಾವಸಾಬ ಹೀರೇಜೇವರ್ಗಿ, ರಾಜಾ ಬಕ್ಸರ್ ಗೋನಾಳ, ಮೋನಪಯ್ಯ, ಶೇಖ ಜಿಂದಾವಲಿ ದ್ಯಾಗಾಯಿ, ರಾಜಾ ಬಕ್ಸರ್, ಬಸವಕಲ್ಯಾಣ, ಅಪ್ಪುರಿನ ಅಲ್ಲಮ ಪ್ರಭು, ಘೋಡವಾಡದ ಇಸ್ಮಾಯಿಲ್ ಖಾದ್ರಿ ಹೀಗೆ ಈ ಭಾಗದ ಹಲವು ಪುರಾಣ ಪುರುಷರ ಸ್ಥಳಗಳು ಕೋಮು ಸೌಹಾರ್ದತೆಗೆ ಹೆಸರು ಪಡೆದುಕೊಂಡಿವೆ.

ಇಂದಿಗೂ ಪ್ರತಿನಿತ್ಯದ ಜೀವನದಲ್ಲಿ ಹಾಗೂ ಹಬ್ಬ ಹರಿದಿನ ಜಾತ್ರೆಗಳಲ್ಲಿ ಸಹೋದರತೆಯಿಂದ ಸಹಕಾರದ ಮನೋಭಾವನೆಗಳಿಂದ ಕೊಡುಕೊಳ್ಳುವಿಕೆಯ ಮೂಲಕ ವಿವಿಧ ಸಂಸ್ಕೃತಿಯ ಮೌಲ್ಯಗಳನ್ನು ಅಳವಡಿಸಿಕೊಂಡು ಬಾಳುತ್ತಿರುವುದು ತುಂಬ ಸಂತಸದ ಸಂಗತಿಯಾಗಿದೆ. ಇಂತಹ ತಾಣಗಳು ಕೋಮು ಸೌಹಾರ್ದತೆಯ ಪ್ರತೀಕಗಳಾಗಿರುವುದು, ನಿಜಕ್ಕೂ ಅಭಿಮಾನ ಪಡಬೇಕಾಗಿದೆ. ಈ ಭಾಗದಲ್ಲಿ ನಡೆಯುವ ಜಾತ್ರೆಗಳು ಮತ್ತು ಉರುಸು ಕೋಮು ಸೌಹಾರ್ದತೆಗೆ ಹೆಸರು ವಾಸಿಯಾಗಿವೆ. ಪ್ರಮುಖವಾದ ಕೋಮು ಸೌಹಾರ್ದತೆಯ ತಾಣಗಳನ್ನು ಸಂದರ್ಶಿಸಿದಾಗ ಅವು ಜನಪದರ ಜೀವನಕ್ಕೆ ಯಾವ ರೀತಿಯ ಸಹಾಯವನ್ನು ಮಾಡುತ್ತಿವೆ ಎಂಬ ಅಂಶ ತಿಳಿಯುತ್ತದೆ.

ಧಾರ್ಮಿಕವಾಗಿ ಪ್ರಸಿದ್ಧಿಯನ್ನು ಪಡೆದಿರುವ ಈ ಜಿಲ್ಲೆಯು ಐತಿಹಾಸಿಕವಾಗಿಯೂ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಈ ಜಿಲ್ಲೆಯಲ್ಲಿ ಅನೇಕ ರಾಜಮನೆತನಗಳು ಆಳ್ವಿಕೆಯನ್ನು ನಡೆಸಿ ಸೌಹಾರ್ದತೆಗೆ ಪ್ರೇರಕ ಹಾಗೂ ಪೂರಕವಾಗಿ ಕಾಣಿಸಿಕೊಂಡ ಅಂಶಗಳು ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿರುವ ಸೌಹಾರ್ದತೆಯ ತಾಣಗಳು ಹಿಂದೂ ಮತ್ತು ಮುಸ್ಲಿಂರ ನಡುವೆ ಸೌಹಾರ್ದ ಭಾವನೆಯನ್ನು ತುಂಬುವಲ್ಲಿ ಸಹಕಾರಿಯಾಗಿವೆ. ಈ ದೃಷ್ಟಿಯಿಂದ ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಜಿಲ್ಲೆಯಲ್ಲಿ ಬರುವ ದರ್ಗಾ ಹಾಗೂ ಮಠಗಳ ಸ್ಥಿತಿ-ಗತಿಗಳನ್ನು ಅವಲೋಕನ ಮಾಡಿದಾಗ ಮುಖ್ಯವಾಗಿ ನಮಗೆ ವಿಭಿನ್ನ ಸಂಸ್ಕೃತಿ ಕಂಡು ಬಂದರೂ ಆಂತರಿಕವಾಗಿ ಈ ತಾಣಗಳು ಇಟ್ಟ ಹೆಜ್ಜೆ-ತೊಟ್ಟ ರೂಪ ಬಹುಮುಖ್ಯತೆಯಿಂದ ಕೂಡಿವೆ.

ಇಲ್ಲಿನ ತಾಣಗಳನ್ನು ಗಮನಿಸಿದಾಗ ವರ್ಗ, ವರ್ಣ ಹಾಗೂ ಜಾತಿವ್ಯವಸ್ಥೆಯನ್ನು ಮೀರಿ ಸಾಮಾಜಿಕ ಸೌಹಾರ್ದತೆಯನ್ನು ತರುವಲ್ಲಿ ಪ್ರಯತ್ನಿಸಿವೆ. ಈ ಜಿಲ್ಲೆಯ ಸೂಫಿ–ಸಂತರು ಹಾಗೂ ತತ್ವಪದಕಾರರು ದೇವತಾವಾದದ ನಿಲುವುಗಳನ್ನು ಸಮಾಜಮುಖಿ ನೀತಿಮಾರ್ಗದಲ್ಲಿ ನಡೆಯುವಂತೆ ಪ್ರೇರೆಪಿಸಿದ್ದಾರೆ. ಈ ಹಿನ್ನೆಲೆಯಿಂದ ಸೂಫಿಗಳು ತಮ್ಮ ವ್ಯಕ್ತಿತ್ವದ ಮೂಲಕ ಹಿಂದಿನ ಶರಣರ, ಸೂಫಿಗಳ ಹಾಗೂ ಸಂತರ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿರುವಲ್ಲಿ ಈ ಜಿಲ್ಲೆಯ ತಾಣಗಳು ಪ್ರಮುಖ ಪಾತ್ರವಹಿಸಿವೆ. ಹೀಗಾಗಿ ಹಿಂದೂ ಹಾಗೂ ಮುಸ್ಲಿಂರ ಧಾರ್ಮಿಕ ಭಾವನೆಗಳಿಗೆ ಧಕ್ಕೆ ಬರದ ಹಾಗೆ ಇಲ್ಲಿನ ದರ್ಗಾಗಳು ಶ್ರೇಷ್ಟತೆಯನ್ನು ಪಡೆದುಕೊಂಡಿವೆ.

ಕೋಟೆ ಕೊತ್ತಲಗಳಿಂದ ತುಂಬಿರುವ ಕೊಪ್ಪಳವು ಹಲವಾರು ದರ್ಗಾಗಳಿಂದಲೂ ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಹೊಂದಿ, ಇಂದಿನ ಆಧುನಿಕ ಯುಗಕ್ಕೆ ಕೋಮು ಸೌಹಾರ್ದತೆಯ ತಾಣಗಳಾಗಿ ಮೆರೆದಿದೆ. ಹೈದ್ರಾಬಾನ್–ಕರ್ನಾಟಕವು ಹಲವು ವರ್ಷಗಳವರೆಗೆ ಮುಸಲ್ಮಾನರ ಆಳ್ವಿಕೆಗೆ, ಸಂಸ್ಕೃತಿಗೆ ಒಳಗಾಗಿದ್ದ ಈ ಪ್ರದೇಶದಲ್ಲಿ ಸಹಜವಾಗಿಯೇ ಆ ಸಂಸ್ಕೃತಿಯ ಛಾಯೆ ಮೂಡಿದೆ ಎನ್ನಬಹುದು. ಇಲ್ಲಿ ಬಹುಸಂಖ್ಯಾತರ ಸಂಸ್ಕೃತಿ ಎಷ್ಟೋ ಅಂಶಗಳನ್ನು ಮುಸ್ಲಿಂರಿಂದ ಸ್ವೀಕರಿಸಿದೆ. ಮುಸಲ್ಮಾನರ ಪ್ರಸಿದ್ದ 'ಮೊಹರಂ' ಹಬ್ಬವನ್ನು ಇಲ್ಲಿ ಬಹುತೇಕ ಎಲ್ಲರೂ ಆಚರಿಸುತ್ತಾರೆ. ಹಿಂದೂ – ಮುಸ್ಲಿಂ ಭೇದ – ಭಾವವಿಲ್ಲದೆ ಕೋಮು ಸೌಹಾರ್ದತೆಯಿಂದ ಆಚರಿಸಲಾಗುತ್ತಿರುವ ಮೊಹರಂ ಹಬ್ಬವನ್ನು ಮುಸ್ಲಿಂರ ಸಂಸ್ಕೃತಿಯಿಂದ ಸ್ವೀಕರಿಸಲಾಗಿದೆ. ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ಹೈದರಾಬಾದ್ – ಕರ್ನಾಟಕ ಪ್ರದೇಶದಲ್ಲಿ ಮೊಹರಂ ಹಬ್ಬದ ಆಚರಣೆಯು ಕೇವಲ ಏಕ ಸಂಸ್ಕೃತಿ, ಏಕ ಜಾತಿಗೆ ಮೀಸಲಾಗಿರದೆ ಬಹುಸಂಖ್ಯಾತರು ಕೂಡ ಈ ಹಬ್ಬದಲ್ಲಿ ಅತ್ಯಂತ ಶ್ರದ್ದೆ, ಭಕ್ತಿಯಿಂದ ಪಾಲ್ಗೊಳ್ಳುತ್ತಾರೆ. ಮೊಹರಂ ಹಬ್ಬವನ್ನು ವಿಜೃಂಭಣೆಯಿಂದ ಬಹುಸಂಖ್ಯಾತರೂ, ಮುಸ್ಲಿಂರ ಜೊತೆಗೂಡಿ ಆಚರಿಸುವ ಸ್ಥಳಗಳಿಂದ ಕೊಪ್ಪಳ ಜಿಲ್ಲೆಯೂ ಹೊರತಾಗಿಲ್ಲ. ಅದರಲ್ಲೂ ಕೊಪ್ಪಳ ಜಿಲ್ಲೆಯ ಕುದರಿಮೋತಿ ಗ್ರಾಮದ ಮೊಹರಂ ಆಚರಣೆ ಕರ್ನಾಟಕದಲ್ಲಿಯೇ ಅತ್ಯಂತ ಹೆಸರುವಾಸಿಯಾಗಿರುವ ಮೊಹರಂ ಹಬ್ಬದ ತಾಣ.

ಕುದರಿಮೋತಿಯಲ್ಲಿ ನಡೆಯುವ ಭಾವೈಕ್ಯತೆಯ ಸಂಕೇತವಾಗಿರುವ ಮೊಹರಂ ಹಬ್ಬವನ್ನು ಕಣ್ಣಿಂದ ನೋಡುವುದೇ ಒಂದು ಹಬ್ಬ. ಒಂದು ರೀತಿಯಲ್ಲಿ ಅದ್ಭುತದಂತೆಯೂ ಕಂಡುಬರುತ್ತದೆ. ಈ ಊರಿನ ಯಾವುದೇ ಜಗಳಗಳೂ, ವ್ಯಾಜ್ಯಗಳು, ಸಂಘರ್ಷದ ವ್ಯವಹಾರ ಮೊದಲಾದವುಗಳು ಮೊಹರಂ ಸಂದರ್ಭದಲ್ಲಿ ಕಂಡುಬರುವುದಿಲ್ಲ. ಇದನ್ನು ಗಮನಿಸಿದರೆ ಮೊಹರಂ ಹಬ್ಬವನ್ನು ಕುದರಿಮೋತಿ ಹಾಗೂ ಈ ಜಿಲ್ಲೆಯ ಎಲ್ಲಾ ದರ್ಗಾಗಳ ನೆಲದಲ್ಲಿ ಆಚರಿಸುವದನ್ನು ಪಾವಿತ್ರ್ಯತೆ ಎಂದುಕೊಂಡಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಅಲ್ಲಮಪ್ರಭುವಿನ ವಚನದಂತೆ 'ಎತ್ತಣಿಂದೆತ್ತ ಸಂಬಂಧವಯ್ಯ' ಎನ್ನುವ ಹಾಗೆ ಜಿಲ್ಲೆಯ

ಕುದರಿಮೋತಿಯಲ್ಲಿ ನಡೆಯುವ ಮೊಹರಂ ಹಬ್ಬಕ್ಕೂ ರಾಜ್ಯದ ಅಲೆಮಾರಿ ಜನಾಂಗದ ವ್ಯಾಜ್ಯ, ಜಗಳ, ವ್ಯವಹಾರ, ಮದುವೆ, ಸಂಪ್ರದಾಯಗಳ ಆಚರಣೆಗೂ ಎತ್ತಣಿಂದೆತ್ತ ಸಂಬಂಧ ಎನ್ನುವದು ಒಂದು ವೈಶಿಷ್ಟವೆನಿಸಿದೆ. ಅಲ್ಲದೇ ಇವರ ಸಂಪ್ರದಾಯ, ಇಲ್ಲಿನ ಆಚರಣೆಗಳ ಬಗ್ಗೆ ಕುತೂಹಲ ಹಾಗೂ ಆಸಕ್ತಿ ಮೂಡುತ್ತದೆ.

ಮೊಹರಂ ಹಬ್ಬವನ್ನು ಊರ ಹಬ್ಬವೆಂದು ಆಚರಿಸಲಾಗುತ್ತದೆ. ಈ ಊರಿನ ಜನರು ತಮ್ಮ ತಮ್ಮ ಉರುಸ್ ಹಾಗೂ ಮೊಹರಂ ಹಬ್ಬಕ್ಕೆ ಬರುವ ಅತಿಥಿಗಳಿಗೆ ಸ್ವಂತ ಮನೆಯವರಂತೆ ಕಾಣುತ್ತಾರೆ. ಇದು ಮೊದಲಿನಿಂದಲೂ ಬಂದ ಸಂಪ್ರದಾಯವಾಗಿದ್ದು, ಮನೆಗೆ ಬಂದವರನ್ನು ಈ ಕಾಲದಲ್ಲಿಯೂ 'ಅತಿಥಿ ದೇವೋಭವ' ಎನ್ನುವ ಸತ್ಸಂಪ್ರದಾಯ ಹೊಂದಿರುವ ಕುದರಿಮೋತಿ ಹಾಗೂ ಜಿಲ್ಲೆಯ ಜನ ನಿಜಕ್ಕೂ ಅಭಿನಂದನಾರ್ಹರು. ವಿಶೇಷವಾಗಿ ಕುದುರೆಮೋತಿಯ ಜನರು ತಮ್ಮ ಮನೆಯ ಬಾಗಿಲುಗಳನ್ನು ಹಗಲು –ರಾತ್ರಿಯಿಡೀ ತೆಗೆದು ಅತಿಥಿ ಸತ್ಕಾರ ಕೈಗೊಳ್ಳುವ ಇಲ್ಲಿನ ಜನತೆಯ ಆತ್ಮೀಯತೆ ಅನಂತವಾದದು. ಅಂತೆಯೇ ಮೊಹರಂ ಹಬ್ಬದ ವಾತಾವರಣ ಒಂದು ರೀತಿಯಲ್ಲಿ ಮನೆಯವರೆಲ್ಲರೂ ಸೇರಿ ಆಚರಿಸುವಂತೆ ಕಾಣುತ್ತದೆ. ಇಲ್ಲಿ ಯಾವುದೇ ಭೇದ – ಭಾವದ, ಕುಲ – ಗೋತ್ರ, ಜಾತಿ – ವಿಜಾತಿ, ಮತ – ಭ್ರಾಂತಿಗಳ ವಿಚಾರಕ್ಕೂ ಆಸ್ಪದವಿರುವುದಿಲ್ಲ.

ಕುದರಿಮೋತಿ ಎಂದರೆ ಮೊಹರಂ ಹಬ್ಬದ ಆಚರಣೆಗೆ ಹೆಸರುವಾಸಿಯಾದ ಕೊಪ್ಪಳ ಜಿಲ್ಲೆಯ ಭಾವೈಕ್ಯತೆಯ ಸ್ಥಳ. ಶತಮಾನಗಳಿಂದಲೂ ತನ್ನ ವೈಶಿಷ್ಟ್ಯ ಮತ್ತು ಗುರುತಿನ ಪರಂಪರೆಯನ್ನು ಕನ್ನಡ ನಾಡಿನಲ್ಲಿ ಸಾರುತ್ತ, ಅಸಂಖ್ಯಾತ ಭಕ್ತಾಧಿಗಳ ಅಭಿಮಾನದ, ಭಕ್ತಿಯ ದ್ಯೋತಕವಾಗಿದೆ. ಗ್ರಾಮದ ಎಲ್ಲ ಕೋಮಿನವರೂ ಐಕ್ಯತೆಯಿಂದ, ಅನನ್ಯ ಭಕ್ತಿಯಿಂದ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತಾ ಬಂದಿದ್ದು, ಮೊಹರಂ ಆಚರಣೆಯ ಮೂಲಕ ಗತಿಸಿ ಹೋದ ದಂತಕಥೆಯ ಇತಿಹಾಸವನ್ನು ಸಾರುತ್ತಿದೆ.

ಇಲ್ಲಿ ಜಾತಿ, ಭೇದಗಳಿಲ್ಲದೇ ಸುಮಾರು ಎರಡು ಶತಮಾನಗಳಿಂದಲೂ ಉರುಸ್ ಹಬ್ಬದಾಚರಣೆ ಮಾಡಲಾಗುತ್ತಿದೆ. ಉರುಸ್ ಹಬ್ಬವು ಊರಿನ ಜನರೆಲ್ಲರಿಗೂ ಒಂದು ರೀತಿಯ ಉತ್ಸವವಾಗಿದೆ. ಇಲ್ಲಿನ ಜನರು ಮೂರು ದಿನಗಳ ಕಾಲ ಊರಿಗೆ ಬಂದವರನ್ನು ಉಪಚರಿಸುತ್ತಾರೆ. ಜೊತೆಗೆ ಈ ಮೂರು ದಿನ ರಾತ್ರಿ ಹೊತ್ತು ಮನೆಯ ಬಾಗಿಲು ಹಾಕದಿರುವ ಸಂಪ್ರದಾಯವೂ ಇದೆ. ಸಕ್ಕರೆ, ಮಾದಲಿ, ಬೆಲ್ಲದ ಮಾದಲಿ, ಚೊಂಗೆಯಂತಹ ಸಿಹಿ ತಿಂಡಿಗಳು ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲೂ ತಯಾರಾಗಿರುತ್ತವೆ.

ಕೊಪ್ಪಳ ಜಿಲ್ಲೆಯ ಅನೇಕ ತಾಣಗಳಿಗೆ ಹೋಲಿಸಿದರೆ ಕುದರಿಮೋತಿಯೊಂದಿಗೆ ಉಳಿದಂತಹವುಗಳೂ  ಅಗ್ರಗಣ್ಯ ಸ್ಥಾನದಲ್ಲಿ ನಿಲ್ಲುತ್ತವೆ. ಇಲ್ಲಿನ ಉರುಸಿನ ಇತಿಹಾಸ, ಆಚರಣೆ ದೇಶದಲ್ಲಿಯೇ ಹೆಸರು ಪಡೆದಿದೆ. ಕೊಪ್ಪಳ, ಯಲಬುರ್ಗಾ, ಕುಷ್ಟಗಿ, ಗಂಗಾವತಿ ಹೀಗೆ ಕೊಪ್ಪಳ

ಜಿಲ್ಲೆಯ ಬಹುತೇಕ ಎಲ್ಲ ತಾಲೂಕಿನ ಎಲ್ಲಾ ಗ್ರಾಮ, ಪಟ್ಟಣ, ನಗರಗಳಲ್ಲಿಯೂ ಉರುಸ್ ಹಾಗೂ ಮೊಹರಂ ಹಬ್ಬವನ್ನು ವಿಶಿಷ್ಟವಾಗಿ, ಭಾವೈಕ್ಯತೆಯ ಉತ್ಸವವಾಗಿ ಆಚರಿಸಲಾಗುತ್ತಿದೆ. ಹಬ್ಬದ ನಿಮಿತ್ಯಕ್ಕೆಂದೇ ದೇಶದ ಮೂಲೆ – ಮೂಲೆಗಳ ಜನರು ಇಲ್ಲಿಗೆ ಬರುತ್ತಾರೆ. ಅದರಲ್ಲೂ ಪ್ರತಿ ಎರಡು ವರ್ಷಗಳಿಗೊಮ್ಮೆ ಬರುವ ಅಲೆಮಾರಿ ಜನಾಂಗದ ಜನತೆ ಇಲ್ಲಿ ಒಂದು ಊರನ್ನೇ ಸೃಷ್ಟಿ ಮಾಡುವಷ್ಟು ಜನಸಾಗರದಿಂದ ಬರುತ್ತದೆ. ಇಲ್ಲಿ ತಮ್ಮದೇ ಆದ ವಿಶಿಷ್ಟ ಪರಂಪರೆ, ಸಂಪ್ರದಾಯ, ಆಚರಣೆಗಳನ್ನು ಮುಗಿಸಿಕೊಂಡು ಎಂದಿನಂತೆ ತಮ್ಮ ಮುಂದಿನ ಅಲೆಮಾರಿ ಜೀವನಕ್ಕೆ ಸಾಗ ಹಾಕುತ್ತಾರೆ.

ಹರಕೆ ಹೊತ್ತುಕೊಂಡತಹ ಭಕ್ತರು, ವಲಸೆ ಹೋದವರು ಮೊಹರಂ ಹಬ್ಬಕ್ಕಾಗಿ ಬರುತ್ತಾರೆ. ತಮ್ಮ ತಮ್ಮ ನಂಬಿಕೆಯಂತೆ ಹುಲಿಯ ವೇಷ ತೊಟ್ಟು ಭಿಕ್ಷೆ ಬೇಡುತ್ತಾರೆ. ಕರ್ನಾಟಕದ ವಿವಿಧ ಭಾಗಗಳಿಂದಲ್ಲದೇ ದೆಹಲಿ, ಬಿಹಾರ, ಗುಜರಾತ್‌ಗಳಿಂದಲೂ ಜನ ತಮ್ಮ ಹರಕೆ ತೀರಿಸುವ ಹುಲಿವೇಷ ತೊಟ್ಟು ಭಿಕ್ಷೆ ಬೇಡುತ್ತಾರೆ. ಈ ವೇಷಗಾರರು ತಮ್ಮ ಕೈಯಲ್ಲಿನ ಚಾಟಿಯಿಂದ ಜನರಿಗೆ ಮೃದುವಾಗಿ ಏಟು ಹೊಡೆದು ಗಮನ ಸೆಳೆಯುತ್ತಾರೆ. ಹೀಗಾಗಿ ಇಲ್ಲಿನ ಮೊಹರಂ ಆಚರಣೆ ದೇಶ ಪ್ರಸಿದ್ಧತೆಯನ್ನು ಪಡೆದಿದೆ.

ಅದರಲ್ಲೂ ಕೊಪ್ಪಳ ಸಿರಸಪ್ಪಯ್ಯನ ಮಠದ ಮೊಹರಂ ಆಚರಣೆ ಸುಪ್ರಸಿದ್ಧವಾಗಿದೆ. ಈ ಮಠದ ಮೊಹರಂ ಹಬ್ಬದ ಆಚರಣೆಗೆ ಹಳೆಯದಾದ ಇತಿಹಾಸವಿದೆ. ಏಕೆಂದರೆ ಕೊಪ್ಪಳದಲ್ಲಿರುವ ಎಲ್ಲಾ ದರ್ಗಾದ ಮೊಹರಂ ದೇವರುಗಳು ಈ ಮಠಕ್ಕೆ ಬಂದು ಪೂಜೆ ಸಲ್ಲಿಸುತ್ತವೆ. ಇಂತಹ ಸಂದರ್ಭದಲ್ಲಿ ಕತಲ್ ರಾತ್ರಿಯು ವಿಜ್ರಂಭಣೆಯಿಂದ ಜರುಗುತ್ತದೆ.

ಕೊಪ್ಪಳ ಜಿಲ್ಲೆಯ ಪ್ರಮುಖ ಅಂಶಗಳು : ಕೊಪ್ಪಳ ನಾಡು ಪುರಾಣಗಳ ಕಾಲದೊಂದಿಗೆ ತಳುಕು ಹಾಕಿಕೊಂಡಿದೆ. ರಾಮಯಾಣ, ಮಹಾಭಾರತ ಮೊದಲಾದ ಕುರುಹುಗಳು ಇಲ್ಲಿ ಸಿಗುತ್ತವೆ. ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದಿರುವ ಅಶೋಕನ ಶಾಸನಗಳು ಈ ಜಿಲ್ಲೆಯಲ್ಲಿ ದೊರೆಯುತ್ತವೆ. ಅಷ್ಟೆ ಅಲ್ಲದೇ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟು ತನ್ನದೇ ಆದ ಹಿರಿಮೆಯನ್ನು ಮೆರೆದಿದೆ. ಕೊಪ್ಪಳ ಜಿಲ್ಲೆಯ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ, ಸಾಹಿತ್ಯಿಕ, ರಾಜಕೀಯ, ಐತಿಹಾಸಿಕ ಹಾಗೂ ಶಾಸನಾತ್ಮಕ ಆಧಾರಗಳು ಇಲ್ಲಿದ್ದು, ಈ ಹಿನ್ನೆಲೆಯಿಂದ ನೋಡುವುದರೊಂದಿಗೆ, ಐತಿಹಾಸಿಕ ಸಂಗತಿಗಳಲ್ಲಿ ಈ ಪ್ರದೇಶವನ್ನಾಳಿದ ಪ್ರಮುಖ ಅರಸು ಮನೆತನಗಳಾದ ಶಾತವಾಹನರು, ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ವಿಜಯನಗರದ ಅರಸರು, ಮುಸ್ಲಿಂ ಅರಸರಾದ ದೆಹಲಿ ಸುಲ್ತಾನರು, ಬಹುಮನಿ ಅರಸರು, ಹೈದರಾಬಾದ ನಿಜಾಮರು–ಹೀಗೆ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಬಹುತೇಕ ಎಲ್ಲ ಅರಸು

ಮನೆತನಗಳ ಆಳ್ವಿಕೆಯನ್ನು ಇಲ್ಲಿ ಅವಲೋಕಿಸಲಾಗಿದೆ. ಈ ಅವಲೋಕನದಿಂದ ಇಲ್ಲಿನ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸ್ಥಿತಿಗತಿಗಳ ಮೇಲೆ ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಬೀರಿದ ಪ್ರಭಾವ ಅಗಾಧವಾಗಿದೆ.

ಕೋಮು ಸೌಹಾರ್ಧತೆಯ ಪರಿಕಲ್ಪನೆ : ಕೋಮುವಾದದ ಉಗಮ ಮತ್ತು ಬೆಳವಣಿಗೆ ಒಂದು ಸಂಕೀರ್ಣ ಪ್ರಕ್ರಿಯೆಯಾಗಿದ್ದು, ಇದು ವಸಾಹತು ಶಾಹೀ ನೀತಿಗಳ ಪರಿಣಾಮದಿಂದ ಹುಟ್ಟಿಕೊಂಡಿತು. ೧೮೫೭ ರ ದಂಗೆಯ ನಂತರ ಮತ್ತೊಂದು ರೀತಿಯ ಕರಾಳ ಮುಖ ಗೋಚರಿಸಿತು. ಭಾರತದಲ್ಲಿಯ ಕೋಮುವಾದಕ್ಕೆ ಮುಸ್ಲಿಂರ ವಿಶ್ವಾಸ ಘಾತಕವೇ ಕಾರಣ ಎಂಬುದು ಹಲವರ ಅಭಿಪ್ರಾಯ. ಏಕೆಂದರೆ ಬೇರೊಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಬಂದು ನೆಲೆಸುವಂತಹ ಸಂಧರ್ಭದಲ್ಲಿ ತಮ್ಮ ಸ್ಥಾನಮಾನಕ್ಕಾಗಿ ಪ್ರತಿಯೊಬ್ಬರು ಹಾತೊರೆಯುತ್ತಾರೆ.

ಇಂತಹ ಸಂಧರ್ಭದಲ್ಲಿ ಇವೆರಡರ ಮಧ್ಯೆ ನಡೆಯುವ ಸಂಘರ್ಷವನ್ನು ಕಂಡು ಬ್ರಿಟಿಷರು ಭಾರತವನ್ನು ಆಳಬೇಕೆಂಬ ಉದ್ದೇಶದಿಂದಲೇ ಭಾರತದಲ್ಲಿ ನೆಲೆಸಿರುವಂತೆ ಮುಸ್ಲಿಂರನ್ನು ಕಡೆಗಣಿಸುವ ಹಾಗೂ ಅಷ್ಟೇ ಹಿಂದುಗಳಲ್ಲಿ ಬ್ರಾಹ್ಮಣ ಹಾಗೂ ಮುಸ್ಲಿಂ ಮತ್ತು ಹಿಂದು ಎಂಬುದಾಗಿ ವರ್ಗಿಕರಣ ಮಾಡಿದರು. ಇದನ್ನರಿತ ಭಾರತೀಯರು ಬ್ರಾಹ್ಮಣರನ್ನು ಹಿಂದೂ ಧರ್ಮಕ್ಕೆ ಒಳಗೆ ಮಾಡಿಕೊಂಡು ಹಿಂದೂ ಮತ್ತು ಮುಸ್ಲಿಂ ಎಂಬ ಎರಡು ವರ್ಗಗಳನ್ನು ಸೃಷ್ಟಿಸಿಕೊಂಡರು. ಇಂತಹ ಸಂದರ್ಭದಲ್ಲಿ ಸೂಫಿಗಳ ಉಗಮ ಅವಶ್ಯವೆಸಿತು. ಕರ್ನಾಟಕದ ಖ್ಯಾತ ಸೂಫಿ ಸಂತರ ವೈವಿಧ್ಯತೆಯನ್ನು ಹಾಗೂ ಅವರ ಸಿದ್ದಾಂತಗಳನ್ನು ಚರ್ಚಿಸಿ, ಈ ಜಿಲ್ಲೆಯ ಹಲವಾರು ತಾಣಗಳನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ಕೋಮುವಾದ ಅಂದರೇನು ಎಂಬುದನ್ನು ಕುರಿತು ಆಲೋಚಿಸಲಾಗಿದೆ.

ಕೋಮು ಸೌಹಾರ್ದತೆಯ ಅರ್ಥ, ವ್ಯಾಖ್ಯಾನ ಮತ್ತು ವಿಶ್ಲೇಷಣೆ, ಕೋಮು ಸೌಹಾರ್ದತೆ ಬೆಳೆದ ಬಂದ ಬಗೆ, ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪ್ಪಯ್ಯ, ಖಾಜ ಬಂದೇನವಾಜು ಮತ್ತು ಮಂಟೇಸ್ವಾಮಿ ಅವರ ಜೀವನ ಚರಿತ್ರೆಯೊಂದಿಗೆ, ಅವರು ಕೈಗೊಂಡ ಸಾಮಾಜಿಕ ಚಿಂತನೆಯನ್ನು ತಿಳಿಸಲಾಗಿದೆ. ಕೋಮು ಸೌಹಾರ್ದತೆ ನಮ್ಮಲ್ಲಿ ಬೆಳೆದುಕೊಂಡು ಬರಲು ಪ್ರಮುಖ ಪಾತ್ರವಹಿಸಿರುವ ಸೂಫಿ–ಸಂತರ ಸಿದ್ಧಾಂತ ಮತ್ತು ಅವರ ಜೀವ–ಪ್ರೇಮಗಳ ಭಾವನೆಗಳು ಸ್ವಾಸ್ಥ ಸಮಾಜವನ್ನುಂಟು ಮಾಡುವಲ್ಲಿ ಸಹಕಾರಿಯಾಗಿವೆ. ಈ ಹಿನ್ನೆಲೆಯಿಂದಲೇ ಸೂಫಿ ಸಂತರು ಪ್ರೇಮ ಧರ್ಮಿಯರಾಗಿದ್ದಾರೆ. ಅವರಿಗೆ ಯಾವುದೇ ನಿರ್ಧಿಷ್ಟ ದೈವ ಪ್ರಮುಖವಾಗುವುದಿಲ್ಲ. ಅವರಿಗೆ ಗುರು ಮತ್ತು ತಮ್ಮ ಅನುಯಾಯಿಗಳೂ ಮುಖ್ಯರಾಗುತ್ತಾರೆ. ಆದ್ದರಿಂದಲೇ ಇವರು ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಇವರು ಕಂಡುಕೊಂಡ ಚಿಂತನೆ–ಮಂಥನೆಗಳನ್ನು ಚರ್ಚಿಸುತ್ತಾ, ರಾಜಕೀಯ, ಆರ್ಥಿಕ, ಶೈಕ್ಷಣಿಕಗಳಂತಹ ಅಂಶಗಳು ಕೋಮು ಸೌಹಾರ್ದತೆಯನ್ನು ಹೇಗೆ ಪರಿಗಣಿಸಿವೆ ಎಂಬುದನ್ನು ನೋಡಲಾಗಿದೆ.

ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ಧತೆಯ ತಾಣಗಳು: ಈ ಅಧ್ಯಾಯವು ಈ ವಿಷಯದ ಸಂಶೋಧನಾ ಕೇಂದ್ರ ಬಿಂದುವಾಗಿದೆ. ಹೀಗಾಗಿ ಈ ಜಿಲ್ಲೆಯಲ್ಲಿರುವ ದರ್ಗಾ ಹಾಗೂ ಮಠಗಳು ಕೋಮು-ಸೌಹಾರ್ದತೆಯನ್ನು ಗಟ್ಟಿಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಹಾಗೆಯೇ ಈ ಜಿಲ್ಲೆಯ ಸೂಫಿಸಂತರ ಜೀವನ ಚರಿತ್ರೆಯನ್ನು ಅವಲೋಕಿಸಿದರೆ ಸೌಹಾರ್ದ ಭಾವನೆ ಪ್ರಮುಖವಾಗುತ್ತದೆ. ಹೀಗಾಗಿ ಅವರಲ್ಲಿರುವ ಸೌಹಾರ್ಧತೆಯ ಭಾವನೆಗಳು ಹಿಂದೂ ಮತ್ತು ಮುಸ್ಲಿಂ ಕೋಮು ಸೌಹಾರ್ದತೆಗೆ ಪೂರಕವಾಗಿವೆ. ಕೋಮು-ಸೌಹಾರ್ದತೆಯ ಉಳಿಯುವಿಕೆಗೆ ಕಾರಣವಾದ ಇಲ್ಲಿನ ಸೌಹಾರ್ದ ಸಂಸ್ಕೃತಿಯನ್ನು, ಇಲ್ಲಿನ ಸಾಂಸ್ಕೃತಿಕ ಆಚರಣೆಗಳನ್ನು ನೋಡುತ್ತ ಇವುಗಳನ್ನೆಲ್ಲ ಪರಿಶೀಲಿಸಲಾಗಿದೆ.

ಕೊಪ್ಪಳದ ಸಿರಸಪ್ಪಯ್ಯನಮಠ, ಹಜರತ್‌ಮರ್ದಾನ್ ಗೈಬ್ ದರ್ಗ, ರಾಜಭಕ್ಷಿ/ಯಮನೂರಪ್ಪ, ಖಾದರಲಿಂಗ, ಜಡೆತಾತ/ಯಮನೂರಸಾಬ್ (ಹಾಲವರ್ತಿ), ಸೈಯದ್ ಷರಾಜ್ ಅಲಿ ಖಾದ್ರಿ (ಬಿಸರಳ್ಳಿ), ಯಮನೂರಸಾಬ್(ಬಹದ್ದೂರಬಂಡಿ), ಹಜರತ್ ಮುಸ್ತಾಫಾ ಖಾದ್ರಿ (ಬೆಳಗಟ್ಟಿ), ಗ್ಯಾನಪ್ಪಜ್ಜ/ಗ್ಯಾನೇಶ್ವರ (ಗುನ್ನಳ್ಳಿ) ಯಲಬುರ್ಗಾ ತಾಲೂಕಿನ ಹುಸೇನ್ ಷಾಹವಲಿ/ಫಕೀರಜ್ಜ (ತಳಕಲ್ಲ), ಮೃತ್ಯುಂಜಯ ಖಾದ್ರಿ (ಮಂಗಳೂರು), ಬಾಬ ಹಸರಫ್ ಅಲಿ (ಯಲಬುರ್ಗಾ), ಹಜರತ್ ಹುಸೇನಿ ಆಲಮ್ ದರ್ಗಾ (ಕುದರಿಮೋತಿ), ಯಮನೂರಸ್ವಾಮಿ (ಮುರಡಿ) ಗಂಗಾವತಿ ತಾಲ್ಲೂಕಿನ ಸೈಯದ್ ಮುಸ್ತಾಪ್ ಖಾದ್ರಿ (ಕಾರಟಗಿ), ಮೈಬುಸುಬಾನಿ ದರ್ಗಾ (ಚಿಕ್ಕ ಜಂತಕಲ್) ಕುಷ್ಟಿಗಿ ತಾಲೂಕಿನ ಸೈಯದ್ ಷಾಹ ಅಬ್ದುಲ್ ಹಸನ್ ಖಾದ್ರಿ (ಹನುಮಸಾಗರ), ಸೈಯದ್ ಷಾಹ ಹಮೀನುದ್ದೀನ್ ಖಾದ್ರಿ (ತಾವರೆಗೇರ) ಮುಂತಾದವರ ಜೀವನ ಚರಿತ್ರೆ ಹಾಗೂ ಇವರ ಮಠ/ದರ್ಗಾದಲ್ಲಿರುವ ವಿಶಿಷ್ಠತೆಯ ಬಹುಮುಖಿತೆಯನ್ನು ಪಡೆದುಕೊಂಡಿದೆ. ಇದು ಅವರಿಬ್ಬರ ನಡುವೆ ಎದ್ದು ಕಾಣುವ ಸೌಹಾರ್ದತೆಯ ಸಂಕೇತ.

ಕೆಲವು ಹಳ್ಳಿಗಳಲ್ಲಿ ಮುಸ್ಲಿಂರು ಇಲ್ಲವಾದರೂ ಈ ಆಚರಣೆಯನ್ನು ಹಿಂದೂಗಳು ಚಾಚೂ ತಪ್ಪದೆ ಆಚರಿಸಿಕೊಂಡು ಬರುತ್ತಿರುವ ನಿದರ್ಶನಗಳುಂಟು. ಪೀರಗಳಿಗೆ ದಿನವಿಡೀ ನೈವೇದ್ಯ ಸಮರ್ಪಣೆ ನಡೆಯುತ್ತದೆ. ಮನೆ ಮನೆಗೆ ಪಂಜುಗಳ ಮೆರವಣಿಗೆ ಬಂದಾಗ ನೀರು ನೀಡಿ ತಮ್ಮ ಮನೆಗೆ ಬರಮಾಡಿಕೊಳ್ಳುತ್ತಾರೆ. ಆ ಪೀಠಗಳಲ್ಲಿ ಹರಕೆ ಹೊರುತ್ತಾರೆ. ಈಡೇರಿದರೆ ಅವುಗಳಿಗೆ ಛತ್ರಿ – ಚಾಮರ, ದೀಪಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ರಂಜಾನ್ ಹಬ್ಬದಂದು 'ಈದ್/ಮುಬಾರಕ್' ಹೇಳುವ, ಅವರ ಮನೆಗೆ ಹೋಗಿ ಸುರಕುಂಭ ಕುಡಿಯುವ ಪರಂಪರೆ ಈಗಲೂ ಬಳಕೆಯಲ್ಲಿದ್ದು ಇಬ್ಬರ ನಡುವಿನ ಬಾಂಧವ್ಯಗಳನ್ನು ಹೆಚ್ಚಿಸಿವೆ.

ಕನ್ನಡ ನಾಡಿಗೆ ಸೂಫಿ ಹಾಗೂ ತತ್ವಪದಕಾರರ ಕೊಡುಗೆ : ತತ್ವ ಮತ್ತು ಪದ ಎರಡು ಶಬ್ದಗಳು ಸೇರಿ ತತ್ವದ ಹಾಡುಗಳಾಗಿವೆ. ಇವುಗಳನ್ನು ಭಜನೆಹಾಡು, ಏಕತಾರಿಹಾಡು, ಕೈವಲ್ಯ, ಸ್ವರವಚನ, ಆಧ್ಯಾತ್ಮ

ಪರಮಾರ್ಥಿಕ, ಅನುಭಾವ ಸಾಹಿತ್ಯವೆಂಬ ಹಲವು ಅರ್ಥಗಳಿಂದ ಕರೆಯುತ್ತ ಬಂದಿದ್ದಾರೆ. ಆದರೆ ಇವೆಲ್ಲವುಗಳು ಒಂದೇ ಎಂದು ಅನೇಕ ವಿದ್ವಾಂಸರು ಹೇಳಿದ್ದಾರೆ. ಕೆಲವರು ಇವುಗಳಲ್ಲಿ ತತ್ವಪದವೇ ಬೇರೆ ಎಂದು ಹೇಳಿದ್ದಾರೆ.

ಯಾವುದೇ ಹಂತದ ಜಾತಿ-ವರ್ಗ-ವರ್ಣ ಲಿಂಗವನ್ನು ಮೀರಿದ ತತ್ವಪದಕಾರರು ಸೌಹಾರ್ದತೆ ಸಾರಿದ್ದಾರೆ. ಅದರೊಂದಿಗೆ ಮಾನವೀಯ ಮೌಲ್ಯಗಳ ಪ್ರತಿಪಾದಕರಾಗಿ ಕಂಡಿದ್ದಾರೆ. ಇಲ್ಲಿನ ತತ್ವಪದಕಾರರಲ್ಲಿ ಮಡಿಮೈಲಿಗೆ ದೂರವಿದ್ದಂತೆ, ಶಿಷ್ಟ ಭಾಷೆಯಿಂದಲೂ ದೂರ ಉಳಿದಿದ್ದಾರೆ. ಅವರ ತತ್ವಪದಗಳು ಕನ್ನಡ ಭಾಷೆಗೆ ಮಾತ್ರ ಸೀಮಿತಗೊಳ್ಳದೇ ಉರ್ದು, ಮೋಡಿ, ಮರಾಠಿ, ತೆಲುಗು ಭಾಷೆಗಳ ಸಹಿತ ಇಲ್ಲಿ ಹೊಸತನ ಕಟ್ಟಿದ್ದಾರೆ. ಆದ್ದರಿಂದಲೇ ಹದಿನೆಂಟನೆಯ ಶತಮಾನದ ಹೊತ್ತಿಗೆ ತತ್ವಪದಕಾರರ ತತ್ವಪದಗಳ ಸುವರ್ಣಯುಗದ ಬಾಗಿಲು ತೆರೆಯಿತು. ಕೊಪ್ಪಳ ಜಿಲ್ಲೆಯ ಬಹದ್ದೂರಬಂಡಿ, ತಳಕಲ್, ಕುದ್ರಿಮೋತಿ, ಕಾರಟಗಿ, ಹನುಮಸಾಗರ, ತಾವರಗೇರಾ, ಬೆಳಗಟ್ಟಿ, ಬುಳ್ಳಾಪುರ, ಯಲಬುರ್ಗಾ, ಗಂಗಾವತಿ, ಬಿಸರಳ್ಳಿಗಳಲ್ಲಿ ಜಾತ್ರೆಯೇ ಇರಲಿ, ಇಲ್ಲವೇ ಉರುಸು ಆಗಿರಲಿ ಇಲ್ಲಿ ಎಲ್ಲ ಧರ್ಮದವರು ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಬೆರೆತಿರುವುದನ್ನು ಕಾಣಬಹುದಾಗಿದೆ.

ಸಮಕಾಲೀನತೆ ಮತ್ತು ಕೋಮು ಸೌಹಾರ್ದತೆ: ಒಂದು ಕಡೆ ಧರ್ಮ- ಧರ್ಮಗಳ ನಡುವೆ ಸಾಹಿತ್ಯ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ಕುತೂಹಲ ಮೂಡಿಸುವಂತೆ ಕಂಡು ಬಂದರೂ ಮತ್ತೊಂದೆಡೆ ಅವುಗಳ ನಡುವೆ ಎಲ್ಲೋ ಕಂಡೂ ಕಾಣದಂತೆ ಸಂಘರ್ಷ ಉಂಟಾಗಿದ್ದನ್ನೂ ಕಾಣುತ್ತೇವೆ. ಕಾರಣ ಅವರವರ ಧರ್ಮದ ಅಥವಾ ಕೋಮುವಿನ ಶ್ರೇಷ್ಠತೆಯೆಂಬುದೇ ಇಲ್ಲಿ ಮುಖ್ಯ. ಹೀಗಾಗಿ ಈ ಧರ್ಮವೆಂಬುವುಗಳು ಕೋಮುಗಲಭೆಗಳನ್ನು ಸೃಷ್ಠಿ ಮಾಡುತ್ತಿರುವದು ಶೋಚನೀಯ ಸಂಗತಿಯಾಗಿದೆ. ಯಾವ ಧರ್ಮ ಜನರ ಜೀವನದ ವಿಧಾನವನ್ನು ಸುವ್ಯವಸ್ಥೆಯಿಂದ ಕಾಪಾಡಬೇಕಿತ್ತೋ ಅಂತಹ ಧರ್ಮವನ್ನು ಒಂದು ಕೋಮು, ಮತ ಹಾಗೂ ಜಾತಿಗೆ ಸೀಮಿತಪಡಿಸಿ ಜನರ ನಡುವೆ ಸೌಹಾರ್ಧವನ್ನುಂಟುಮಾಡದೆ ಕೋಮುದಳ್ಳುರಿಯನ್ನು ಎಬ್ಬಿಸುವಂತಹ ಹಲವಾರು ದುಷ್ಟ ಶಕ್ತಿಗಳು ಜಗತ್ತಿನಲ್ಲಿ ಕಾಣುತ್ತವೆ.

ಭಾರತೀಯ ಸಂದರ್ಭದಲ್ಲೂ ಈ ಮಾತು ಒಪ್ಪುವಂತಹ ಸಂಗತಿಯೆಂದರೆ ತಪ್ಪಾಗಲಾರದು. ಏಕೆಂದರೆ, ಭಾರತವು ಮುಖ್ಯವಾಗಿ ಎಲ್ಲಾ ಧರ್ಮಗಳಲ್ಲೂ ವಿಭಿನ್ನತೆಯನ್ನು ಕಂಡರೂ ಅಂತರಂಗದಲ್ಲಿ ಹಿಂದೂ-ಮುಸ್ಲಿಂ ಕೋಮುಗಳ ನಡುವೆ ಉದ್ಭವಿಸುವಂತಹ ವಿಚಾರಗಳಿಗೆ ಕೊಡಲಿ ಪೆಟ್ಟನ್ನು ಹಾಕದೆ ಉರಿಯುವ ಬೆಂಕಿಗೆ ಎಣ್ಣೆಯನ್ನು ಸುರಿಯುವಂತಹ ಕೆಲಸವನ್ನು ಮಾಡುತ್ತಿರುವುದು ಅತ್ಯಂತ ಅಪಾಯಕಾರಿ ಸಂಗತಿಯಾಗಿದೆ.

೧. ಸತ್ಯ ಸಂಗತಿಗಳನ್ನು ಸಮಾಜದ ಮುಂದಿಡುತ್ತಿದ್ದ ಸೂಫಿ-ಸಂತರ ಕುರಿತಾದ ವಿಚಾರಗಳು, ಕೋಮು-ಸೌಹಾರ್ದತೆಯ ಪಂಥಗಳು, ಮತ್ತು ಅವುಗಳ ತಾಣಗಳ ಕುರಿತು, ಮಾಹಿತಿಯನ್ನು ಒದಗಿಸುತ್ತಾ ಪ್ರಮುಖವಾಗಿ ಕೊಪ್ಪಳ ಜಿಲ್ಲೆಯ ಕೋಮು-ಸೌಹಾರ್ದತೆಯ ನೆಲೆಗಳನ್ನು ಗುರುತಿಸಿ ಅವು ಬೆಳೆಸಿಕೊಂಡು ಬಂದ ಈ ಎಲ್ಲಾ ಅಂಶಗಳನ್ನು ಪ್ರಸ್ತುತ ಅಧ್ಯಯನಗಳಲ್ಲಿ ಅಳವಡಿಸಿಕೊಂಡು ಕೊಪ್ಪಳ ಜಿಲ್ಲೆಯಲ್ಲಿನ ಕೋಮು ಸೌಹಾರ್ದತೆಯ ತಾಣಗಳಲ್ಲಿ ನಡೆಯುತ್ತಿರುವ ಆಚರಣೆ, ಸಂಪ್ರದಾಯ ಇಲ್ಲಿಯ ಭಕ್ತರ ಧಾರ್ಮಿಕ ಭಾವನೆಗಳನ್ನು ಹಿಡಿದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇಲ್ಲಿನ ಕೋಮು-ಸೌಹಾರ್ದತೆಯ ತಾಣಗಳು, ಪಂಥಗಳ ಅರ್ಥ, ಉದ್ದೇಶ ವ್ಯಾಪ್ತಿಗಳನ್ನು ಹೇಳುವ ಸಂದರ್ಭದಲ್ಲಿ ಇದಕ್ಕೆ ಒಂದು ರೀತಿಯಲ್ಲಿ ಮುಖ್ಯವೆನಿಸುವ ಕೋಮು-ಸೌಹಾರ್ದತೆಗೆ ಕಾರಣವಾಗಿರುವ ಅನೇಕ ಹಿಂದೂ-ಮುಸ್ಲಿಂರು ಸೇರಿಕೊಂಡು ಆರಾಧಿಸುವ ಸ್ಥಳಗಳನ್ನು ಮತ್ತು ಅವುಗಳ ಚರಿತ್ರೆಗಳನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಪ್ರಯತ್ನಿಸಲಾಗಿದೆ. ಇಲ್ಲಿ ಅತೀ ಮುಖ್ಯವಾಗಿ ಸೂಫಿಗಳು, ಶರಣರು, ತತ್ವಪದಕಾರರು, ರಾಜಮಹಾರಾಜರು ಕೊಪ್ಪಳ ಜಿಲ್ಲೆಯ ಕೋಮು-ಸೌಹಾರ್ದ ಸಾಮರಸ್ಯಕ್ಕೆ ತುಂಬಾ ಮಹತ್ತರವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಸೂಫಿಗಳು ಧಾರ್ಮಿಕ ಹಾಗೂ ಸಾಮಾಜಿಕವಾಗಿ ತಮ್ಮದೇ ಆದಂತಹ ಪಂಥವನ್ನು ಸ್ಥಾಪಿಸಿ,ಸೌಹಾರ್ದತೆಗಾಗಿ ಶ್ರಮಿಸಿರುವುದನ್ನು ಸಂಶೋಧಿಸಲಾಗಿದೆ.

೨. ಸೂಫಿಗಳು ತಮ್ಮ ಪರಂಪರೆಯ ಉದ್ದಗಲಕ್ಕೂ ಬುದ್ದಿಜೀವಿಗಳು ಮೆಚ್ಚುವಂತಹ ಕೆಲಸ ಕಾರ್ಯಗಳನ್ನು ಮಾಡಿರುವುದನ್ನು ಗಮನಿಸಿ ವ್ಯಾಖ್ಯಾನಿಸಲಾಗಿದೆ.

೩. ಧಾರ್ಮಿಕ ಕಲಹಗಳು ಹಾಗೂ ಜನಾಂಗೀಯ ಕಲಹಗಳನ್ನು ಹತೋಟಿಗೆ ತರುವಲ್ಲಿ ಸೂಫಿಗಳ ಪಾತ್ರವು ಬಹುಮುಖ್ಯವಾಗಿದೆಂಬುದನ್ನು ಹಿಡಿದಿಡಲಾಗಿದೆ..

೪. ಸೂಫಿಗಳ ಅಮರವಾಣಿಯು ಹೆಚ್ಚಾಗಿ ಸರ್ವದೇವತಾವಾದದ ನಿಲುವುಗಳನ್ನು ಬೆಳೆಸಿರುವುದನ್ನು ಕಂಡುಕೊಳ್ಳಲಾಗಿದೆ.

೫. ಅವರ ವಾಣಿಗಳು ಸಮಾಜವನ್ನು ನೀತಿಮಾರ್ಗದತ್ತ ಕೊಂಡೊಯ್ಯುವಲ್ಲಿ ಪ್ರೇರಕ ಶಕ್ತಿಯಾಗಿರುವುದನ್ನು ಗುರುತಿಸಲಾಗಿದೆ.

೬. ಇಲ್ಲಿನ ತಾಣಗಳು ಪ್ರೇಮ ಮತ್ತು ಮೂಲಭೂತ ತತ್ವಗಳನ್ನು ಭೋಧಿಸುತ್ತಿರುವ ಅಂಶಗಳನ್ನು ಕಂಡುಕೊಳ್ಳಲಾಗಿದೆ.

೭. ದೇವರು ಮತ್ತು ವ್ಯಕ್ತಿಗಳ ನಡುವೆ ಇರುವ ನಿಜವಾದ ಧರ್ಮವನ್ನು ವ್ಯಕ್ತಪಡಿಸಿರುವ ಸಂತರ ಸಾಧನೆಯು ಇದರಲ್ಲಿದೆ.

೮. ಇಲ್ಲಿನ ಸಂತರು ಲಿಂಗವನ್ನು ವಿರೋಧಿಸಿ ಮಾನವೀಯತೆಗೆ ನೀಡಿರುವ ಶ್ರೇಷ್ಠತೆಯನ್ನು ಪತ್ತೆ ಹಚ್ಚಲಾಗಿದೆ.

೯. ಕೋಮು ಗಲಭೆಗಳನ್ನು ಬದಿಗೊತ್ತಿ ಸೌಹಾರ್ದತೆಯನ್ನು ಬೆಳೆಸುವ ತಾಣಗಳ ಹಿರಿಮೆಯನ್ನು

ಮೆರೆಯಲಾಗಿದೆ.

೧೦. ಜನರಲ್ಲಿ ಪ್ರೇಮ, ವಿಶ್ವಾಸ ಹಾಗೂ ನಂಬಿಕೆಯನ್ನು ಸ್ವಪ್ರಯತ್ನಕ್ಕೆ ಬಿಡುತ್ತವೆಂಬುದನ್ನು ತಿಳಿಸಲಾಗಿದೆ.

೧೧. ಸಮುದಾಯ-ಸಮುದಾಯಗಳಲ್ಲಿರುವ ಗುಂಪು, ಪಂಗಡಗಳಲ್ಲಿಯ ಪರಸ್ಪರ ಸಹೃದಯತೆ, ಸ್ನೇಹಪರತೆ ಹಾಗೂ ಸಹಕಾರ ಸೌಜನ್ಯವನ್ನು ಬೆಳೆಸಿರುವ ತಾಣಗಳ ಕುರಿತ ಸಂಶೋಧನಾತ್ಮಕವಾಗಿ ಅವಲೋಕಿಸಲಾಗಿದೆ.

೧೨. ಹಬ್ಬ-ಹರಿದಿನ ಹಾಗೂ ಉರುಸುಗಳಲ್ಲಿ ಎಲ್ಲಾ ಸಮುದಾಯಗಳು ಒಂದೇ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿರುವ ಅಂಶಗಳನ್ನು ಕಂಡುಕೊಳ್ಳಲಾಗಿದೆ.

೧೩. ರಾಮ ಮತ್ತು ರ಼ಹೀಮರು ಬೇರೆಯಲ್ಲ, ಅವರು ಮಾನವರ ರಕ್ಷಣೆ ಹಾಗೂ ಉಳಿವಿಗಾಗಿ ಪ್ರಯತ್ನಿಸಿದ್ದಾರೆ ಎಂಬುದನ್ನು ತಿಳಿಸುವ ಸಂತರ ಸತ್ಯದ ಭಾವಗಳನ್ನು ಪರಿಚಯಿಸಲಾಗಿದೆ.

೧೪. ಸೂಫಿ ಸಂತರು ಸಂಪ್ರದಾಯ ಭದ್ದರಾಗಿದ್ದರೂ, ಧರ್ಮದ ದೃಷ್ಟಿಯಿಂದ ಅತ್ಯಂತ ನಿಷ್ಠುರವಾಗಿದ್ದರು ಎಂಬ ವಾದವನ್ನು ವಿವರಿಸಲಾಗಿದೆ.

೧೫ ಫಕೀರರು, ಸಂತರು, ಕ್ರೈಸ್ತರು ಮುಂತಾದ ಧಾರ್ಮಿಕ ಅನುಯಾಯಿಗಳು ತಮ್ಮದೇ ಆದ ಧರ್ಮಗಳ ಅನ್ಯೋನ್ಯತೆಯನ್ನು ಪ್ರತಿಪಾದಿಸಿರುವುದನ್ನು ತಿಳಿಸುತ್ತಾ, ಮೇಲಿನ ಅಂಶಗಳೆಲ್ಲ ಒಂದಲ್ಲಾ ಒಂದು ರೀತಿಯ ಉಪಯುಕ್ತತೆಯನ್ನು ಸಮಾಜಕ್ಕೆ ಒದಗಿ, ಸೌಹಾರ್ದತೆಯ ಸಮಾಜಕ್ಕೆ ನಾಂದಿಯಾಗಬಲ್ಲುದಾಗಿದೆ.

# ★ ಅನುಬಂಧ ★

೧ ನಕ್ಷೆ
೨ ವಕ್ತೃಗಳ ಪಟ್ಟಿ
೩ ಆಕಾರ ಗ್ರಂಥಗಳು
೪ ಛಾಯಚಿತ್ರ

ಜಿಲ್ಲಾಧಿಕಾರಿಗಳಿಂದ ಮಾನ್ಯತೆ ಹೊಂದಿದ ಕೊಪ್ಪಳ ಜಿಲ್ಲೆಯ ಗ್ರಾಮಗಳ ನಕಾಶ



# ವಕ್ತೃಗಳ ಪಟ್ಟಿ

| ಕ್ರ.ಸಂ | ವಕ್ತೃಗಳ ಹೆಸರು | ವಯಸ್ಸು | ಶಿಕ್ಷಣ | ಉದ್ಯೋಗ | ಊರು |
|---|---|---|---|---|---|
| ೧ | ಬಾಷಾಸಾಬ್ | ೩೦ | ೪ನೇ ಕನ್ನಡ | ಮುಜಾವರ | ಮುರಡಿ |
| ೨ | ಉಮೇಶ ಗೌಡ | ೪೨ | ೫ನೇ ಕನ್ನಡ | ಕೃಷಿ | ಮುರಡಿ |
| ೩ | ಕೃಷ್ಣಯ್ಯ ದೇಸಾಯಿ | ೮೫ | ಬಿ.ಎ | ಕೃಷಿ | ಮುರಡಿ |
| ೪ | ಬಸವನ ಗೌಡ ಕಾತರಿಕಿ | ೫೮ | ಮೆಟ್ರಿಕ್ | ರೈತ | ಬಿಸರಳ್ಳಿ |
| ೫ | ಮರಿಯಪ್ಪ ಗೊಡಚಳ್ಳಿ | ೫೮ | ೯ನೇ ಕನ್ನಡ | ರೈತ | ಬಿಸರಳ್ಳಿ |
| ೬ | ಉಮೇಶ ಗೌಡ | ೨೩ | ಪದವಿ | ಸರಕಾರಿ | ಬಿಸರಳ್ಳಿ |
| ೭ | ಶಾಹೀದಾ ಬೇಗಂ | ೨೪ | ಬಿ.ಎಡ್ | ವಿದ್ಯಾರ್ಥಿನಿ | ತಳಕಲ್ |
| ೮ | ಹುಸೇನ್ ಪಾಷಾ | ೩೬ | ಪದವಿ | ಪತ್ರಕರ್ತ | ತಳಕಲ್ |
| ೯ | ಜಿ.ಎನ್.ಪಾಟೀಲ್ | ೬೫ | ಎಮ್.ಎಸ್.ಸಿ | ಪ್ರಾಧ್ಯಾಪಕ | ತಳಕಲ್ |
| ೧೦ | ಅಸ್ರಫ್ ಅಲಿ | ೪೨ | ೮ನೇ | ಮುಜಾವರ | ಯಲಬುರ್ಗಾ |
| ೧೧ | ಮುನಿಯಪ್ಪ ಹುಬ್ಬಳ್ಳಿ | ೬೧ | ಪದವಿ | ಸಾಹಿತಿ | ಯಲಬುರ್ಗಾ |
| ೧೨ | ಸೈಯದ್ ಮೆಹಬೂಬ್ ಖಾದ್ರಿ | ೪೮ | ಮೆಟ್ರಿಕ್ | ಮುಜಾವರ | ಬೆಳಗಟ್ಟಿ |
| ೧೩ | ಶೇಕ್ಷಾವಲಿ ಖಾಜಾಸಾಬ್ | ೨೮ | ಮೆಟ್ರಿಕ್ | ಮುಜಾವರ | ಕಾರಟಗಿ |
| ೧೪ | ಪರಸಪ್ಪ ತೋಟದ | ೬೪ | ಅಶಿಕ್ಷಿತ | ಕೃಷಿ | ಕಾರಟಗಿ |
| ೧೫ | ಸುರೇಶ ಅಂಗಡಿ | ೩೫ | ಮೆಟ್ರಿಕ್ | ಉದ್ಯೋಗಿ | ಕಾರಟಗಿ |
| ೧೬ | ನರಸಪ್ಪ ತೋಟದ | ೬೨ | ಅಶಿಕ್ಷಿತ | ಕೃಷಿ | ಕಾರಟಗಿ |
| ೧೭ | ಡಾ. ಎಸ್.ವಿ.ಡಾಣಿ | ೪೪ | ಎಂ.ಎ ಪಿಎಚ್.ಡಿ | ಪ್ರಾಧ್ಯಾಪಕ | ಕುಷ್ಟಗಿ |
| ೧೮ | ಶರಣಪ್ಪ ಬಾಚಲಾಪೂರ | ೪೫ | ೫ನೇ ಕನ್ನಡ | ವರದಿಗಾರ | ಹನುಮಸಾಗರ |
| ೧೯ | ಮುನಿರಮ್ಮ ಖಾದ್ರಿ | ೩೬ | ಅರಬ್ಬಿ | ಮುಜಾವರ | ಹನುಮಸಾಗರ |
| ೨೦ | ಹುಸೇನ್ ಸಾಬ್ ಮೂಲಿಮನೆ | ೩೮ | ಮೆಟ್ರಿಕ್ | ಸಂಗೀತ ಗಾರ | ಬೆಳಗಟ್ಟಿ |
| ೨೧ | ಜಿಲ್ಲಾನಿ ಸಾಬ್ | ೪೨ | ಮೆಟ್ರಿಕ್ | ಮುಜಾವರ | ಚಿಕ್ಕಜಂತಕಲ್ |
| ೨೨ | ವಲೀ ಸಾಬ್ | ೭೦ | ೭ನೇ ಕನ್ನಡ | ಮುಜಾವರ | ಹೀರೆಜಂತಕಲ್ |
| ೨೩ | ರಮೇಶ ಗಬ್ಬೂರ್ | ೩೬ | ಬಿ.ಎಡ್ | ಗ್ರಂಥ ಪಾಲಕ | ಗಂಗಾವತಿ |
| ೨೪ | ಕನಕಪ್ಪ ಪೂಜಾರ್ | ೫೮ | ಪದವಿ | ಶಿಕ್ಷಕರು | ಗಂಗಾವತಿ |
| ೨೫ | ಸೈಯದ್ ವಲೀ ಸಾಬ್ | ೫೩ | ಮೆಟ್ರಿಕ್ ಉರ್ದು | ಮುಜಾವರ | ತಾವರಗೇರಾ |
| ೨೬ | ಪ್ರಕಾಶ ಕಂದಕೂರ್ | ೪೬ | ೮ನೇ | ಛಾಯಾಚಿತ್ರಕಾರ | ತಾವರಗೇರಾ |
| ೨೭ | ರುದ್ರೇಶ ಕಂಪ್ಲಿ | ೬೪ | ಅಶಿಕ್ಷಿತ | ರೈತ | ತಾವರಗೇರಾ |
| ೨೮ | ಎಚ್.ಎಸ್.ಪಾಟೀಲ್ | ೬೯ | ಎಂ.ಎ | ಸಾಹಿತಿ | ಕೊಪ್ಪಳ |
| ೨೯ | ಡಾ. ಪ್ರಕಾಶ ಬಳ್ಳಾರಿ | ೩೩ | ಎಂ.ಎ ಪಿಎಚ್.ಡಿ | ಪ್ರಾಧ್ಯಾಪಕ | ಕೊಪ್ಪಳ |
| ೩೦ | ಇಬ್ರಾಹಿಮ್ ಕುದರಿಮೂತಿ | ೩೧ | ಎಂ.ಎ ಪಿಎಚ್.ಡಿ | ಪ್ರಾಧ್ಯಾಪಕ | ಕೊಪ್ಪಳ |
| ೩೧ | ಜಿ,ಎಸ್. ಗೋನಾಳ | ೪೦ | ಎಂ.ಕಾಂ | ಸಂಪಾದಕ | ಕೊಪ್ಪಳ (ಮಾದನೂರ) |
| ೩೨ | ಶೀ.ಕಾ.ಬಡಿಗೇರ | ೪೦ | ಎಂ.ಎ | ಪ್ರಾಧ್ಯಾಪಕ | ಕೊಪ್ಪಳ |
| ೩೩ | ಅಕ್ಬರ ಸಿ | ೪೪ | ಪದವಿ | ಸಾಹಿತಿ | ಕೊಪ್ಪಳ |
| ೩೪ | ಡಾ.ಸಿದ್ದಲಿಂಗಪ್ಪ ಕೊಟ್ನಕಲ್ | ೩೭ | ಎಂ.ಎ ಪಿಎಚ್.ಡಿ | ಪ್ರಾಧ್ಯಾಪಕ | ಕೊಪ್ಪಳ |
| ೩೫ | ಮಂಜುನಾಥ ಡೊಳ್ಳಿನ್ | ೩೪ | ಎಂ.ಎ | ವರದಿಗಾರ | ಕೊಪ್ಪಳ |
| ೩೬ | ರವುಫ್‌ಸಾಬ್ ಕಿಲ್ಲೆದಾರ | ೪೫ | ೪ನೇ ಕನ್ನಡ | ತತ್ವಪದಕಾರ | ಬಹದ್ದೂರ ಬಂಡಿ |
| ೩೭ | ರುದ್ರಪ್ಪ ಭಂಡಾರಿ | ೩೪ | ಪತ್ರಿಕಾ ಪದವಿ | ಸಂಪಾದಕ | ಕುಕ್ಕನೂರ |

# ಆಕರ ಗ್ರಂಥಗಳು


| ಕ್ರಸಂ | ಕರ್ತೃ | ಪುಸ್ತಕದ ಹೆಸರು | ಪ್ರಕಾಶಕರು | ವರ್ಷ |
|---|---|---|---|---|
| ೧ | ಅಲ್ಲಮಪ್ರಭು ಬೆಟ್ಟದೂರು / ಹೆಚ್.ಎಸ್. ಪಾಟೀಲ್ | (ಸಂ) ಕೊಪ್ಪಳ ಜಿಲ್ಲಾ ದರ್ಶನ | ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ | ೨೦೦೫ |
| ೨ | ಅಲ್ಲಮಪ್ರಭು ಬೆಟ್ಟದೂರು / ಹೆಚ್.ಎಸ್. ಪಾಟೀಲ್ | (ಸಂ) ತಿರುಳ್ಗನ್ನಡ | ಸ್ಮರಣ ಸಂಚಿಕೆ ೬೨ನೇ ಅ.ಭಾ.ಕ.ಸಾ.ಸ, ಕೊಪ್ಪಳ | ೧೯೯೩ |
| ೩ | ಆನಂದ ತೇಲ್ತುಂಬೆ | ಕೋಮುವಾದಿ ಕಾರ್ಯಾಚರಣೆ ಮತ್ತು ದಲಿತ ಪ್ರತಿಸ್ಪಂದನೆ | ಲಡಾಯಿ ಪ್ರಕಾಶನ, ಗದಗ | ೨೦೧೦ |
| ೪ | ಈಶ್ವರಚಂದ್ರ | ಕೋಮುವಾರು ಸಮಸ್ಯೆ | ನ್ಯಾಷನಲ್ ಬುಕ್ ಟ್ರಸ್ಟ, ಇಂಡಿಯಾ | ೨೦೦೬ |
| ೫ | ಎಸ್.ಎಸ್. ಹಿರೇಮಠ | ಕರ್ನಾಟಕ ದಲಿತ ಸಾಂಸ್ಕೃತಿ ಪರಂಪರೆ | ಸಮತಾ ಪ್ರಕಾಶನ, ಹೊಸಪೇಟೆ | ೧೯೯೩ |
| ೬ | ಎಸ್.ಆರ್.ಭಟ್ | ಕೋಮುವಾದದ ಕರಾಳ ಮುಖಗಳು | ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು | ೨೦೦೫ |
| ೭ | ಎಂ. ಶಂಕರಪ್ಪ ಸಿದ್ಧರಾಮಪುರ | ಶ್ರೀ ಕೊಡೇಕಲ್ ಬಸಪ್ಪಯ್ಯ ಮತ್ತು ವಿರುಪಯ್ಯನವರ ಜೀವನ ಚರಿತ್ರೆ | ಜನತಾ ಪ್ರಿಂಟಿಂಗ್ ಪ್ರೆಸ್ ಶಹಪೂರ, ಗದಗ | ೨೦೦೦ |
| ೮ | ಎನ್. ಮಹಾಂತೇಶ ಬಸಪ್ಪ | ಮಾರೆಪ್ಪ ಚೆನ್ನದಾಸರ ಜೀವನ ಮತ್ತು ಸಾಧನೆ | ಅಪ್ರಕಟಿತ ಎಂ.ಫಿಲ್. ಪ್ರಬಂಧ | ೨೦೦೯ |
| ೯ | ಎಂ.ಆರ್. ಚಲವಾದಿ | ಹೈದ್ರಾಬಾದ ಕರ್ನಾಟಕ ದಲಿತ ಸಾಹಿತ್ಯ | ಸಾಕ್ಷಿ ಪ್ರತಿಷ್ಠಾನ, ಹುಮನಾಬಾದ | ೨೦೧೦ |
| ೧೦ | ಎಂ.ಎಸ್. ಪಾಟೀಲ್ | ಆಯ್ದ ವೈಚಾರಿಕ ಪ್ರಬಂಧಗಳು | ಪ್ರಸಾರಾಂಗ ಗು.ವಿ,ಗುಲಬರ್ಗಾ | ೨೦೦೪ |
| ೧೧ | ಎಚ್.ಟಿ.ಪೋತೆ | ಹೈದರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು | ಅಂಬು ಪ್ರಕಾಶನ, ರಾಯಚೂರು | ೨೦೦೦ |
| ೧೨ | ಕೆ. ವೆಂಕಟೇಶ ಮತ್ತು ಬಿ.ಸರೋಜಾ | ಹೈದ್ರಾಬಾದ್ ಕರ್ನಾಟಕ ವರ್ತಮಾನದ ತಲ್ಲಣಗಳು | ಪಲ್ಲವ ಪ್ರಕಾಶನ, ಬಳ್ಳಾರಿ | ೨೦೦೬ |
| ೧೩ | ಕೆ.ಎಮ್. ಸುರೇಶ | ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ | ೨೦೦೧ |
| ೧೪ | ಕೋ.ಚೆನ್ನಬಸಪ್ಪ | ಭಾರತದಲ್ಲಿ ಕೋಮುದ್ವೇಷ | ಲೋಹಿಯಾ ಪ್ರಕಾಶನ, ಬಳ್ಳಾರಿ | ೨೦೦೯ |
| ೧೫ | ಚನ್ನಬಸವ ಹೀರೆಮಠ | ಕಾವ್ಯನಂದ | ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ | ೨೦೦೫ |
| ೧೬ | ಜ.ಹೋ.ನಾರಾಯಣ ಸ್ವಾಮಿ | ವೇದ ಕುರಾನ್ ಆಚೆಗೆ | ಮಾನವ ಪ್ರಕಾಶನ, ಹಾಸನ | ೧೯೮೮ |
| ೧೭ | ಚಂದ್ರಕಾಂತ ಕರದಳ್ಳಿ | ಖ್ವಾಜಾ ಬಂದಾನವಾಜರು | ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ | ೨೦೦೮ |

| | | | | |
|---|---|---|---|---|
| ೧೮ | ಜಿ.ವಿ. ಆನಂದಮೂರ್ತಿ | ತತ್ವಪದಕಾರರು | ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು | ೧೯೯೬ |
| ೧೯ | ಜಿ.ಎನ್ ಚಕ್ರವರ್ತಿ | ಋಗ್ವೇದದಲ್ಲಿ ವಿಶ್ವಸಾಮರಸ್ಯ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೧೯೯೫ |
| ೨೦ | ಟಿ.ಆರ್ ಚಂದ್ರಶೇಖರ್ | ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ | ೧೯೯೯ |
| ೨೧ | ದಸ್ತಗೀರ್‌ಸಾಬ್ ದಿನ್ನಿ | ಜಾಗತೀಕರಣ ಮತ್ತು ಸಂಸ್ಕೃತಿ | ಕನಸು ಪ್ರಕಾಶನ ರಾಯಚೂರು | ೨೦೦೪ |
| ೨೨ | ದಸ್ತಗೀರ್ ಅಲ್ಲೀಬಾಯಿ | ಮೊಹರಂ ಪದಗಳು | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೧೯೯೯ |
| ೨೩ | ನೆಲಾಗಣಿ ಮಹಾಂತೇಶ ಬಸಪ್ಪ | ಮಾರೆಪ್ಪ ಚಿನ್ನದಾಸರ ಜೀವನ ಮತ್ತು ಸಾಧನೆ | ಅಪ್ರಕಟಿತ ಎಂ.ಫಿಲ್ ಪ್ರಬಂಧ | ೨೦೦೯ |
| ೨೪ | ಪ್ರಕಾಶ ಬಳ್ಳಾರಿ | ಕೊಪ್ಪಳ ಜಿಲ್ಲೆಯ ಮೊಹರಂ ಪದಗಳ ಒಂದು ಅಧ್ಯಯನ | ಅಪ್ರಕಟಿತ ಎಂ.ಫಿಲ್ ಪ್ರಬಂಧ | ೨೦೦೭ |
| ೨೫ | ಪ್ರಕಾಶ ಬಳ್ಳಾರಿ | ಕುದರಿಮೋತಿ ಮೊಹರಂ ಆಚರಣೆ ಮತ್ತು ಅಲೆಮಾರಿ ಜನಾಂಗಗಳು | ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ | ೨೦೧೦ |
| ೨೬ | ಫಕೀರ ಮಹಮ್ಮದ್ ಕಟ್ಪಾಡಿ | ಸೂಫಿ ಸಂತರು | ಅಂಕಿತ ಪುಸ್ತಕಾಲಯ, ಬೆಂಗಳೂರು | ೨೦೧೦ |
| ೨೭ | ಬರಗೂರು ರಾಮಚಂದ್ರಪ್ಪ | ಸಾಹಿತ್ಯ ಮತ್ತು ರಾಜಕಾರಣ | ಕನ್ನಡ ಪುಸ್ತಕ ಪ್ರಾಧೀಕಾರ ಬೆಂಗಳೂರು | ೧೯೮೧ |
| ೨೮ | ಬಸವರಾಜ ಸಬರದ | (ಸಂ) ಹೈದ್ರಾಬಾದ್ ಕರ್ನಾಟಕದ ತತ್ವಪದಗಳು | ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ | ೨೦೦೦ |
| ೨೯ | ಮೈನುದ್ದೀನ ರೇವಡಿಗಾರ | ಕೋಮುವಾದ, ನಾಸ್ತಿಕತೆ ಮತ್ತು... | ಹಂಬಲ ಪ್ರಕಾಶನ ಬಾಗಲಕೋಟೆ | ೨೦೦೯ |
| ೩೦ | ರಘುನಾಥ ರಾವ್ | ತತ್ವಪದಕಾರರು ಮತು ವಸಹಾತುಶಾಹಿ ವ್ಯವಸ್ಥೆ | ನವಕರ್ನಾಟಕ ಪಬ್ಲಿಕೇಶನ್ಸ್ ಬೆಂಗಳೂರು | ೧೯೮೧ |
| ೩೧ | ರಮಜಾನ್ ದರ್ಗಾ | ಸಾಹಿತ್ಯ ಮತ್ತು ಸಮಾಜ | ಭಾರತೀ ಪ್ರಕಾಶನ, ಮೈಸೂರು | ೧೯೮೨ |
| ೩೨ | ರಾಮ್‌ಪೂನಿಯಾನಿ | ಕೋಮುವಾದ ಒಂದು ಸಚಿತ್ರ ದರ್ಶನ | ಕರ್ನಾಟಕ ಕೋಮು ಸೌಹಾರ್ದ ವೇದಿಕೆ | ೨೦೦೭ |
| ೩೩ | ರಹಮತ್ ತರೀಕೆರೆ | ಕತ್ತಿಯಂಚಿನ ದಾರಿ | ಅಭಿನವ ಪ್ರಕಾಶನ, ಬೆಂಗಳೂರು | ೨೦೦೬ |
| ೩೪ | ರಹಮತ್ ತರೀಕೆರೆ | ಕರ್ನಾಟಕದ ಸೂಫಿಗಳು | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ | ೧೯೯೮ |
| ೩೫ | ರಹಮತ್ ತರೀಕೆರೆ | ಧರ್ಮಪರೀಕ್ಷೆ ರಾಜಕಾರಣ–ಧರ್ಮ–ಸಂಸ್ಕೃತಿ ಚಿಂತನೆಗಳು | ನವಕರ್ನಾಟಕ ಪ್ರಕಾಶನ | ೨೦೧೦ |
| ೩೬ | ರಾಗೌ | (ಸಂ) ಸರ್ವಜ್ಞನ ವಚನಗಳು | ಕನ್ನಡ ಮಸ್ತಕ ಪ್ರಾಧಿಕಾರ, ಬೆಂಗಳೂರು | ೨೦೦೩ |

| | | | | |
|---|---|---|---|---|
| ೩೭ | ವಾಲೀಕಾರ ಚೆನ್ನಣ್ಣನ | ಜಾನಪದ ಲೋಕ | ದಲಿತ ಬಂಡಾಯ ವಿಚಾರ ಪ್ರಚಾರ ಸಮೀತಿ, ಗುಲ್ಬರ್ಗಾ | ೧೯೯೩ |
| ೩೮ | ವೀರಣ್ಣ ದಂಡೆ | ದೇಸಿ ದೃಷ್ಟಿ | ಕವಿಮಾರ್ಗ ಪ್ರಕಾಶನ, ಕಲಬುರ್ಗಿ | ೨೦೦೧ |
| ೩೯ | ವೀರಣ್ಣ ದಂಡೆ | (ಸಂ) ಸುವರ್ಣ ಜಾನಪದ ಲೇಖನಗಳ | ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು | ೨೦೦೬ |
| ೪೦ | ವಿ.ರಾಘವೇಂದ್ರ ರಾವ್ | ಹಿಂದೂ ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರುಗಳು | ಮೈಸೂರು ವಿಶ್ವವಿದ್ಯಾಲಯ, ಮೈಸೂರು | ೧೯೪೫ |
| ೪೧ | ವೆಂಕಟೇಶ ಇಂದವಾಡಿ | ಮಂಟೇಸ್ವಾಮಿ ಕಾವ್ಯ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ | ೨೦೦೪ |
| ೪೨ | ಶಾಂತರಾಮ್ ಸೋಮಯಾಜೀ | ದೇವರೆಂಬ ಸುಳ್ಳು ಧರ್ಮವೆಂಬ ದ್ವೇಷ | ನವಕರ್ನಾಟಕ ಪ್ರಕಾಶನ, ಬೆಂಗಳೂರು | ೨೦೦೯ |
| ೪೩ | ಶಿವಾನಂದ ಎಸ್. ವಿರಕ್ತಮಠ | ಅಮರ ಕಲ್ಯಾಣ | ನುಡಿ ಪ್ರಕಾಶನ, ಹೊಸಪೇಟ | ೨೦೦೫ |
| ೪೪ | ಷಹಸೀನಾ ಬೇಗಂ | ಕರ್ನಾಟಕ ಮುಸ್ಲಿಂ ಜಾನಪದ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೨೦೦೦ |
| ೪೫ | ಸಿದ್ಧಲಿಂಗಪ್ಪ ಕೊಟ್ನೆಕಲ್ | ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ | ಮೇಘನಾ ಪ್ರಕಾಶನ, ಕೊಪ್ಪಳ | ೨೦೧೦ |
| ೪೬ | ಸುಭಾಷ್ ಭರಣಿ | ಧರೆಗೆ ದೊಡ್ಡವರು | ಡ್ರಾವಿಡ್ ಪಬ್ಲಿಕೇಷನ್, ಮೈಸೂರು | ೨೦೦೫ |
| ೪೭ | ಸೂಗಯ್ಯ ಹಿರೇಮಠ | ತಿಂಥಣಿ ಮೋನಪ್ಪಯ್ಯ | ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ | ೨೦೦೮ |
| ೪೮ | ಹೆಚ್.ಎಸ್.ಪಾಟೀಲ್ | ಸಾಹಿತ್ಯ ಸಂಸ್ಕೃತಿ ಪರಂಪರೆ | ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಕೊಪ್ಪಳ | ೨೦೧೦ |
| ೪೯ | ಹೆಚ್.ತಿಪ್ಪೇರುದ್ರಸ್ವಾಮಿ | ಕನ್ನಡದಲ್ಲಿ ಕೈವಲ್ಯ ಸಾಹಿತ್ಯ | ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮಪಸಾರಕ ಮಂಡಲ - | ೧೯೮೩ |
| ೫೦ | ಹುಲಿಕುಂಟೆ ಮೂರ್ತಿ | ಮಂಟೇಸ್ವಾಮಿ ಪರಂಪರೆ ಕುಲಮೀಮಾಂಸೆ | ಪ್ರಸಾರಾಂಗ ಕನ್ನಡ ವಿ.ವಿ, ಹಂಪಿ | ೨೦೧೦ |
| ೫೧ | ಹೆಚ್.ಟಿ.ಪೋತೆ | (ಸಂ)ಕೋಮು ಸೌಹಾರ್ದತೆ | ಅಂಬು ಪ್ರಕಾಶನ, ರಾಯಚೂರು | ೨೦೦೨ |



ತಳಕಲ್ಲಿನ ಹುಸೇನ್ ಷಾಹವಲಿ/ಫಕೀರಸ್ವಾಮಿ ಉರುಸಿನಲ್ಲಿ ತೆಂಗಿನ ಕಾಯಿ ಒಡೆಯುವ ಹಿಂದೂ ಭಕ್ತಾದಿಗಳು



ತಳಕಲ್ಲಿನ ಹುಸೇನ್ ಷಾಹವಲಿ/ಫಕೀರಸ್ವಾಮಿ ಉರುಸಿನಲ್ಲಿ ಹರಕೆ ಹೊತ್ತ ಹಿಂದೂ ಭಕ್ತಾದಿಗಳು ದೀಡು ನಮಸ್ಕಾರ ಸಲ್ಲಿಸುತ್ತಿರುವುವ ಸಂದರ್ಭದಲ್ಲಿ ಸಂಶೋಧಕ



ಹಾಲವರ್ತಿ ಜಡೇತಾತನವರ ಗದ್ದುಗೆಯ ಗೋಪುರ ಹಿಂದೂ ಹಾಗೂ ಮುಸ್ಲಿಂ ಸೌಹಾರ್ದತೆಯ ಕಮಾನು ಮತ್ತು ಕಳಸ



ಚಿಕ್ಕ ಜಂತಕಲ್‌ನ ಮೈಬುಸುಬಾಸಿ ದರ್ಗಾಕ್ಕೆ ಹರಕೆಯನ್ನು ಸಲ್ಲಿಸಿದ ಭಕ್ತರು ಸಂಪ್ರದಾಯಕವಾಗಿ ಕೀಲಿಪತ್ತ ಹಾಗೂ ಮುಡಿಕಿನ ಬಟ್ಟೆಗಳನ್ನು ಕಟ್ಟಿರುವುದು



ಕುದ್ರಿಮೋತಿಯ ಆಲಮ್ ದರ್ಗಾಕ್ಕೆ ಹರಕೆ ಹೊತ್ತ ಅಲೆಮಾರಿ ಜನಸಮುದಾಯಗಳು ತಮ್ಮ ಹಲವು ಹರಕೆಗಳು ಈಡೇರಿದ್ದರಿಂದ ಮೂರು ದಿನಗಳ ಕಾಲ ನಡೆದ ಉರುಸ್‌ನ ಆವರಣದಲ್ಲಿ ಟೆಂಟ್‌ಗಳನ್ನು ಹಾಕಿ ಕುಟುಂಬ ಸಮೇತರಿರುವುದು.



ಬುಳ್ಳಾಪುರದ ಹಜರತ್ ಮರ್ದಾನ್ ವಲಿ ರಹಿಮತುಲ್ಲಾಹಿ ದರ್ಗಾದ ಮುಜಾವರ್‌ರವರೊಂದಿಗೆ ಸಂದರ್ಶನದಲ್ಲಿ ತೊಡಗಿರುವ ಸಂಶೋಧಕರು



ಕೋಮು ಸೌಹಾರ್ದತೆಗೆ ಸಂಕೇತವಾಗಿರುವ ಕೊಪ್ಪಳದ ಶಿರಸಪ್ಪಯ್ಯನ ಮಠದ ಶಿರಸಪ್ಪಯ್ಯನವರ ಸಮಾಧಿ ಸ್ಥಳ.



ಕೊಪ್ಪಳದ ಖಾದರ್‌ಲಿಂಗ ಹಿರೇಮಸೀದಿಯ ಉರುಸ್‌ನ ದಿನದಂದು, ಬರುವ ವರ್ಷದ ಉರುಸ್‌ನವರೆಗೆ ತಮ್ಮ ಜಾನುವಾರುಗಳಿಗೆ ಯಾವುದೇ ರೋಗಗಳು ತಾಗಬಾರದೆಂದು ದರ್ಗಾಕ್ಕೆ ಐದು ಸುತ್ತು ಪ್ರದಕ್ಷಣೆ ಹಾಕಿಸುತ್ತಿರುವುದು.



ಬಹದ್ದೂರ ಬಂಡಿಯ ಯಮನೂರಸಾಬ್ ದರ್ಗಾದ ಉರುಸ್‌ನಲ್ಲಿ ಹಿಂದೂ ಭಕ್ತಾಧಿ ಸ್ತ್ರೀ–ಪುರುಷರು ತಮ್ಮ ಹರಕೆಯಂತೆ ದೀಡ್ ನಮಸ್ಕಾರ ಹಾಕುತ್ತಿರುವರು.



ಬಹದ್ದೂರ ಬಂಡಿಯ ದರ್ಗಾದ ಉರುಸಿನ ರಾತ್ರಿಯಲ್ಲಿ ಎಣ್ಣೆಯಿಲ್ಲದೇ ನೀರಿನಿಂದಲೇ ಪಂಜು ಉರಿಸುವ ಭಕ್ತಿಯಲ್ಲಿ ತೊಡಗಿರುವ ಹಿಂದೂ – ಇಸ್ಲಾಂ ಕೋಮಿನ ಸಮೂಹ.



ತಳಕಲ್‌ನ ಹಜರತ್ ಹುಸೇನ್ ಪಾಹವಲಿ ದರ್ಗಾಕ್ಕೆ ಹರಕೆ ನೆರವೇರಿಸಿಕೊಂಡ ಗ್ರಾಮದ ನೀಲನಗೌಡರ ಮಗಳು ಗಂಗಮ್ಮ ಕಟ್ಟಿಸಿಕೊಟ್ಟ ಹೊರ ಕಮಾನು.



ತಳಕಲ್‌ನ ಷಹಾವಲಿಯವರ ಉರುಸ್‌ನಲ್ಲಿ ಪಕ್ಕದ ತಾಲ್ಲೂಕಿನ ಮುಂಡರಗಿಯ ಕನಕೇಶ್ವರ ಯುವಕ ತಂಡದವರು ಕೋಲಾಟದಲ್ಲಿ ತೊಡಗಿ, ಬಂದ ಭಕ್ತರ ಭಕ್ತಿಯ ಹಸಿವನ್ನು ತಣಿಸಿದರು.



ಹಾಲವರ್ತಿ ಜಡೇತಾತನವರು ತಪಸಗೈದ ಗವಿಯ ಪ್ರವೇಶ ದ್ವಾರ



ತಳಕಲ್ಲಿನ ಹುಸೇನ್ ಷಾಹವಲಿ/ಫಕೀರಪ್ಪಜ್ಜನ ಉರುಸಿನಲ್ಲಿ ಹಿಂದೂ, ಇಸ್ಲಾಂ ಭಕ್ತರು ಪೂಜೆಯಲ್ಲಿ ಪಾಲ್ಗೊಂಡಿರುವುದು



ತಾವರಗೇರಾದ ಸೈಯದ್ ಷಾಹ ಶಮಿನುದ್ದೀನ್ ಖಾದ್ರಿ ದರ್ಗಾಕ್ಕೆ ಹರಕೆ ಹೊತ್ತು ಹೆಣ್ಣು ಸಂತಾನ ಭಾಗ್ಯ ಪಡೆದ ಸಿಂಧನೂರು ಪಟ್ಟಣದ ರಾಜಶೇಖರ ಹಾಗೂ ದಂಪತಿ ಪದ್ಮಮ್ಮರವರು – ದರ್ಗಾಕ್ಕೆ ದೇಣಿಗೆಯಾಗಿ ಕಬ್ಬಿಣದ ಸರಳು ದ್ವಾರವನ್ನು ಮಾಡಿಸಿರುವುದು ಹಾಗೂ ಹಿಂದೂಗಳ ಮದುವೆ ಸಮಾರಂಭಕ್ಕಾಗಿ ಹಾಕಲಾಗಿರುವ ಪೆಂಡಾಲ.



ತಾವರಗೇರಾದ ಈ ದರ್ಗಾಕ್ಕೆ ಊರಿನ ಸರ್ವಧರ್ಮೀಯರು ದೇಣಿಗೆ ನೀಡಿ ಪ್ರವೇಶ ದ್ವಾರವನ್ನು ನಿರ್ಮಿಸಿ ಸೌಹಾರ್ದತೆಯನ್ನು ಮೆರೆದದ್ದು.



ಕೊಪ್ಪಳ ನಗರದ ರಾಜಾಭಕ್ಷಿ ದರ್ಗಾಕ್ಕೆ ಪೂಜೆಗಾಗಿ ಹಿಂದೂ ಹಾಗೂ ಇಸ್ಲಾಂ ಸ್ತ್ರೀ ಭಕ್ತರು ಗುರುವಾರದಂದು ಪೂಜೆಯಲ್ಲಿ ತೊಡಗಿರುವುದು.



ಮುರಡಿ ಗ್ರಾಮದ ಯಮನೂರ್‌ಸ್ವಾಮಿ ದರ್ಗಾದ ಉರುಸ್‌ನ ಗಂಧದ ಕಾರ್ಯವು ವೆಂಕಟರಾವ್ ದೇಸಾಯಿಯವರ ನೇತೃತ್ವದಲ್ಲಿ ನಡೆದಿದ್ದು ದರ್ಗಾದ ಮುಜಾವರ್ ಭಾಷಾಸಾಬ್‌ರು ಪೂಜಾ ಕಾರ್ಯದಲ್ಲಿ ತೊಡಗಿರುವುದು.



ತಳಕಲ್‌ನ ಹಜರತ್ ಪಾಹವಲಿ ಉರುಸ್‌ನ ಸಂಭ್ರಮದ ಆಚರಣೆಯಲ್ಲಿ ತೊಡಗಿರುವ ಹಿಂದೂ – ಇಸ್ಲಾಂ ಸ್ತ್ರೀ-ಪುರುಷರು.




ಕೊಪ್ಪಳದ ಶಿರಸಪ್ಪಯ್ಯನ ಮಠದ ಪ್ರವೇಶ ದ್ವಾರದ ಫಲಕವು ಕನ್ನಡಾಕ್ಷರದಿಂದ ಕೂಡಿದ್ದು ಇಸ್ಲಾಂ ಅರ್ಥಗಳನ್ನು ಹೊಂದಿ ಸೌಹಾರ್ದತೆಗೆ ಸಂಕೇತವಾಗಿದೆ.



ಯಲಬುರ್ಗಾದ ಬಾಬಾ ಹಸರಫ್ ಅಲಿ ದರ್ಗಾಕ್ಕೆ ಹರಕೆ ಹೊತ್ತ ಭಕ್ತರು ತೆಂಗಿನಕಾಯಿಯೊಂದಿಗೆ ಪೂಜೆ ಸಲ್ಲಿಸಿರುವುದು.



ತಾವರಗೇರಾದ ಸೈಯದ್ ಷಾಹ ಹಮಿನುದ್ದೀನ್ ಖಾದ್ರಿ ದರ್ಗಾದ ದ್ವಾರದ ಕಮಾನನ್ನು ನೂರಾರು ವರ್ಷಗಳ ಹಿಂದೆ ಊರಿನ ಸರ್ವಗಣಾಂಗಳು ಸೇರಿ ಕಟ್ಟಿರುವುದು. ಬರುವ ಭಕ್ತರಿಗೆ ಕಾಯಿ, ಕರ್ಪೂರ, ಊದುಬತ್ತಿಯಂತಹ ಪೂಜಾ ಸಾಮಗ್ರಿ ಮಾರುತ್ತಿರುವ ಮಹಿಳೆ.



ಮುರುಡಿಯ ಯಮನೂರುಸ್ವಾಮಿ ದರ್ಗಾಕ್ಕೆ ಹರಕೆ ಒತ್ತ ಭಕ್ತಳೊಬ್ಬಳು ದೀಡು ನಮಸ್ಕಾರ ಹಾಕುತ್ತಿರುವುದು



ಹನುಮಸಾಗರದ ಸೈಯದ್ ಷಾಹ ಅಬ್ದುಲ್ ಹಸನ್ ಖಾದ್ರಿ ದರ್ಗಾದ ಮುಜಾವರ ವಂಶಸ್ಥರ ಸಮಾಧಿಗಳು



ಯಲಬುರ್ಗಾದ ಹಸರಫ್ ಅಲಿ ದರ್ಗಾದ ಮೇಲಿನ ಚಪ್ಪರವು ಹಿಂದೂ ಭಕ್ತಾದಿಗಳಿಂದ ಸಿದ್ಧಗೊಂಡಿದ್ದು, ಪ್ರತಿ ಅಮವಾಸ್ಯೆಯ ದಿನದಂದು ಇಲ್ಲಿ ವಿಶೇಷ ಪೂಜೆ ಜರಗುವುದು.



ಬಿಸರಳ್ಳಿಯ ಸೈಯದ ಷಹಾ ಅಲಿ ಖಾದ್ರಿ ದರ್ಗಾದ ಕಟ್ಟಡವು ಗ್ರಾಮದ ಸಮುದಾಯದವರು ನೀಡಿದ ದೇಣಿಗೆಯಿಂದ ನಿರ್ಮಾಣಗೊಂಡಿದ್ದು, ಇದರ ಅಂಗಳದಲ್ಲಿ ಬೆಳೆದಿರುವ ಹುಣಸೇ ಮರಕ್ಕೆ ೩೦೦ ನೂರು ವರ್ಷಗಳ ಇತಿಹಾಸವಿದೆ. ಅಷ್ಟೇ ಕಾಲ ದರ್ಗಾಕ್ಕೂ ಇವೆ.

